# ಗೋಪಂಗಿ ಸಮುದಾಯ : ಒಂದು ಅಧ್ಯಯನ

ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪಿಎಚ್.ಡಿ ಮಹಾಪ್ರಬಂಧ

ಸಂಶೋಧಕ

ಮಾರುತಿ .ವಿ.ಎಸ್

ಮಾರ್ಗದರ್ಶಕರು

ಡಾ.ಹಿ.ಚಿ. ಬೋರಲಿಂಗಯ್ಯ

ಪ್ರಾಧ್ಯಾಪಕರು ಮತ್ತು ಮುಖ್ಯಸ್ಥರು

ಬುಡಕಟ್ಟು ಅಧ್ಯಯನ ವಿಭಾಗ



ಸಮಾಜ ವಿಜ್ಞಾನಗಳ ನಿಕಾಯ

ಬುಡಕಟ್ಟು ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೨

# ಗೋಸಂಗಿ ಸಮುದಾಯ : ಒಂದು ಅಧ್ಯಯನ

ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪಿಎಚ್.ಡಿ ಮಹಾಪ್ರಬಂಧ


ಸಂಶೋಧಕ

**ಮಾರುತಿ .ವಿ.ಎಸ್**

ಮಾರ್ಗದರ್ಶಕರು

**ಡಾ.ಹಿ.ಚಿ. ಬೋರಲಿಂಗಯ್ಯ**

ಪ್ರಾಧ್ಯಾಪಕರು ಮತ್ತು ಮುಖ್ಯಸ್ಥರು

ಬುಡಕಟ್ಟು ಅಧ್ಯಯನ ವಿಭಾಗ








ಸಮಾಜ ವಿಜ್ಞಾನಗಳ ನಿಕಾಯ

ಬುಡಕಟ್ಟು ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬



೨೦೦೨

# ದೃಢೀಕರಣ ಪತ್ರ

ಶ್ರೀ ಮಾರುತಿ .ವಿ.ಎಸ್ ಇವರು **ಗೋಸಂಗಿ ಸಮುದಾಯ : ಒಂದು ಅಧ್ಯಯನ** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗಕ್ಕೆ ಪಿಎಚ್.ಡಿ ಪದವಿಗಾಗಿ ಈ ಮಹಾಪ್ರಬಂಧವನ್ನು ಸಲ್ಲಿಸಲಾಗುತ್ತಿದೆ. ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಅಥವಾ ಇತರ ಉದ್ದೇಶಗಳಿಗಾಗಿ ಬಳಸಿಕೊಂಡಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : 20-6-2009
ಸ್ಥಳ : ವಿದ್ಯಾರಣ್ಯ

ಡಾ.ಹಿ.ಚಿ. ಬೋರಲಿಂಗಯ್ಯ
ಮಾರ್ಗದರ್ಶಕರು ಹಾಗೂ ಪ್ರಾಧ್ಯಾಪಕರು
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಪ್ರಮಾಣ ಪತ್ರ

**ಗೋಸಂಗಿ ಸಮುದಾಯ : ಒಂದು ಅಧ್ಯಯನ** ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಡಾ.ಹಿ.ಚಿ.ಬೋರಲಿಂಗಯ್ಯ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಈ ಮಹಾಪ್ರಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿ ಅಥವಾ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ :

ಸ್ಥಳ : ವಿದ್ಯಾರಣ್ಯ

**ಮಾರುತಿ .ವಿ.ಎಸ್**

ಸಂಶೋಧಕ

ಬುಡಕಟ್ಟು ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

## ಯಾರ್ಯಾರ ನೆನೆಯಾಲಿ...

**ಕ**ನ್ನಡ ವಿಶ್ವವಿದ್ಯಾಲಯದ ಕುಲಪತಿಗಳಾದ ಡಾ.ಎಚ್.ಜೆ. ಲಕ್ಕಪ್ಪಗೌಡ ಅವರಿಗೆ, ಕುಲಸಚಿವರಾದ ಡಾ. ಕೆ.ವಿ. ನಾರಾಯಣ ಹಾಗೂ ಅಧ್ಯಯನಾಂಗದ ನಿರ್ದೇಶಕರಾದ ಡಾ. ಕರೀಗೌಡ ಬೀಚನಹಳ್ಳಿ ಅವರಿಗೆ ತುಂಬು ಹೃದಯದ ಕೃತಜ್ಞತೆಗಳು ಸಲ್ಲುತ್ತವೆ. ಕನ್ನಡ ವಿಶ್ವವಿದ್ಯಾಲಯದ ಆರಂಭದ ಹಂತದಿಂದಲೂ ನನ್ನನ್ನು ಕುತೂಹಲದ ಕಣ್ಣುಗಳಿಂದ ನೋಡುವಂತೆ ಮಾಡಿದ ಪ್ರಥಮ ಕುಲಪತಿಗಳಾದ ಕನಸುಗಾರ ಡಾ.ಚಂದ್ರಶೇಖರ ಕಂಬಾರರನ್ನ, ಪಿಎಚ್.ಡಿ ಅಧ್ಯಯನಕ್ಕೆ ಅವಕಾಶ ಕಲ್ಪಿಸಿಕೊಟ್ಟ. ಡಾ.ಎಂ.ಎಂ. ಕಲಬುರ್ಗಿಯವರನ್ನು ಕೃತಜ್ಞತೆಯಿಂದ ನೆನೆಯುತ್ತೇನೆ.

ಮಹಾಪ್ರಬಂಧದ ರಚನೆಯ ಪ್ರತಿಹಂತದಲ್ಲೂ ನನ್ನನ್ನು ಪ್ರೋತ್ಸಾಹಿಸಿ ಆತ್ಮೀಯವಾಗಿ ನಡೆಸಿಕೊಂಡು, ಸೂಕ್ತ ಸಲಹೆಗಳನ್ನು ನೀಡಿ ಮಾರ್ಗದರ್ಶನ ಮಾಡಿದ ಡಾ. ಹಿ.ಚಿ. ಬೋರಲಿಂಗಯ್ಯ ಅವರಿಗೆ ಯಾವತ್ತೂ ಕೃತಜ್ಞ. ನನ್ನ ಅಧ್ಯಯನಕ್ಕೆ ಬೇಕಾದ ಪ್ರಶ್ನಾವಳಿಯನ್ನು ಸಿದ್ಧಪಡಿಸಿ, ಸೂಕ್ತ ಸಲಹೆ ಸಹಕಾರಗಳನ್ನು ನೀಡಿದ ಡಾ.ಕೆ.ಎಂ. ಮೈತ್ರಿ ಇವರಿಗೆ ಹಾಗೂ ಅಧ್ಯಯನದ ವಿಧಿವಿಧಾನಗಳನ್ನು ಹೇಳಿಕೊಟ್ಟು ಅಧ್ಯಯನಕ್ಕೆ ಒಳನೋಟಗಳನ್ನು ನೀಡಿದ ಎ.ಎಸ್. ಪ್ರಭಾಕರ, ಡಾ. ಕೇಶವನ್ ಪ್ರಸಾದ್, ಚಲುವರಾಜು ಅವರಿಗೆ ಕೃತಜ್ಞನಾಗಿದ್ದೇನೆ. ಅಧ್ಯಯನದ ಅವಧಿಯಲ್ಲಿ ಬೆನ್ನುತಟ್ಟಿ ಪ್ರೋತ್ಸಾಹಿಸಿದ ಡಾ. ರಹಮತ್ ತರೀಕೆರೆ, ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್, ಪ್ರೊ. ಲಕ್ಷ್ಮಣ್ ತೆಲಗಾವಿ, ಪ್ರೊ. ಬಿ.ವಿ. ವೀರಭದ್ರಪ್ಪ, ಡಾ.ಎಂ.ಜಿ. ಈಶ್ವರಪ್ಪ, ಖ್ಯಾತ ರಂಗಕರ್ಮಿ, ಸಿ.ಜಿ.ಕೆ, ಡಾ.ಟಿ.ಪಿ. ವಿಜಯ್, ಡಾ. ಮಂಜುನಾಥ ಬೇವಿನಕಟ್ಟಿ, ಡಾ. ಚಂದ್ರಪೂಜಾರ್, ತಾರಕೇಶ್ವರ, ಡಾ.ಕೆ. ರವೀಂದ್ರನಾಥ, ಡಾ.ಬಿ.ಎಂ. ಪುಟ್ಟಯ್ಯ, ಡಾ. ಮಾಧವ ಪೆರಾಜೆ, ಡಾ.ಮೃತ್ಯುಂಜಯ ಹೊರಕೇರಿ, ಡಾ. ಶಾಂತಿನಾಥ್ ದಿಬ್ಬದ್ ಹಾಗೂ ಡಾ. ಸಿ. ನಾಗಭೂಷಣ್ ಅವರನ್ನು ಇಲ್ಲಿ ನೆನೆಸಿಕೊಳ್ಳಲೇಬೇಕು.

ನನ್ನ ವಿದ್ಯಾಭ್ಯಾಸ ಮುಂದುವರಿಯಲು ಕಾರಣೀಭೂತರಾದ ಚಿಕ್ಕಪ್ಪ, ಚಿಕ್ಕಮ್ಮನವರಾದ ಶ್ರೀ.ಆರ್. ತಿಪ್ಪೇಸ್ವಾಮಿ, ಶ್ರೀಮತಿ ಗೌರಮ್ಮ, ಶ್ರೀ. ವಿ. ಕೃಷ್ಣರೆಡ್ಡಿ, ಶ್ರೀಮತಿ ಸುಶೀಲಮ್ಮ, ಅಜ್ಜಿಯವರಾದ ಈರಮ್ಮ, ಅಣ್ಣನವರಾದ ಉಮೇಶ್ ರೆಡ್ಡಿ, ರಘುನಾಥರೆಡ್ಡಿ, ಹಾಗೂ ನಾಗರೆಡ್ಡಿಯವರಿಗೆ ವಿಶೇಷ ಗೌರವ ಸಲ್ಲುತ್ತವೆ. ತಂದೆತಾಯಿಗಳಿಗಿಂತ ಹೆಚ್ಚಿನ ಪ್ರೀತಿಯನ್ನು ತೋರಿ ಪ್ರೋತ್ಸಾಹಿಸಿದ ಚಿತ್ರದುರ್ಗದವರಾದ ಶ್ರೀ.ಎಸ್.ವಿ. ರೆಡ್ಡಿ ಹಾಗೂ ಕುಟುಂಬದವರಿಗೆ ತುಂಬಾ ಅಭಾರಿಯಾಗಿದ್ದೇನೆ. ಇಲ್ಲಿಯವರೆಗೆ ನಾನು ಓದಲು ಕಾರಣರಾದ ತಂದೆ ವಿ. ಸೀತಾರಾಮರೆಡ್ಡಿ, ತಾಯಿ ಶ್ರೀಮತಿ ತಿಮ್ಮಮ್ಮ ಮತ್ತು ಒಡಹುಟ್ಟಿದ ಮಹೇಶ್‌ರೆಡ್ಡಿ, ನಿರ್ಮಲ, ತ್ರಿವೇಣಿ, ನಾಗವೇಣಿ, ಅತ್ತಿಗೆ ಶ್ರೀಮತಿ ರಾಧ ಹಾಗೂ ದೊಡ್ಡಪ್ಪನವರಾದ ಹೊನ್ನೂರಿನ ಶ್ರೀ.ಹೆಚ್.ವಿ. ಹನುಮಂತರೆಡ್ಡಿ, ಮಾವನವರಾದ ಡಿ.ಎನ್. ತಿಮ್ಮಾರೆಡ್ಡಿ, ಅವರನ್ನು ಪ್ರೀತಿಯಿಂದ ನೆನೆಯುತ್ತೇನೆ.

ನನ್ನನ್ನ ಪ್ರೀತ್ಯಾದಾರಗಳಿಂದ ಕಂಡ ಶ್ರೀಮತಿ ಬಾನುತರೀಕೆರೆ, ಶ್ರೀಮತಿ ಅರುಣಾಜಯಕುಮಾರ್, ಶ್ರೀಮತಿ ಭಾಗ್ಯಪ್ರಭಾಕರ, ಶ್ರೀಮತಿ ದಾಕ್ಷಾಯಿಣಿಮೈತ್ರಿ, ಮತ್ತು ಶ್ರೀಮತಿ ಭಾಗ್ಯಲಕ್ಷ್ಮಿರಂಚೇರೆ, ಇವರೆಲ್ಲರಿಗೂ ವಿಶೇಷ ಕೃತಜ್ಞತೆಗಳು ಸಲ್ಲುತ್ತವೆ.

ನನ್ನ ಅಧ್ಯಯನಕ್ಕೆ ಕಾರಣೀಭೂತರಾದ ಹಾಗೂ ಹಿರಿಯರೂ ಆದ ಕುಮಾರಸ್ವಾಮಿಯವರಿಗೆ, ನನ್ನವರೇ ಆದ ಡಾ.ಎಂ.ಎಸ್.ರೆಡ್ಡಿ, ಮಂಜುನಾಥರೆಡ್ಡಿ, ಜಿ.ಎನ್. ಅಂಗಡಿ ಬಸವರಾಜ್, ಹುಲ್ಲಪ್ಪ ಸೋಬಾನದ ಹಾಗೂ ದಾವಣಗೆರೆಯ, ಚೇತನಾ ಫೈನಾನ್ಸ್‌ನ ಶ್ರೀ ಎಂ.ವಿ. ಶ್ರೀನಿವಾಸರೆಡ್ಡಿಯವರಿಗೆ ತುಂಬು ಹೃದಯದ ಕೃತಜ್ಞತೆಗಳು ಸಲ್ಲುತ್ತವೆ.

ಬಂಧುಗಳಿಗಿಂತ ಹೆಚ್ಚಿನ ವಿಶ್ವಾಸವನ್ನು ತೋರಿದ ಡಾ.ಹರಿಶ್ಚಂದ್ರ ಎಸ್. ದಿಗ್ಸಂಗಿಕರ್ ಅವರಿಗೆ ಹಾಗೂ ಶಿವಕುಮಾರ.ಜಿ, ಗ್ಯಾನಪ್ಪ ಬಡಿಗೇರ ಮತ್ತು ಬೋರಯ್ಯ ಗಂಡಿ ಅವರನ್ನು ಯಾವತ್ತೂ ಮರೆಯದಿರಲಾರೆ. ಪ್ರಬಂಧಕ್ಕೆ ಬೇಕಾದ ಪೂರಕ ರೇಖಾಚಿತ್ರಗಳನ್ನು, ಪುಸ್ತಕಗಳನ್ನು ಒದಗಿಸಿದ ಕಲಾವಿದ ಕೆ.ಕೆ.ಮಕಾಳಿ ಹಾಗೂ ಸುಜ್ಞಾನಮೂರ್ತಿಯವರಿಗೆ ಕೃತಜ್ಞತೆಗಳು.

ಪ್ರಬಂಧಕ್ಕೆ ಬೇಕಾದ ಛಾಯಾಚಿತ್ರಗಳನ್ನು ಸುಂದರವಾಗಿ ಅಚ್ಚಿಸಿಕೊಟ್ಟ ಶ್ರೀ.ಎಚ್.ಎಂ. ಸ್ವಾಮಿ ಹಾಗೂ ಕುಟುಂಬದವರನ್ನು ಮರೆಯುವಂತಿಲ್ಲ. ಗೋಸಂಗಿ ಸಮುದಾಯದ ಹಿರಿಯರೂ ಹಾಗೂ ವಕ್ತೃಗಳೂ ಆದ ಶ್ರೀ ಬಾಬು, ಮಾಧವರಾವ್, ಸಿರಿಮಂತ್, ಶಿವಕುಮಾರ್, ದಶರತ್, ನಟರಾಜ, ಧನರಾಜ್ ಹಾಗೂ ಸಮಸ್ತ ಗೋಸಂಗಿ ಬಂಧುಗಳನ್ನು ನೆನೆಯುವುದು ನನ್ನ ಕರ್ತವ್ಯ. ಬುಡಕಟ್ಟು ಅಧ್ಯಯನ ವಿಭಾಗದ ಶ್ರೀಬರಲಿಂಗಪ್ಪ, ಗಣೇಶ್, ಹನುಮಂತರಾಯ ಹಾಗೂ ಬಿ.ಜೆ.ಪಿ. ನಿಂಗಪ್ಪ ಇವರಿಗೆ ಮತ್ತು ಮಿತ್ರರಾದ ಶ್ರೀ. ವೆಂಕೋಬರಾವ್, ಸೂರಿ, ಬಸವರಾಜ್, ವೇಣುಗೋಪಾಲ್ ಅವರನ್ನು ವಿನಮ್ರವಾಗಿ ಸ್ಮರಿಸಿಕೊಳ್ಳುವೆ.

ಹಿರಿಯರಾದ ಜೆ.ಆರ್.ರಾಮಮೂರ್ತಿ, ಮಲ್ಲಿಕಾರ್ಜುನ್, ಗುಡಿಮನಿ, ಸುಹಾಸ್, ನಾಗವೇಣಿ, ನರೇಗಲ್ಲಪ್ಪ ಮತ್ತು ಗ್ರಂಥಾಲಯದ ಇತರೆ ಸಿಬ್ಬಂದಿಗಳು ಆತ್ಮೀಯವಾಗಿ ಸಹಕರಿಸಿದ್ದಾರೆ.

ಸದಾ ನನ್ನ ಹಿತವನ್ನೇ ಬಯಸುವ ಆತ್ಮೀಯರಾದ ದಿನೇಶ್, ಕರಿಸಿದ್ಧನಗೌಡ, ನಾಗಭೂಷಣ ಪಾಟೀಲ್, ಉಮೇಶ್, ಯರಿಸ್ವಾಮಿ, ನಾಗರಾಜ್, ಗೋವಿಂದ, ಚೆನ್ನಪ್ಪ, ಗಿರೀಶ್ ಕುಮಾರ, ಕೃಷ್ಣ, ರಾಜಕುಮಾರ್, ಪಿ.ಕೆ. ಶ್ರೀನಿವಾಸ, ಜಾಜಿ ದೇವೇಂದ್ರಪ್ಪ, ಅನುಸೂಯಾ, ಭಾರತಿ, ನಾದಾಫ್, ಹುಸೇನ್, ಪತ್ರಕರ್ತ ಬಸವರಾಜ್, ನಿಸಾರ್ ಮತ್ತು ರತ್ನಾಕರ ಇವರೆಲ್ಲರ ಪ್ರೀತಿ ವಿಶ್ವಾಸಗಳಿಗೆ ಕೃತಜ್ಞತೆಗಳು.

ನನ್ನ ವಿರಾಟ್ ದಾರಿದ್ರ್ಯವನ್ನ ಸಹಿಸಿಕೊಂಡು ಸುಂದರವಾಗಿ ಅಕ್ಷರ ಸಂಯೋಜನೆ ಮಾಡಿದ ಕಿರಿಯ ಗೆಳಯ ಶರಣನ ಪ್ರೀತ್ಯಾದಾರಗಳನ್ನು ನೆನಪಿಸಿಕೊಳ್ಳುತ್ತೇನೆ.

ಕೃತಜ್ಞತೆಗಳೊಂದಿಗೆ,

ಮಾರುತಿ ವಿ.ಎಸ್.

# ಪರಿವಿಡಿ

ಅಧ್ಯಾಯ - ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವಿಧಾನ

೧. ಭಾರತದ ಬುಡಕಟ್ಟುಗಳ ಸ್ಥಿತಿಗತಿ

೨. ಕರ್ನಾಟಕದ ಬುಡಕಟ್ಟುಗಳ ಸ್ಥಿತಿಗತಿ

೩. ಗೋಸಂಗಿ ಸಮುದಾಯದ ಹಿನ್ನೆಲೆ

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವಿಧಾನ

ಭಾರತವು ವಿವಿಧ ಜನಸಮುದಾಯಗಳು ವಾಸಿಸುವ ನಾಡಾಗಿದ್ದು, ಇಲ್ಲಿಯ ಜನ ಹತ್ತುಹಲವು ಭಾಷೆ, ಜಾತಿ, ಧರ್ಮ, ವೃತ್ತಿಗಳಿಗೆ ಸೇರಿದವರಾಗಿದ್ದಾರೆ. ಬಹುಮುಖಿ ಸಂಸ್ಕೃತಿಯ ತವರೂರಾದ ಭಾರತದಲ್ಲಿ ಹಲವು ಬಗೆಯ ಜೀವನಕ್ರಮಗಳು ಸಮ್ಮಿಲನಗೊಂಡಿವೆ. ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೆ ಪ್ರಾದೇಶಿಕತೆಗೆ ಹೊಂದಿಕೊಂಡಂತೆ ವೈವಿಧ್ಯಮಯ ಬುಡಕಟ್ಟು, ಜಾತಿ, ಭಾಷೆಗಳಿಗೆ ಸೇರಿದ ಜನಸಮುದಾಯಗಳಿವೆ. ಪ್ರತಿಯೊಂದು ಬಡುಕಟ್ಟುಗಳಿಗೆ ಅವುಗಳದೇ ಆದ ಅನನ್ಯತೆಗಳಿವೆ. ಕೆಲವು ಸಾಂಸ್ಕೃತಿಕ ಆಚರಣೆಗಳು ಒಂದು ಬುಡಕಟ್ಟು ಹಾಗೂ ಮತ್ತೊಂದು ಬುಡಕಟ್ಟಿಗೆ ಸಾಮ್ಯವಿರುವಂತೆ ಕಂಡರೂ ಮೂಲತಃ ವ್ಯತ್ಯಾಸಗಳಿವೆ. ಭಾರತದಲ್ಲಿ ಸಾಮಾಜಿಕ ವ್ಯವಸ್ಥೆಯು ಏಣಿಶ್ರೇಣಿಯಿಂದ ಕೂಡಿದ್ದು, ಇಂತಹ ಏಣಿಶ್ರೇಣಿಯ ಅಂಚಿಗಿರುವ ಅಥವಾ ಕಾಡುಗಳಲ್ಲಿ ವಾಸಿಸುವ ಬುಡಕಟ್ಟು ಸಮುದಾಯಗಳ ಬದುಕಿನ ಸ್ಥೂಲನೋಟವನ್ನು ಈ ಅಧ್ಯಾಯದಲ್ಲಿ ನೀಡಲಾಗಿದೆ.

ಇತ್ತೀಚಿನ ದಶಕಗಳಲ್ಲಿ ಕರ್ನಾಟಕದಲ್ಲಿ ಸಂಸ್ಕೃತಿ ಅಧ್ಯಯನ, ಚಿಂತನೆ ಕುರಿತು ತೀವ್ರಗತಿಯಲ್ಲಿ ಅಧ್ಯಯನಗಳು ನಡೆದಿವೆ, ನಡೆಯುತ್ತಲೂ ಇವೆ. ಕನ್ನಡ ಸಾಂಸ್ಕೃತಿಕ ಸಂದರ್ಭದಲ್ಲಿ ಇದೊಂದು ಮಹತ್ವದ ಹಾಗೂ ಉತ್ಕೃಷ್ಟದ ಬೆಳವಣಿಗೆಯನ್ನಲು ಅಡ್ಡಿಯಿಲ್ಲ. ಶುದ್ಧ ಸಾಹಿತ್ಯದ ಅಧ್ಯಯನಗಳಾಚೆಗಿರುವ ಅಥವಾ ಪ್ರಧಾನ ಸಂಸ್ಕೃತಿಯ ಚಿಂತನಧಾರೆಗಳಾಚೆ ಅಲಕ್ಷಿತವಾಗಿರುವ ಸಮುದಾಯಗಳು ಹಾಗೂ ಅವು ಕಟ್ಟಿಕೊಡುವ ಬಹುಮುಖಿ ಆಯಾಮಗಳು ಇತ್ತೀಚಿನ ಅಧ್ಯಯನಗಳಿಗೆ ವಸ್ತುವಿಷಯಗಳಾಗಿ ಪ್ರಾಮುಖ್ಯತೆ ಪಡೆದುಕೊಳ್ಳುತ್ತಿವೆ.

ಸಮಾಜವಿಜ್ಞಾನಗಳಲ್ಲಿ ಮಾನವ ಸಮದಾಯಗಳನ್ನು ವಿವಿಧ ಮಾದರಿಗಳಲ್ಲಿ, ವಿವಿಧ ಉದ್ದೇಶಗಳಿಗಾಗಿ ಅಧ್ಯಯನ ಮಾಡಲಾಗುತ್ತದೆ. ಪ್ರಪಂಚೀಕರಣದ ಪ್ರಸ್ತುತ ಸಂದರ್ಭದಲ್ಲಿ ಅಲಕ್ಷಿತ ಸಮುದಾಯಗಳು, ಅಲಕ್ಷಿತವಾದ ಕ್ಷೇತ್ರದ ವಸ್ತುವಿಷಯಗಳು ಅಧ್ಯಯನಗಳ ಮುಖ್ಯ ಧಾರೆಗೆ ಒಳಪಡುತ್ತವೆ. ಇಂತಹ ಸಂದರ್ಭದಲ್ಲಿ ಅಲಕ್ಷಿತವಾದ ವಸ್ತುವಿಷಯಗಳ ಬಗ್ಗೆ ಅಕಾಡೆಮಿಕ್ ಹಾಗೂ ಅಕಾಡೆಮಿಕೇತರ

ವಲಯಗಳಲ್ಲಿ ಎಂದಿಲ್ಲದ ಆಸಕ್ತಿ ಮೂಡಿದೆ. ಕನ್ನಡದ ಸಂದರ್ಭದಲ್ಲಿ ಜಾನಪದ ವಿದ್ವಾಂಸರು, ಬುಡಕಟ್ಟು ಸಮಾಜದ ಅಧ್ಯಯನಕಾರರು, ಸಂಸ್ಕೃತಿ ಚಿಂತಕರು, ಶಿಕ್ಷಣತಜ್ಞರು ಈ ನಿಟ್ಟಿನಲ್ಲಿ ಅಧ್ಯಯನಗಳನ್ನು ಕೈಗೊಂಡಿದ್ದಾರೆ.

ಭಾರತದಲ್ಲಿ ಬುಡಕಟ್ಟು ಸಮುದಾಯಗಳ ಅಧ್ಯಯನಗಳು ವಸಾಹತುಶಾಹಿ ಕಾಲಘಟ್ಟದಲ್ಲಿ ಆರಂಭಗೊಂಡರೂ ಅವುಗಳ ಕಾರ್ಯಕ್ಷೇತ್ರ, ಹಾಗೂ ಅವುಗಳ ಅಜೆಂಡಾಗಳು (ಕಾರ್ಯಸೂಚಿ) ಇವತ್ತಿನ ಅಧ್ಯಯನಗಳಿಗಿಂತ ಭಿನ್ನವಾಗಿದ್ದವು. ಆರ್ಥಿಕ ಶೋಷಣೆ ವಸಾಹತು ಆಡಳಿತದ ಪ್ರಮುಖ ಧ್ಯೇಯಧೋರಣೆಯಾಗಿತ್ತು. ಬುಡಕಟ್ಟು ಸಮುದಾಯಗಳನ್ನು ಕುರಿತು ವಸಾಹತುಗಳು ಕೈಗೊಡ ಅಧ್ಯಯನಗಳು ಕುತೂಹಲಕಾರಿಯಾದ ಅಂಶಗಳನ್ನೊಳಗೊಂಡಿವೆ. ಯಾಕಾಗಿ ಭಾರತದಂತಹ ತೃತೀಯ ಜಗತ್ತಿನ ದೇಶವೊಂದರ ಸಮುದಾಯಗಳನ್ನ, ಭಾಷೆ, ಧರ್ಮಶಾಸ್ತ್ರ ಗ್ರಂಥಗಳನ್ನ ಅಧ್ಯಯನ ಮಾಡಬೇಕು ಎಂಬುದರ ಕುರಿತು, ವಸಾಹತು ಆಡಳಿತಕ್ಕೆ ಸ್ಪಷ್ಟ ಕಲ್ಪನೆಗಳಿದ್ದವು. ಅವು ಶುದ್ಧ ರಾಜಕೀಯ ಕಾರಣಗಳಿಂದಲೇ ಪ್ರೇರಣೆಗೊಂಡಿದ್ದವು. ಹಲವು ಸಂಸ್ಕೃತಿಗಳ ವೈವಿಧ್ಯಮಯ ಇಂಡಿಯಾವನ್ನು ಆಳಲು ವಸಾಹತು ಆಡಳಿತ ಕೆಲವು ತಂತ್ರಗಳನ್ನು ರೂಪಿಸಿಕೊಳ್ಳಲೇ ಬೇಕಿತ್ತು. ರಾಜಕೀಯವಾಗಿ ಅಸಂಘಟಿತವಾಗಿದ್ದ ಮತ್ತು ಶತಮಾನಗಳಿಂದ ರಾಜಶಾಹಿ ಮತ್ತು ಪುರೋಹಿತಶಾಹಿಗಳಿಂದ ನಿರಂತರವಾಗಿ ಆಳಿಸಿಕೊಂಡು ಬಂದಿದ್ದ, ಇಲ್ಲಿನ ಸಮುದಾಯಗಳ ಭೌತಿಕ ಮತ್ತು ಬೌದ್ಧಿಕ ಬಲಾಬಲಗಳೆರಡೂ ಸುಪ್ತವಾಗಿಯೇ ಇದ್ದವು. ಈಶಾನ್ಯ ಭಾರತದಲ್ಲಿ ಬ್ರಿಟಿಷ್ ಸೈನ್ಯ ಹೀನಾಯವಾಗಿ ಅಲ್ಲಿನ ಆದಿವಾಸಿಗಳಿಂದ ಹೊಡೆಸಿಕೊಂಡು ಹಿಂದುರುಗಿದ ಮೇಲೆ, ವಸಾಹತು ಆಡಳಿತಕ್ಕೆ ಇಂಡಿಯಾದ ಅಂತಃಶಕ್ತಿಯ ಪರಿಚಯವಾಗಿತ್ತು. ಯಾಕೆಂದರೆ ಪೂರ್ವವನ್ನ ಕುರಿತ ಪಶ್ಚಿಮದವರ ಓರಿಯಂಟಲ್ ದೃಷ್ಟಿಕೋನವೇ ಭಾರತವನ್ನು ತಪ್ಪಾಗಿ ಅಳೆಯಲು ಪ್ರೇರೇಪಿಸಿತ್ತು. ಭಾರತದ ಸಮುದಾಯಗಳನ್ನು ಆಳಲು, ಮೊದಲು ಅವುಗಳನ್ನು ಅರ್ಥಮಾಡಿಕೊಳ್ಳಬೇಕು ಎಂಬ ಶುದ್ಧ ಕಪಟ ತಂತ್ರದ ಮೂಲಕವೇ ತಮ್ಮ ಅಧ್ಯಯನ ಕ್ರಮಗಳನ್ನ ರೂಪಿಸಿಕೊಂಡರು. ಈ ಹಿನ್ನೆಲೆಯಲ್ಲಿ ಭಾರತದಲ್ಲಿ ಬುಡಕಟ್ಟುಗಳ ಅಧ್ಯಯನ ಆರಂಭವಾಯಿತು. ಕನ್ನಡದಲ್ಲಿ ಮೊದಮೊದಲು ಬುಡಕಟ್ಟು ಸಮಾಜಗಳ ಅಧ್ಯಯನವು ಓರಿಯಂಟಲ್ (Oriental) ಮತ್ತು ಕಲೋನಿಯಲ್ (Colonioal) ಈ ಎರಡು ಅಧ್ಯಯನ ಮಾದರಿಗಳನ್ನು ಅನುಸರಿಸಿದವು.

ಭಾರತದ ಸಾಂಸ್ಕೃತಿಕ ಚರಿತ್ರೆಯಲ್ಲಿ ಹತ್ತೊಂಬತ್ತನೆಯ ಶತಮಾನದ ಕೊನೆ ಹಾಗೂ ಇಪ್ಪತ್ತನೆಯ ಶತಮಾನದ ಮೊದಲ ದಶಕಗಳು ಸಂಕ್ರಮಣ ಸಂದರ್ಭಗಳನ್ನು ಪರಕೀಯವಾದ ಎದುರಿಸಬೇಕಾಗಿತ್ತು. ರಾಜಕೀಯ ಆಡಳಿತವು ಭಾರತೀಯ ಜೀವನಕ್ರಮದ ಮೇಲೆ ಯಜಮಾನ್ಯವನ್ನು ಹೇರಿದ್ದ ಈ ಸಮಯದಲ್ಲಿ ಭಾರತೀಯ ಸಮಾಜದ ಪಥಸಂಚಲನೆ ಹಲವು ನೆಲೆಗಳಲ್ಲಿ ಹೊಸಹೊಸ ಸ್ವರೂಪಗಳನ್ನು ಪಡೆದುಕೊಂಡಿತು. ಪೂರ್ವಪಶ್ಚಿಮಗಳ ಅನುಸಂಧಾನ ಭಾರತೀಯ ಸಮಾಜವನ್ನು ಸಂಕಷ್ಟಗಳಿಗೆ ಒಳಗುಮಾಡಿದಂತೆ ಸತ್ವಪರೀಕ್ಷೆಗೂ ಒಳಪಡಿಸಿತು. ವಸಾಹತು ಆಡಳಿತವು ಇಲ್ಲಿಯ ನೈಸರ್ಗಿಕ

ಸಂಪನ್ಮೂಲವನ್ನು ಬಳಸಿಕೊಂಡಂತೆ ಗುಡ್ಡಗಾಡಿನ ಆದಿವಾಸಿ ಸಮುದಾಯಗಳನ್ನು ಬಳಸಿಕೊಂಡಿತು. ಹತ್ತೊಂಬತ್ತನೇ ಶತಮಾನದ ಕೊನೆಯ ಹೊತ್ತಿಗೆ ರೂಪಗೊಂಡ ಬ್ರಿಟಿಷ್ ಆಡಳಿತದ ಅರಣ್ಯ ನೀತಿ ಸ್ಪಷ್ಟವಾಗಿ ತನ್ನ ಧೋರಣೆಗಳನ್ನ ಹೊರಹಾಕಿತು. ವಸಾಹತುಶಾಹಿ ಸೈನ್ಯಕ್ಕೆ ಹಲವು ಕಡೆ ಆದಿವಾಸಿಗಳಿಂದ ಮುಖಭಂಗವಾಗಿತ್ತು. ಅದರಲ್ಲೂ ದಂಡಕಾರಣ್ಯದ ಬುಡಕಟ್ಟುಗಳಿಂದ ಬ್ರಿಟಿಷ್ ಸೈನ್ಯ ಅನೇಕ ಬಾರಿ ಸೋತು ಹಿಂದಿರುಗಿತ್ತು. ಆದಿವಾಸಿಗಳ ಗೆರಲ್ಲಾ ಯುದ್ಧ ಮಾದರಿ ಬ್ರಿಟಿಷರನ್ನ ದಿಕ್ಕುತಪ್ಪಿಸಿತ್ತು. ಕಡಿಮೆ ಸಂಖ್ಯೆಯ ಯೋಧರು ಶತ್ರುಗಳನ್ನು ಸುತ್ತುವರೆದು ಇದ್ದಕ್ಕಿದ್ದಂತೆ ಆಕ್ರಮಣ ಮಾಡುವ, ಆದಿವಾಸಿಗಳ ಯುದ್ಧ ತಂತ್ರದಿಂದ ಬ್ರಿಟಿಷ್ ಸೈನ್ಯ ಅಕ್ಷರಶಃ ನಿಬ್ಬೆರಗಾಗಿ ಹೋಗಿತ್ತು. ಅಲ್ಲದೆ ಆದಿವಾಸಿಗಳ ಕಟ್ಟುನಿಟ್ಟಿನ ಸಮುದಾಯ ನಿಷ್ಠೆ ಮತ್ತು ತಮ್ಮ ಅನನ್ಯತೆಗಳ ಕುರಿತು ಅವರಿಗಿರುವ ಅಚಲ ಶ್ರದ್ಧೆಗಳಿಂದಾಗಿ, ಹೊರಗಿನ ವ್ಯಕ್ತಿಗಳನ್ನು ಅವರು ನಡೆಸಿಕೊಳ್ಳುವ ಕ್ರಮಗಳೇ ಕಠೋರವಾಗಿದ್ದವು. ಈ ಬಗೆಯ ಕಠಿಣ ಜೀವನ ಕ್ರಮಗಳನ್ನ ಆದಿವಾಸಿಗಳು ರೂಢಿಸಿಕೊಂಡಿದ್ದೇ ಅರಣ್ಯದ ನೀರವತೆಯಿಂದ. ಅರಣ್ಯದ ಸುಕೋಮಲತೆ ಮತ್ತು ಜಟಿಲತೆಗಳೆರಡೂ ಆದಿವಾಸಿಗಳಿಗೆ ಮೈಗೂಡಿದ್ದವು. ಇದೇ ಕಾರಣಕ್ಕೆ ಅರಣ್ಯ, ಆದಿವಾಸಿಗಳ ಬದುಕಿನ ಉಸಿರೇ ಆಗಿಬಿಟ್ಟಿದೆ. ವಸಾಹತು ಆಡಳಿತ ಬುಡಕಟ್ಟು ಮತ್ತು ಅರಣ್ಯಗಳ ಸಂಬಂಧಗಳನ್ನ ಚೆನ್ನಾಗಿ ಗ್ರಹಿಸಿತು. ಅರಣ್ಯಗಳಿಂದ ಆದಿವಾಸಿಗಳನ್ನ ಬೇರ್ಪಡಿಸಿಬಿಟ್ಟರೆ, ಈ ಸಮುದಾಯಗಳ ಅರ್ಧ ಬಲವನ್ನೇ ನಾಶ ಮಾಡಿದಂತೆ ಎಂಬುದನ್ನ ವಸಾಹತು ಆಡಳಿತ ಅರ್ಥಮಾಡಿಕೊಂಡಿತು. ಅರಣ್ಯ ಮತ್ತು ಆಯುಧಗಳನ್ನ, ಆದಿವಾಸಿಗಳಿಂದ ಕಿತ್ತುಕೊಳ್ಳುವ ಕಾನೂನುಗಳನ್ನ ಬ್ರಿಟಿಷರು ರಚಿಸಿದರು. ಮೊದಲ ಬಾರಿಗೆ ಅರಣ್ಯಗಳನ್ನ ರಾಷ್ಟ್ರೀಕರಿಸುವ ಕಾನೂನುಗಳು ರಚನೆಯಾದವು. ಬ್ರಿಟಿಷರು ಈ ಕಾನೂನುಗಳನ್ನ ಇಟ್ಟುಕೊಂಡೇ ಇಂಡಿಯಾದ ಅರಣ್ಯಗಳನ್ನ ಧ್ವಂಸ ಮಾಡಲಾರಂಭಿಸಿದರು. ಅಪಾರ ಸಸ್ಯ ಸಂಪತ್ತು, ಆಸೆಬುರುಕ ಪಶ್ಚಿಮದ ಪಿಪಾಸುಗಳಿಗೆ ಬಲಿಯಾಗಿ ಹೋಯ್ತು. ವ್ಯವಸ್ಥಿತ ಕಾನೂನೀಕರಣದ ಮೂಲಕ ಆದಿವಾಸಿ ಸಮುದಾಯಗಳನ್ನು ವ್ಯವಸ್ಥಿತವಾಗಿ, ಹೀನಾಯವಾಗಿ ಶೋಷಿಸಿದರು. ಬುಡಕಟ್ಟುಗಳನ್ನು ಕಾಡಿನ ಬದುಕಿನಿಂದ ಒಕ್ಕಲೆಬ್ಬಿಸುವ ಕಾರ್ಯ ಇಲ್ಲಿಂದಲೇ ಆರಂಭಗೊಂಡಿತು.

ಈ ಎಲ್ಲಾ ಅಪಾಯಗಳ ಜೊತೆ, ವಸಾಹತು ಆಡಳಿತದಿಂದ ಇಂಡಿಯಾದ ಕೆಳಜಾತಿ ಮತ್ತು ಆದಿವಾಸಿಗಳಿಗೆ ಕೆಲವು ಅನುಕೂಲಗಳೂ ಆಗಿವೆ. ವಿಚಿತ್ರ ರೋಗಗಳಿಂದ, ಅನೂಹ್ಯ ಕಾಯಿಲೆಗಳಿಂದ ಸಾವನ್ನಪ್ಪುತ್ತಿದ್ದ. ಆದಿವಾಸಿಗೆ ಸಮುದಾಯಗಳ ಬಲಿ ಕ್ರಿಶ್ಚಿಯನ್ ಪಾದ್ರಿಗಳು ಮೊದಲಬಾರಿಗೆ ಮತಾಂತರದ ಉದ್ದೇಶ ಎರಡನೇ ಆದ್ಯತೆಯಾಗಿ ರೂಪಾಂತರಗೊಂಡಿತು. ವೆರಿಯರ್ ಎಲ್ವಿನ್ ಅತಿ ದುಬಾಯಿಸ್‌ರಂತಹ ಪಾದ್ರಿಗಳು ಸಮಾಜಸುಧಾರಕರಾಗಿ, ಬದಲಾಗಿಹೋದರು. ಆದಿವಾಸಿಗಳ ಜೀವನ ಸುಧಾರಣೆಗೆ ಪಣತೊಟ್ಟು ನಿಂತರು. ಹಲವು ಲಸಿಕೆಗೆಗಳನ್ನ ತಂದು ಆದಿವಾಸಿಗಳ ಜೀವನಸುದಾರಣೆಗೆ ಪಣತೊಟ್ಟು ನಿಂತರು. ಹಲವು ಲಸಿಕೆಗಳನ್ನ ತಂದು ಆದಿವಾಸಿಗಳ ಆರೋಗ್ಯ ಕಾಪಾಡುವಲ್ಲಿ ಈ ಪಾದ್ರಿಗಳು ಯಶಸ್ವಿಯಾದರು. ಕೆಳಜಾತಿಗಳನ್ನ, ಆದಿವಾಸಿಗಳನ್ನ ಮುಟ್ಟಬಾರದೆನ್ನುವ ಹಿಂದೂಧರ್ಮದ

ಪುರೋಹಿತರಿಗಿಂತ, ಕ್ರಿಶ್ಚಿಯನ್ ಪಾದ್ರಿಗಳು ಮಾನವೀಯವಾಗಿ ಕಂಡರು. ಇಂಡಿಯಾಕ್ಕೆ ವಸಾಹತುಶಾಹಿಯ ಬಹುಮುಖ್ಯ ಕೊಡುಗೆಗಳು ಶಿಕ್ಷಣ ಮತ್ತು ಆಧುನಿಕತೆ. ಬ್ರಿಟಿಷ್ ಆಡಳಿತದ ಜೊತೆ ಜೊತೆಗೆ ಕ್ರೈಸ್ತಪಾದ್ರಿಗಳು ಮಾಡಿದ ಸುಧಾರಣೆಕಾರ್ಯಗಳು ಬಡುಕಟ್ಟುಗಳ ಬದುಕಿನಲ್ಲಿ ಸಾಂಸ್ಕೃತಿಕ ಎಚ್ಚರವನ್ನು ನೀಡಿದವು. ಸುಧಾರಣೆಯ ಜೊತೆಯಲ್ಲಿ ಶಿಕ್ಷಣವನ್ನು, ಆರೋಗ್ಯ ಸೇವೆಗಳನ್ನು ಕಾಡಿನ ಮಕ್ಕಳಾದ ಬುಡಕಟ್ಟುಗಳಿಗೆ ಪಾದ್ರಿಗಳು ಒದಗಿಸಿದರು. ಕ್ರೈಸ್ತಪಾದ್ರಿಗಳು ಸ್ವಮತ ಪ್ರತಿಪಾದನೆಗೆ ತಮ್ಮ ಧರ್ಮದ ಬಗೆಗೆ ಉದಾರವಾಗಿ ಮಾತನಾಡುತ್ತಾ ಹಿಂದೂಧರ್ಮವನ್ನು ಟೀಕೆ ಮಾಡುತ್ತಿದ್ದರು. ಬಹುಮುಖಿ ಸಂಸ್ಕೃತಿಯನ್ನೊಳಗೊಂಡು ವೈವಿಧ್ಯಮಯ ಜೀವನಕ್ರಮವನ್ನು ಹೊಂದಿರುವ ಬುಡಕಟ್ಟುಗಳು ವಸಾಹತುಶಾಹಿಯ ಏಕಸಂಸ್ಕೃತಿಗೆ ಹೊಂದಿಕೊಳ್ಳುವಲ್ಲಿ ಬಹಳಷ್ಟು ಪ್ರತಿರೋಧಗಳನ್ನು ಒಡ್ಡಿವೆ. ಬದಲಾಗಿ ವಸಾಹತುಶಾಹಿ ದಬ್ಬಾಳಿಕೆಯ ವಿರುದ್ಧವಾಗಿಯೂ ಹೋರಾಟಗಳನ್ನು ಎದುರಿಸಿ ಬುಡಕಟ್ಟು ಸಮುದಾಯಗಳು ತಮ್ಮ ಸಂಸ್ಕೃತಿಯ ವೈವಿಧ್ಯತೆಗಳನ್ನು ಉಳಿಸಿಕೊಂಡಿವೆ.

ಕೈಗಾರಿಕೀಕರಣ, ಯಂತ್ರನಾಗರಿಕತೆ, ಬಂಡವಾಳಶಾಹಿ ವ್ಯವಸ್ಥೆಯ ಸ್ಥಾಪನೆ ವೈಜ್ಞಾನಿಕ ಆವಿಷ್ಕಾರಗಳು ಇಡೀ ಮನುಕುಲವನ್ನೆ ಪಣಕ್ಕೊಡ್ಡಿವೆ. ಈ ಎಲ್ಲಾ ಅಂಶಗಳಿಂದ ಭಾರತೀಯ ಸಮಾಜದ ಜೀವನಕ್ರಮವು ಹೊಸ ಬಗೆಯ ತಿರುವುಗಳಿಗೆ ಮುಖ್ಯವಾಯಿತು. ಯಂತ್ರನಾಗರಿಕತೆಯ ಮೋಹ, ಸಾಂಪ್ರದಾಯಕ ಜೀವನಕ್ರಮದ ಬದಲಾವಣೆ ಇಲ್ಲವೆ ನಾಶ, ಪಾರಂಪರಿಕ ಉತ್ಪಾದನಾವ್ಯವಸ್ಥೆ ಜಾಗದಲ್ಲಿ ಅತ್ಯಾಧುನಿಕ ಯಂತ್ರನಾಗರಿಕತೆಯ ಹೆಜ್ಜೆಗಳು ಮೂಡತೊಡಗಿದವು. ಮನುಕುಲದ ಬದುಕನ್ನೇ ಆರ್ಥಿಕತೆ ನಿಯಂತ್ರಿಸಿತು. ಬಂಡವಾಳಶಾಹಿ ವ್ಯವಸ್ಥೆಯ ಪ್ರಧಾನ ಉದ್ದೇಶ ಲಾಭ ನಿರೀಕ್ಷೆಯೇ ಪ್ರಮುಖ ಧ್ಯೇಯಧೋರಣೆಯಾಗಿರುತ್ತದೆ. ಸಾಮ್ರಾಜ್ಯಶಾಹಿ ದೇಶಗಳ ಪ್ರಮುಖ ಧೋರಣೆಯೂ ಕೂಡ ತೃತೀಯ ಜಗತ್ತಿನ ರಾಷ್ಟ್ರಗಳಲ್ಲಿ ಅಲ್ಲಿಯ ನೈಸರ್ಗಿಕ ಸಂಪನ್ಮೂಲವನ್ನು, ಜನರನ್ನು ಭೌತಿಕ ವಸ್ತುಗಳೆಂತೆ ಪರಿಗಣಿಸುತ್ತದೆ. ವಸಾಹತು ಆಡಳಿತದ ಜೊತೆಗೆ ದೇಣಿಗೆಯಾಗಿ ಬಂದ ಶಿಕ್ಷಣ, ಒಂದು ಮೌಲ್ಯವಾಗಿ ಬಂದ ಆಧುನಿಕತೆ, ಶಕ್ತರಾಜಕಾರಣದೊಂದಿಗೆ ಕೈಜೋಡಿಸಿದ ಬಂಡವಾಳಶಾಹಿವ್ಯವಸ್ಥೆ, ಈ ಎಲ್ಲವುಗಳು ಭಾರತೀಯ ಸಮಾಜಕ್ಕೆ ಬಂದೆರಗಿದ ಸಮಯದಲ್ಲಿ ಇಲ್ಲಿಯ ಸಮಾಜದ ಸ್ಥಿತಿಗತಿ ನಿಜಕ್ಕೂ ಕುತೂಹಲದ ಅಧ್ಯಯನಕ್ಕೆ ಯೋಗ್ಯವಾಗುತ್ತದೆ. ಇಂತಹ ಸಮಯದಲ್ಲಿ ಬುಡಕಟ್ಟುಗಳ ಸ್ಥಿತಿ ಏನು? ಇವೆಲ್ಲವುಗಳ ವಿರುದ್ಧ ಬುಡಕಟ್ಟು ಸಮಾಜಗಳಿಗೆ ಬದುಕುವ ತಾಕತ್ತು ಇದೆಯೇ? ಹಾಗಿದ್ದಲ್ಲಿ ಆ ಸಮುದಾಯಗಳ ಒಡಲಕಿಚ್ಚು ಯಾವ ಬಗೆಯದು ಎಂಬುದು ಅಧ್ಯಯನಕ್ಕೆ ಹೆಚ್ಚು ಒತ್ತನ್ನು ಒದಗಿಸುತ್ತದೆ. ಬದಲಾಗಿ ಈ ಆದಿವಾಸಿ ಬುಡಕಟ್ಟು ಸಮುದಾಯಗಳು ಅತ್ಯಾಧುನಿಕ ನವನಾಗರಿಕ ಸಮಾಜದ ಎದುರಿಗೆ ಹೇಗೆ ಬದುಕಬಲ್ಲವು ಎಂಬ ಹಿನ್ನೆಲೆಯಲ್ಲಿ ಅಧ್ಯಯನಗಳು ಜರುಗುತ್ತಿವೆ.

ಜಾಗತೀಕರಣದ ಫಲವಾಗಿ ಇಡೀ ವಿಶ್ವವೇ ಹತ್ತುಹಲವು ಸಾಂಸ್ಕೃತಿಕ ಭಿನ್ನತೆಗಳನ್ನು ಮರೆತು ಒಂದು ಗ್ರಾಮವಾಗುವ ಪ್ರಯತ್ನಗಳು ನಡೆಯುತ್ತಿವೆ. ಬಂಡವಾಳ ವ್ಯವಸ್ಥೆ, ಉತ್ಪಾದನಾ ಚಟುವಟಿಕೆಗಳು,

ಮಾರುಕಟ್ಟೆ ಈ ವರ್ತುಲದಲ್ಲಿ ಅಲಕ್ಷಿತ ಸಮುದಾಯಗಳು ನಿಲ್ಲಲು ಅಶಕ್ತವಾಗಿವೆ. ಮಾಹಿತಿ ತಂತ್ರಜ್ಞಾನದಿಂದ ವಿಶ್ವದ ಒಂದು ತುದಿಯಿಂದ ಮತ್ತೊಂದು ತುದಿ ಸೇರಿಸುವ, ಆ ಮುಖೇನ ಏಕಮಾದರಿಯ ಮಾರುಕಟ್ಟೆ, ಬಂಡವಾಳ, ಆಡಳಿತ ನಡೆಸುವ ಚಿಂತನೆಗಳು ತೇಲಿ ಬರುತ್ತಿವೆ. ಮಾಹಿತಿತಂತ್ರಜ್ಞಾನದಿಂದ ಇಡೀ ವಿಶ್ವವೇ ಕುಬ್ಜವಾಗಿ ಒಂದು ಗ್ರಾಮವಾಗುವ ಆ ಮೂಲಕ ವಿಶ್ವಗ್ರಾಮದ ಪರಿಕಲ್ಪನೆಯೊಂದು ಹುಟ್ಟಿಕೊಂಡಿದೆ. ಜಾಗತೀಕರಣದ ಸ್ವರೂಪ, ಲಾಭ ನಷ್ಟಗಳ ಬಗೆಗೆ ಕುತೂಹಲದಿಂದ ಮಾತನಾಡುವ ಹಾಗೂ ಅದು ತಂದೊಡ್ಡುವ ಅಪಾಯಗಳನ್ನು ನೆನೆದು ಅಧ್ಯಯನಗಳು ನಡೆಯುತ್ತಿವೆ. ಬದಲಾಗಿ ದೇಶೀ ನೆಲದ ಬಹುರೂಪಿ ಸಂಸ್ಕೃತಿಯ ಜೀವಕಣದ ಬುಡಕಟ್ಟು, ಆದಿವಾಸಿ, ವಿವಿಧ ಭಾಷೆ, ಧರ್ಮ, ಜನಾಂಗಗಳಿಗೆ ಸೇರಿದವರ ಬಗೆಗೆ ಭಯ, ಭೀತಿ, ಚರಿತ್ರೆಗಳನ್ನು ದಾಖಲಿಸುವಂತೆ ಮಾಡಿದೆ. ಏಕರೂಪಿ ಹೆಸರಿನಲ್ಲಿ ಮುಂದೊದಗುವ ಅಪಾಯಗಳಿಗೆ ಕಾರಣಗಳನ್ನು ಹುಡುಕುವ ನೆಪದಲ್ಲಿ ಅದಕ್ಕೆ ಪರಿಹಾರೋಪಾಯಗಳಂತೆ ಸಮುದಾಯಗಳ ಅಧ್ಯಯನವನ್ನು ಬೌದ್ಧಿಕ ಚರ್ಚೆ, ಚಿಂತನೆ, ಅಧ್ಯಯನಗಳು ತಮ್ಮ ಕಾರ್ಯಕ್ಷೇತ್ರವನ್ನಾಗಿಸಿಕೊಂಡಿವೆ.

ಯಾವುದೇ ಸಮುದಾಯವು ಕೂಡಾ ಯಾವತ್ತು ಸಾಂಸ್ಕೃತಿಕ ಎಚ್ಚರವನ್ನು ತಪ್ಪಿ ಸ್ಥಿರತೆಯನ್ನು ಪಡೆಯುವುದಿಲ್ಲ. ಅದರ ಜಂಗಮಸ್ಥಿತಿಗೆ ಹತ್ತುಹಲವು ಅಂಶಗಳು ಕಾರಣೀಭೂತವಾಗಿರುತ್ತವೆ. ಬೆಂಕಿಯ ಉಪಯೋಗದಿಂದ ಹಿಡಿದು ಇವತ್ತಿನ ಜಾಗತೀಕರಣದ ಪ್ರಕ್ರಿಯೆಯವರೆಗೂ ಬುಡಕಟ್ಟು ಸಮುದಾಯಗಳು ಮಾತ್ರವಲ್ಲದೆ ಇಡೀ ಮಾನವ ಸಮುದಾಯವೇ ಸ್ಥಿಂತ್ಯಂತರಗಳನ್ನು ಅನುಭವಿಸಿವೆ. ಬದಲಾಗಿ ಕಾಲಮಾನದ ಯುಗಧರ್ಮದ ಮೌಲ್ಯಗಳೊಂದಿಗೆ ಸಮುದಾಯಗಳು ಜಗಳ ಕಾಯುವುದರೊಂದಿಗೆ ತಮ್ಮ ಅನನ್ಯತೆಯನ್ನು ಕಾದಿಟ್ಟುಕೊಂಡಿವೆ. ಆಧುನಿಕವಾದ ವಿದ್ಯಮಾನಗಳಿಗೆ ಬುಡಕಟ್ಟು ಸಮುದಾಯಗಳು ತೆರೆದುಕೊಳ್ಳುವ ರೀತಿ ಅವುಗಳ ಕಾರಣದೊಂದಿಗೆ ಬೆಸೆದುಕೊಂಡಿರುತ್ತವೆ. ಯಾವುದೇ ಒಂದು ಸಮುದಾಯ ಆಧುನಿಕವಾದ ವಿದ್ಯಮಾನಗಳಿಗೆ ಮುಖಾಮುಖಿಯಾಗುವಾಗ ಆ ಸಮುದಾಯ ನಂಬಿ ಬದುಕುವ ಧಾರ್ಮಿಕ, ಸಾಮಾಜಿಕ ಆಚರಣೆ, ನಂಬಿಕೆಗಳೊಂದಿಗೆ ಜಗಳ ಅನಿವಾರ್ಯವಾಗಿಬಿಡುತ್ತದೆ. ಜೀವಂತ ಸಂಸ್ಕೃತಿಯ ಪ್ರಧಾನ ಲಕ್ಷಣ ಇಂತಹ ಸಂಘರ್ಷಮಯವಾಗಿರುತ್ತದೆ.

ಮಹಾರಾಷ್ಟ್ರದ ಮೂಲದವರಾಗಿದ್ದ ಗೋಸಂಗಿ ಸಮುದಾಯ ಜೀವನಾವಶ್ಯಕತೆಯ ಹುಡುಕಾಟದಿಂದ ಕರ್ನಾಟಕ, ಆಂಧ್ರಪ್ರದೇಶ, ತಮಿಳುನಾಡು, ಕೇರಳ ರಾಜ್ಯಗಳಲ್ಲಿ ಚದುರಿಹೋಗಿದ್ದಾರೆ. ಗೋಸಂಗಿಗಳನ್ನು ಮಹಾರಾಷ್ಟ್ರದಲ್ಲಿ ಗೋಸಾವಿ (ಗೋಸಾಯಿ), ಗೋಸಂಗಿಗಳೆಂದು ಕರೆಯುತ್ತಾರೆ. ಉತ್ತರ ಕರ್ನಾಟಕದಲ್ಲಿ ಈ ಪ್ರಭಾವ ಕಾಣುತ್ತೇವೆ. ಮಧ್ಯಕರ್ನಾಟಕದ ಬಳ್ಳಾರಿ ಜಿಲ್ಲೆಯಿಂದ ಬೆಂಗಳೂರು, ಚಿತ್ರದುರ್ಗ, ದಾವಣಗೆರೆ, ತುಮಕೂರು, ಶಿವಮೊಗ್ಗ ಮೊದಲಾದ ಜಿಲ್ಲೆಗಳಲ್ಲಿ ಗೋಸಂಗಿಗಳೆಂದೆ ಗುರುತಿಸಿಕೊಳ್ಳುತ್ತಾರೆ. ಗೋಸಂಗಿ ಸಮುದಾಯ ಅಲೆಮಾರಿ, ಅರೆ ಅಲೆಮಾರಿ ಸಮುದಾಯವಾಗಿದ್ದು ಕರ್ನಾಟಕಕ್ಕೆ ಎಂದು,

ಏಕೆ, ವಲಸೆ ಬಂದರು ಎಂಬ ವಿವರಗಳು ಲಭ್ಯವಿಲ್ಲ. ಈ ಸಮುದಾಯ ಉತ್ತರಭಾರತದ ಧಾರ್ಮಿಕಪಂಥಗಳ ಲಕ್ಷಣಗಳನ್ನು ಹೆಚ್ಚಾಗಿ ಹೋಲುತಿದ್ದು, ಸ್ಥಳೀಯ ದೇವತೆಗಳೊಂದಿಗೂ ಗುರುತಿಸಿಕೊಳ್ಳುತ್ತಾರೆ. ಪ್ರಾದೇಶಿಕ ಪರಿಸರದ ಪ್ರಭಾವ, ಒತ್ತಡಗಳಿಂದ ಪ್ರಾದೇಶಿಕ ದೇವತೆಗಳನ್ನು ಪೂಜಿಸುತ್ತಾರೆ. ಇವರು ಮೂಲತಃ ಶಕ್ತಿ, ಶೈವ, ವೈಷ್ಣವ ಪದ್ಧತಿಗಳನ್ನು ಅನುಸರಿಸುತ್ತರಾದರೂ, ವಿಶೇಷವಾಗಿ ತಮ್ಮ ಪಾರಂಪರಿಕ ಕುಲದೇವತೆಗಳನ್ನು ಪೂಜಿಸುವುದನ್ನು ಉಳಿಸಿಕೊಂಡು ಬಂದಿದ್ದಾರೆ.

ಅಲೆಮಾರಿಗಳಾದ ಗೋಸಂಗಿ ಸಮುದಾಯದ ಅಧ್ಯಯನ ನಿಜಕ್ಕೂ ತ್ರಾಸದಾಯಕ. ಇವರು ಖಾಯಂ ಆಗಿ ಒಂದು ಪ್ರದೇಶದಲ್ಲಿ ನೆಲೆಯಾಗಿರುವುದಿಲ್ಲ. ಒಂದು ಬಗೆಯ ಇವರ ಸಂಚಾರಿಜೀವನ ಆಹಾರ, ರೀತಿರಿವಾಜು, ಜೀವನಕ್ರಮ ಮೊದಲದ ಅಂಶಗಳು ಅಧ್ಯಯನಕ್ಕೆ ಹೆಚ್ಚು ಕುತೂಹಲವನ್ನುಂಟುಮಾಡುತ್ತವೆ. ಪ್ರಸ್ತುತ ಅಧ್ಯಯನದಲ್ಲಿ ಗೋಸಂಗಿ ಸಮುದಾಯದ ಮೌಖಿಕ ಪರಂಪರೆ, ಸಂಪ್ರದಾಯ, ನಂಬಿಕೆ, ಆಚರಣೆ, ಜೀವನಕ್ರಮ, ವ್ಯಾಪಾರ, ದುಡಿಮೆ, ಆ ಸಮುದಾಯದ ರೀತಿ ರೀವಾಜು, ಧರ್ಮ, ಕಲೆ, ಹುಟ್ಟು ಸಾವು, ಜನನ ಮೊದಲಾದ ಸಾಂಸ್ಕೃತಿಕ ಅಂಶಗಳನ್ನು ಆಧರಿಸಿ ಅಧ್ಯಯನಮಾಡಲಾಗಿದೆ. ಈ ಅಧ್ಯಯನಕ್ಕೆ ಶೈಕ್ಷಣಿಕ ಕುತುಹೂಲದ ಜೊತೆಜೊತೆಗೆ ಗೋಸಂಗಿ ಸಮುದಾಯದ ಪಾರಂಪರಿಕ ಜ್ಞಾನಧಾರೆಗಳ ಮೂಲಕ ವರ್ತಮಾನದ ಬದುಕನ್ನು ಆ ಸಮುದಾಯದ ಸಮಸ್ತ ಉತ್ಪಾದನಾ ಚಟುವಟಿಕೆಗಳ ಮೂಲಕ ಅರ್ಥೈಸುವುದು ಇಲ್ಲಿಯ ಪ್ರಧಾನ ಉದ್ದೇಶ.

## ಅಧ್ಯಯನದ ವ್ಯಾಪ್ತಿ

ಅಧ್ಯಯನದ ಅನುಕೂಲಕ್ಕಾಗಿ ಗೋಸಂಗಿ ಸಮುದಾಯ ದಟ್ಟವಾಗಿ ನೆಲೆಸಿರುವ ಸ್ಥಳಗಳಿಗೆ ಮಾತ್ರ ಸೀಮಿತವಾಗಿರಿಸಿಕೊಂಡಿದ್ದೇನೆ. ಅಷ್ಟಾಗಿಯೂ ಕೂಡಾ ಕರ್ನಾಟಕದ ಮತ್ತು ನೆರೆರಾಜ್ಯಗಳಾದ ಮಹಾರಾಷ್ಟ್ರ, ಆಂಧ್ರಪ್ರದೇಶಗಳ ಗೋಸಂಗಿಗಳನ್ನು ಗೋಸಾವಿ, ಪೇಗಲೊಳು ಕೈಂಕ ಪಂಥಗೊಳ್ಳು ಎಂದು ಕರೆಸಿಕೊಳ್ಳುವವರನ್ನು ಕ್ಷೇತ್ರಕಾರ್ಯದ ಮೂಲಕ ಸಂದರ್ಶಿಸಲಾಗಿದೆ. ಮಹಾರಾಷ್ಟ್ರದ ಮೂಲದವರಾಗಿದ್ದ ಗೋಸಂಗಿಗಳ ಬಹುದೊಡ್ಡ ಸಾಂಸ್ಕೃತಿಕ ಜಗತ್ತು ಮಹಾರಾಷ್ಟ್ರವಾಗಿದೆ. ಇವರು ತಮ್ಮ ಧರ್ಮ, ದೇವರು, ನ್ಯಾಯಪಂಚಾಯಿತಿಗಳನ್ನು ಮಹಾರಾಷ್ಟ್ರದೊಂದಿಗೆ ಗುರುತಿಸಿಕೊಳ್ಳುತ್ತಾರೆ. ಇಂತಹ ಕೆಲವು ವಿಶಿಷ್ಟ ಅಂಶಗಳ ದೃಷ್ಟಿಯಿಂದ ಅನಿವಾರ್ಯವಾಗಿ ಅಧ್ಯಯನದ ವ್ಯಾಪ್ತಿಯನ್ನು ಮೀರಲಾಗುತ್ತದೆ. ಒಂದು ಸಾಂಸ್ಕೃತಿಕ ಜಗತ್ತಿಗೆ ಭೌಗೋಳಿಕ ಎಲ್ಲೆಗಿಂತ ಭಿನ್ನವಾದ ಎಲ್ಲೆಯೊಂದು ಇರುತ್ತದೆ. ಪ್ರಸ್ತುತ ನನ್ನ ಅಧ್ಯಯನ ಕರ್ನಾಟಕದ ಎಂಟು ಜಿಲ್ಲೆಗಳಲ್ಲಿ ನೆಲೆಸಿರುವ ಗೋಸಂಗಿಗಳನ್ನು ಮುಖ್ಯವಾಗಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಇವರು ಅರೆ ಅಲೆಮಾರಿ ಜೀವನ ನಡೆಸುವವರಾದ್ದು ಒಂದು ತಿಂಗಳು ಕಾಲ ಒಂದು ಪ್ರದೇಶದಲ್ಲಿದ್ದರೆ ಮತ್ತೊಂದು ತಿಂಗಳು ನೆರೆಯ ಜಿಲ್ಲೆ, ನೆರೆಯ ರಾಜ್ಯಗಳಲ್ಲಿ ಜೀವನ ನಡೆಸುತ್ತಾರೆ.

ಹೀಗಾಗಿ ಕರ್ನಾಟಕದ ಗೋಸಂಗಿಗಳ ಸಾಂಸ್ಕೃತಿಕ ಬೇರುಗಳನ್ನ ಹುಡುಕಿಕೊಂಡು ಅಕ್ಕಪಕ್ಕದ ರಾಜ್ಯಗಳಿಗೂ ಭೇಟಿಕೊಡಲಾಗಿದೆ. ಮಹಾರಾಷ್ಟ್ರದಲ್ಲಿ ಸಮುದಾಯದ ವ್ಯಾಜ್ಯಗಳನ್ನು ಬಗೆಹರಿಸುವ 'ನ್ಯಾಯ ಪಂಚಾಯ್ತಿ'ಯನ್ನ ಸಮಗ್ರವಾಗಿ ವಿಡಿಯೋ ಮೂಲಕ ಚಿತ್ರೀಕರಿಸಿಕೊಳ್ಳಲಾಗಿದೆ. ಈವತ್ತು ನಾವು ಕನ್ನಡದ ಸಮುದಾಯಗಳು, ಸಂಸ್ಕೃತಿ, ಭಾಷೆ ಎಂಬ ಹೆಸರಲ್ಲಿ ಅಧ್ಯಯನ ಕೈಕೊಂಡಾಗ, ಅನಿವಾರ್ಯವಾಗಿ ರಾಜಕೀಯ, ಭೌಗೋಳಿಕ ಗಡಿಗಳನ್ನ ದಾಟಬೇಕಾಗುತ್ತದೆ. ಹೀಗಾಗಿ ಕರ್ನಾಟಕದ ಗೋಸಂಗಗಿಗಳ ಸಮಗ್ರ ಬದುಕನ್ನ ಅರ್ಥಮಾಡಿಕೊಳ್ಳಲು, ಕರ್ನಾಟಕದ ಅಕ್ಕಪಕ್ಕದ ರಾಜ್ಯಗಳಲ್ಲಿನ ಅವರ ವರ್ತಮಾನದ ಬದುಕೂ ಸಹ ನಮಗೆ ಸಹಾಯಮಾಡುತ್ತದೆ. ಅಲ್ಲದೆ ಈ ಬಗೆಯ ಅಲೆಮಾರಿ ಸಮುದಾಯವನ್ನ ಅಧ್ಯಯನ ಮಾಡಲು ಹೊರಟಾಗ ಈ ರಾಜಕೀಯ ಎಲ್ಲೆಗಳು ಕೃತಕವಾಗಿ ಬಿಡುತ್ತವೆ. ಇಂತಹ ಕಾರಣಗಳಿಗಾಗಿ ಅಧ್ಯಯನ ವ್ಯಾಪ್ತಿಯೂ ಅನಿವಾರ್ಯವಾಗಿ ವಿಸ್ತಾರವಾಗಿರುವುದು ಅಧ್ಯಯನಕ್ಕೆ ಯಾವ ಧಕ್ಕೆ ಉಂಟುಮಾಡಿಲ್ಲವೆಂದು ಭಾವಿಸಲಾಗುತ್ತದೆ.

## ಅಧ್ಯಯನದ ವಿಧಾನ

ಒಂದು ಸಿದ್ಧಮಾದರಿಯ ಪ್ರಶ್ನಾವಳಿಯ ಮೂಲಕ ಗೋಸಂಗಿಗಳನ್ನ ಭೇಟಿಮಾಡಲಾಗಿದೆ. ಸಾಧ್ಯವಾದೆಡೆಯಲ್ಲೆಲ್ಲ ಅಂಕಿಅಂಶಗಳ ಸಮೇತ ಮಾಹಿತಿಯನ್ನ ಸಂಗ್ರಹಿಸಲಾಗಿದೆ. ಮನೆ ಬಾಗಿಲಿಂದ ಬಾಗಿಲಿಗೆ ಪ್ರಶ್ನಾವಳಿಯ ಸಮೇತ ಸಂದರ್ಶನ ಮಾಡಲಾಗಿದೆ. ಇವರ ಸಾಂಸ್ಕೃತಿಕ ಮಹತ್ವದ ಕೇಂದ್ರಗಳಿಗೆ ಭೇಟಿ ಕೊಟ್ಟು ವಿವರ ಸಂಗ್ರಹಿಸಿದ್ದಲ್ಲದೆ, ವ್ಯಾಪಕವಾಗಿ ಛಾಯಾಚಿತ್ರಗಳನ್ನ ತೆಗೆಯಲಾಗಿದೆ. ಮಹಾರಾಷ್ಟ್ರದಲ್ಲಿ ನಡೆದ 'ನ್ಯಾಯ ಪಂಚಾಯ್ತಿ' ಯನ್ನ ವಿಡಿಯೋದಲ್ಲಿ ದಾಖಲಿಸಿಕೊಳ್ಳಲಾಗಿದೆ. ಅಲ್ಲದೆ ಸಮುದಾಯದ ಜೊತೆ ನಿರಂತರ ನಾಲ್ಕು ವರ್ಷಗಳ ಒಡನಾಟದಲ್ಲಿ ಅನೇಕ ಮಾಹಿತಿಗಳನ್ನ, ವಕ್ತೃಗಳಿಂದ ನೇರ ಆಡಿಯೋ ಕ್ಯಾಸೆಟ್‌ಗಳಲ್ಲಿ ಧ್ವನಿಮುದ್ರಿಸಿಕೊಳ್ಳಲಾಗಿದೆ. ಹೀಗಾಗಿ ಸಾಕಷ್ಟು ಛಾಯಾಚಿತ್ರಗಳು ಮತ್ತು ಬಹಳಷ್ಟು ಆಡಿಯೋ ಕ್ಯಾಸೆಟ್‌ಗಳಲ್ಲಿ ವಿಪುಲ ಮಾಹಿತಿ ಸಂಗ್ರಹಣೆಗೊಂಡಿದೆ.

ಈ ಅಧ್ಯಯನದ ಉದ್ದಕ್ಕೂ, ನಾನು ಹೆಚ್ಚಾಗಿ ಪ್ರಾಥಮಿಕ ಆಕರಗಳನ್ನ ನೆಚ್ಚಿಕೊಂಡಿದ್ದೇನೆ. Secendary Source ತೀರಾ ಮಿತವಾಗಿ ಇಲ್ಲಿ ಬಳಕೆಯಾಗಿದೆ. ಅಲ್ಲದೆ ಗೋಸಂಗಿಗಳ ಕುರಿತು ಕನ್ನಡ ಅಥವಾ ಇನ್ಯಾವುದೇ ಭಾಷೆಯಲ್ಲಿ ಅಷ್ಟಾಗಿ ಅಧ್ಯಯನಗಳು ನಡೆದಿಲ್ಲ. ಇದರಿಂದಾಗಿ ಈ ಅಧ್ಯಯನದ ಉದ್ದಕ್ಕೂ ನಾನು ಕ್ಷೇತ್ರಕಾರ್ಯದಲ್ಲಿ ಪಡೆದ ಪ್ರತ್ಯಕ್ಷ ಅನುಭವಗಳನ್ನೇ ನಿಮ್ಮ ಮುಂದಿಟ್ಟಿದ್ದೇನೆ. ಈ ಕಾರಣಕ್ಕಾಗಿ ಮಹಾಪ್ರಬಂಧದಲ್ಲಿ ಅಷ್ಟಾಗಿ ಅಡಿಟಿಪ್ಪಣಿಗಳಿರುವುದಿಲ್ಲ. ಅಗತ್ಯವೆನ್ನಿಸಿದ ಕಡೆಯಲ್ಲಿ ಈ ಹಿಂದೆ ನೆಡದ ಅಧ್ಯಯನಗಳನ್ನ ಉಲ್ಲೇಖಿಸಲಾಗಿದೆ. ಅಲ್ಲದೆ ಆಯ್ದ ಎಂಟು ಜಿಲ್ಲೆಗಳಲ್ಲಿನ ಗೋಸಂಗಿಗಳನ್ನ ಮಾತ್ರ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಆದರೆ ಕರ್ನಾಟಕದಲ್ಲಿನ ಬಹುತೇಕ ಈ ಸಮುದಾಯದ ಗುಂಪುಗಳನ್ನು ಕ್ವಚಿತ್ತಾಗಿಯಾದರೂ ಸಂದರ್ಶಿಸಲಾಗಿದೆ.

### ಭಾರತದ ಬಡುಕಟ್ಟುಗಳ ಸ್ಥಿತಿಗತಿ

ಪ್ರಕೃತಿ ಮತ್ತು ಆದಿಮ ಮನುಷ್ಯನ ಸಂಬಂಧ ಅನನ್ಯವಾದದ್ದು. ಇಂತಹ ಒಂದು ಸಂಬಂಧವು ಯಾವತ್ತು ಗುತ್ತಿಗೆದಾರರ ಕೈಗೆ ತಲುಪಿತೋ ಅಂದು ಬುಡಕಟ್ಟು ಸಮಾಜದ ಬದುಕು ಅತಂತ್ರತೆ ಕಡೆಗೆ ಹೆಜ್ಜೆಗಳನ್ನು ಹಾಕಿತು. ಮನುಷ್ಯ ದಿನನಿತ್ಯದ ಮೂಲಭೂತ ಅವಶ್ಯಕತೆಗಳಾದ ತಿನ್ನುವ, ಕುಡಿಯುವ ಮತ್ತು ದಿನಬಳಕೆಯ ವಸ್ತುಗಳನ್ನು ಪ್ರಕೃತಿಯಿಂದ ಉಚಿತವಾಗಿ ಆದಿಮ ಕಾಲದಲ್ಲಿ ಪಡೆಯುತ್ತಿದ್ದ. ಬುಡಕಟ್ಟು ಸಮಾಜದ ಬದುಕನ್ನು ನಿಯಂತ್ರಿಸುವ ಹಾಗೂ ನಿರೂಪಿಸುವಲ್ಲಿ ಪ್ರಕೃತಿಯ ಪಾತ್ರ ಪ್ರಮುಖವಾದುದೆಂಬುದರಲ್ಲಿ ಎರಡು ಮಾತಿಲ್ಲ. ಆದರೆ ಮನುಷ್ಯ ಪ್ರಕೃತಿಯನ್ನು ಉಪಭೋಗ ವಸ್ತುವೆಂದು ಎಂದು ಭಾವಿಸಿದನೋ ಅಂದಿನಿಂದ ಪ್ರಕೃತಿಮಾತೆಯನ್ನು ಅರೆಬೆತ್ತಲೆ ಮಾಡತೊಡಗಿದ. ಗುತ್ತಿಗೆದಾರ ಸಂಸ್ಕೃತಿಯೂ ಇಲ್ಲಿಂದಲೇ ಉಗಮಗೊಂಡಿತು. ಪ್ರಕೃತಿಯಲ್ಲಿ ಪ್ರಕೃತಿಯ ಒಂದಂಗವಾಗಿ ಬದುಕುತ್ತಿದ್ದ ಬುಡುಕಟ್ಟು ಜನರನ್ನು ಉಪಭೋಗ ವಸ್ತುಗಳಂತೆ ತಮ್ಮ ಮನಸಿಚ್ಛೆ ದುಡಿಸಿಕೊಂಡರು. ಕಾಡಿನ ಕಂಟ್ರಾಕ್ಟದಾರ ಸಂಸ್ಕೃತಿಯು ಬುಡಕಟ್ಟು ಸಮುದಾಯಗಳ ಬದುಕಿಗೆ ಕಂಟಕದಾರಿಯಾಗಿ ಪರಿಣಮಿಸಿತು. ಬುಡಕಟ್ಟು ಸಮಾಜಕ್ಕಷ್ಟೇ ಅಲ್ಲ ಇಡೀ ಮನುಷ್ಯ ಸಮಾಜವೇ ಇಂದು ಪ್ರಕೃತಿಯಿಂದ ಸಂಪೂರ್ಣವಾಗಿ ಬಿಡುಗಡೆಗೊಂಡಿದೆ. ಪ್ರಕೃತಿಯನ್ನೇ ಮನುಷ್ಯ ತನ್ನ ಅಸೀಮಶಕ್ತಿಯಿಂದ ತನ್ನ ಇಷ್ಟಕ್ಕೆ ಬಂದಂತೆ ಮಾರ್ಪಡಿಸಿಕೊಳ್ಳುತ್ತಿದ್ದಾನೆ. ಇಂದು ಪ್ರಕೃತಿ ಮತ್ತು ಮನುಷ್ಯ ಸಂಬಂಧಗಳ ನಡುವೆ ತುಂಬಾ ಸಂಕೀರ್ಣ ಸಂಬಂಧಗಳೇರ್ಪಡುತ್ತಿವೆ. ಇದು ಕಾಡಿನ ಬುಡಕಟ್ಟು ಸಮುದಾಯದಿಂದ ಹಿಡಿದು ರಾಜ್ಯದ, ರಾಷ್ಟ್ರದ, ವಿಶ್ವದ ಸಂಬಂಧಗಳ ಮಧ್ಯೆ ಇಂದು ಅತ್ಯಂತ ಸಂಕೀರ್ಣಸ್ಥಿತಿ ನಿರ್ಮಾಣಗೊಳ್ಳುತ್ತಿದೆ.

ಬಹುಸಂಸ್ಕೃತಿಗಳ ತವರಾದ ಇಂಡಿಯಾದಲ್ಲಿ ಬಹು ಬುಡಕಟ್ಟು ಸಮುದಾಯಗಳ ಬದುಕಿಗೆ ಒದಗಿ ಬಂದ ಅವಸ್ಥೆ, ಸಮಸ್ಯೆಗಳ ಸ್ವರೂಪ ವಿಭಿನ್ನವಾಗಿದ್ದರೂ ಅವರೆಲ್ಲರೂ ಎದುರಿಸಿದ ಸಮಸ್ಯೆಗಳು, ದುಃಖಗಳು, ಏಕಮಾದರಿಯವು. ವಸಾಹತು ಆಡಳಿತವು ದೇಣಿಗೆ ನೀಡಿದ ಶಿಕ್ಷಣ, ಆಧುನಿಕತೆ ಈ ನಾಡಿಗೆ ಬರುವುದಿಕ್ಕಿಂತ ಮುಂಚೆ ಭಾರತದ ಬಹುಪಾಲು ಬುಡಕಟ್ಟುಗಳು ದೇಶೀಯ ಜಮೀನ್ದಾರ ಪ್ರಭುತ್ವದ ರಾಜಕಾರಣದೊಳಗೆ ತಾವೂ ಕೂಡ ಮೂಕಪ್ರಾಣಿಗಳಂತೆ ಕ್ರೌರ್ಯ, ಹಿಂಸೆ, ದಬ್ಬಾಳಿಕೆಗಳನ್ನು ಅನುಭವಿಸಿವೆ. ಅಸಹಾಯಕರಾಗಿ ಮೌನದಿಂದ ಜಮೀನ್ದಾರರು ನೀಡಿದ ಕಷ್ಟಗಳನ್ನು ಅನುಭವಿಸುವುದರ ಜೊತೆಗೆ ಸೂಕ್ಷ್ಮ ಪ್ರತಿರೋಧಗಳು ಬುಡಕಟ್ಟು ಸಮುದಾಯಗಳಿಂದ ಮೂಡಿಬಂದಿವೆ. ನಿಸ್ಸಹಾಯಕನ ಧ್ವನಿಯನ್ನು ಆಲಿಸುವ ತಾಳ್ಮೆಯಿಲ್ಲದ, ಬದಲಾಗಿ ಏರುಧ್ವನಿಯನ್ನೇ ಆಶ್ರಯಿಸಿ ಹೋದ ಕಪಾಳಗಳಿಗೆ ಕಾಡು ಜನರ ಸುಪ್ತ ಹೋರಾಟದ ಧ್ವನಿಗಳು, ಹಾಡುಗಳು, ಕತೆಗಳು ಕೇಳಿಸದಾದವು. ಇವೆಲ್ಲ ಕಾಡುಜನರ ಹರಟೆಗಳೆಂದೋ, ಹಾಡುಗಳೆಂದೋ ವ್ಯಾಖ್ಯಾನಿಸುವ ಇಲ್ಲವೆ ಹಾಡಿ ಹೊಗಳುವ ಅದಕ್ಕೂ ಹೆಚ್ಚಾಗಿ ಹೆಮ್ಮೆಯಿಂದ ದಾಖಲಿಸುವ ಕಾರ್ಯ ನಡೆಯಿತೇ ವಿನಃ ಆ ಕಥನಗಳ ಗರ್ಭದೊಳಗಿರುವ ಒಡಲ ಕಿಚ್ಚನ್ನು ಅರಿಯದಾದರು.

ವಸಾಹತು ಆಧುನಿಕತೆ, ಸಾರಿಗೆ ಸಂಪರ್ಕ, ಶಿಕ್ಷಣ ಕ್ರೈಸ್ತಪಾದ್ರಿಗಳ ಸೇವೆ ಇವೆಲ್ಲಾ ಭಾರತೀಯ ಸಮಾಜದಲ್ಲಿ ನವ ಮನ್ವಂತರವನ್ನು ತಂದು ಕೊಟ್ಟಿವೇನೋ ನಿಜ. ಬಹುಮುಖಿ ಸಂಸ್ಕೃತಿಯ ನಾಡಾದ ಭಾರತವು ವಸಾಹತು ಸಂಸ್ಕೃತಿಗೆ ಬಹುಮುಖವಾಗಿಯೇ ಪ್ರತಿಕ್ರಿಯಿಸಿದರೆ, ಈ ಸಮಾಜದ ಏಣಿಶ್ರೇಣಿ ರಚನೆಯ ಕೆಳಭಾಗದಲ್ಲಿರುವ ಅಥವಾ ಕಾಡಿನೊಳಗಿರುವ ಬುಡಕಟ್ಟು ಸಮಾಜದ ಪ್ರತಿಕ್ರಿಯೆ ಎಂತಹದ್ದು? ಎಂಬ ವಿಷಯದಲ್ಲಿ ನಿಜಕ್ಕೂ ಆಶ್ಚರ್ಯವನ್ನುಂಟುಮಾಡುತ್ತದೆ. ವಸಾಹತು ಆಡಳಿತದ ಪ್ರಧಾನ ಉದ್ದೇಶ ಲಾಭ ಗಳಿಕೆಯಾಗಿತ್ತು. ಭಾರತವನ್ನು ಅಂತೆಯೇ ತೃತೀಯ ಜಗತ್ತಿನ ಬಹುಪಾಲು ರಾಷ್ಟ್ರಗಳ ಆದಿವಾಸಿಗಳನ್ನು, ಅಲ್ಲಿಯ ನೈಸರ್ಗಿಕ ಸಂಪನ್ಮೂಲವನ್ನು ಬಳಸಿಕೊಂಡಂತೆ ಆದಿವಾಸಿಗಳನ್ನು ಬಳಸಿಕೊಂಡರು. ಯುರೋಪಿನ ಮಾರುಕಟ್ಟೆಗಳಲ್ಲಿ ಗುಲಾಮರಾಗಿ ತೃತೀಯ ಜಗತ್ತಿನ ಬುಡಕಟ್ಟಿಸುವ ಗುಲಾಮರಾಗಿ ಮಾರಾಟವಾಗುತ್ತಿದ್ದರು. ಭಾರತದ ಬುಡಕಟ್ಟುಗಳು ಎರಡು ನೆಲೆಯಲ್ಲಿ ಆ ಕಾಲಕ್ಕೆ ಹೋರಾಟ ನಡೆಸಿವೆ. ಒಂದು ದೇಶೀ ಜಮೀನ್ದಾರ ಪ್ರಭುಗಳ ರಾಜಕಾರಣ ಇನ್ನೊಂದು ವಸಾಹತು ಆಡಳಿತದ ಗುತ್ತಿಗೆದಾರ ಅರಣ್ಯ ಆಕ್ರಮಣಶಾಹಿಯೂ ಬುಡಕಟ್ಟು ಜನರನ್ನು ಹೀನಾಯವಾಗಿ ದುಡಿಸಿಕೊಂಡಿತು. ಇಂತಹ ಇಬ್ಬಗೆಯ ಸಾಮಾಜಿಕ ವ್ಯವಸ್ಥೆಯಲ್ಲಿ ಭಾರತದ ಬುಡಕಟ್ಟು ಸಮುದಾಯಗಳು ನಲುಗಿ ಹೋದವು. ಯಾವುದೇ ಸಂಸ್ಕೃತಿಯ ಅಥವಾ ಸಮುದಾಯದ ಜೀವಂತಿಕೆ. ಅದರ ಹೋರಾಟದ ಮನೋಭಾವನೆಯಲ್ಲಿರುತ್ತದೆ. ಸಂಸ್ಕೃತಿಯ ಚಲನಶೀಲತೆಯೇ ಅದರ ಜೀವಂತಿಕೆಯ ಸಂಕೇತವೂ ಆಗುತ್ತದೆ. ಉಸಿರುಕಟ್ಟಿಸುವ ಪ್ರಭುತ್ವದೊಳಗೆ ಯಾವುದೇ ಸಮುದಾಯದ ಉಸಿರಾಟ ಕ್ರಿಯೆ ಜರುಗುತ್ತದೆಂದರೆ ಅದು ಸೂಕ್ಷ್ಮ ಪ್ರತಿಭಟನೆಯೆಂದೇ ಅರಿಯಬೇಕಾಗುತ್ತದೆ. ವಸಾಹತು ಆಡಳಿತಕ್ಕೆ ಭಾರತದಲ್ಲಿ ಬಿಗಿಯಾದ ಮತ್ತು ಶಕ್ತವಾದ ಪ್ರತಿರೋಧ ಉಂಟಾಗಿದ್ದೇ ಬುಡಕಟ್ಟು ಸಮಾಜದಿಂದ ಎಂದರೆ ಅತಿಶಯೋಕ್ತಿ ಮಾತೇನಲ್ಲ. ಏಕಕಾಲದಲ್ಲಿ ಬುಡಕಟ್ಟುಗಳ ಹೋರಾಟ ದೇಶೀ ನೆಲದ ಜಮೀನ್ದಾರಿ ವರ್ಗಕ್ಕೆ ಹಾಗೂ ವಸಾಹತು ಆಡಳಿತಕ್ಕೆ ಕೊಡಲಿಪೆಟ್ಟು ಕೊಡಲಾಯಿತು. ಯಾವುದೇ ಬುಡಕಟ್ಟು ಸಮುದಾಯ ತನ್ನ ಅಸ್ಮಿತೆಯನ್ನುಳಿಸಿಕೊಳ್ಳುವುದೇ ಇಂತಹ ಸಂಘರ್ಷಗಳಿಂದ. ಎರಡು ನೆಲೆಯಲ್ಲಿಯ ನೇರ ಹೋರಾಟ ಎರಡು ಪ್ರಭುತ್ವಗಳಿಂದ, ಆ ಮೌಲ್ಯಗಳಿಂದ ಬಿಡುಗಡೆಗೊಳ್ಳುವ ಬುಡಕಟ್ಟುಗಳ ಒತ್ತಾಸೆ ಅಪೇಕ್ಷೆ ಸಹಜವಾದದ್ದೆ.

ಸಂಸ್ಕೃತಿಯ ಜೀವಂತ ಪಳಯುಳಿಕೆಗಳಾದ ಬುಡಕಟ್ಟುಗಳು ಆ ಸೇತು ಹಿಮಾಚಲದವರೆಗೂ ಅವುಗಳ ಆಂತರಿಕ ಸಮಸ್ಯೆ ಸ್ವರೂಪ ಒಂದೇ. ಪ್ರಾದೇಶಿಕ ವೈವಿಧ್ಯತೆಗೆ ಅನುಗುಣವಾಗಿ ಸಮಸ್ಯೆಗಳ ಸ್ವರೂಪ ಸೃಷ್ಟಿಯಾಗಿದ್ದರೂ ಅವು ತೀರಾ ಭಿನ್ನವಾದವೇನಲ್ಲ.

ಪ್ರಪಂಚೀಕರಣದ ಈ ಹೊತ್ತಿಗೆ ಭಾರತದ ಯಾವುದೇ ಬುಡಕಟ್ಟು ಸಮಾಜ ಹಳೆಯದನ್ನು ಬಿಟ್ಟುಕೊಡುವ ಹೊಸದನ್ನು ಪಡೆಯುವ ಆತುರದ ತುದಿಗಾಲ ಮೇಲೆ ನಿಂತಿವೆ. ಆದರೆ ವಾಸ್ತವಿಕ ಸತ್ಯ ಬುಡಕಟ್ಟು ಸಮಾಜಕ್ಕೆ ಆಗುವ ಅನುಕೂಲತೆಗಳಿಗಿಂತ ಅಪಾಯಗಳೇ ಹೆಚ್ಚು. ಮಾಹಿತಿ

ತಂತ್ರಜ್ಞಾನವೇ ಜಗತ್ತನ್ನು ಮುಷ್ಟಿಗ್ರಾಹ್ಯಮಾಡಿಕೊಂಡಿರುವ ಇಂದು ಬುಡಕಟ್ಟುಗಳ ಬದುಕು ಇನ್ನೂ ಹಸನುಗೊಂಡಿಲ್ಲದಿರುವುದು ರಾಷ್ಟ್ರ, ರಾಜ್ಯ ಸರ್ಕಾರಗಳ ಆಡಳಿತದಿಂದ ಬುಡಕಟ್ಟು ಸಮಾಜಕ್ಕೆ ಆದ ಪ್ರಗತಿಯ ದ್ಯೋತಕ. ಭಾರತ ಸ್ವತಂತ್ರ್ಯ ಪಡೆದ ಐವತ್ತು ವರ್ಷಗಳ ಸುವರ್ಣ ಮಹೋತ್ಸವವನ್ನು ಆಚರಿಸಿಕೊಂಡು ಹೊಸ ಶತಮಾನದ ಹೊಸ್ತಿಲಲ್ಲಿ ಅತ್ಯಾಧುನಿಕ ಸವಲತ್ತುಗಳಿಗೆ ಪ್ರಪಂಚ ಎದುರುಗೊಂಡರೂ ಬುಡಕಟ್ಟುಗಳ ಬದುಕು ಇನ್ನೂ ಕೂಡಾ ಉತ್ತಮಗೊಂಡಿಲ್ಲವೆಂದರೆ ತಪ್ಪಾಗುವುದಿಲ್ಲ.

ರಾಜ್ಯ ರಾಷ್ಟ್ರ ಸರ್ಕಾರಗಳು ದೀನ ದುರ್ಬಲರ ಉದ್ಧಾರಕ್ಕಾಗಿ ಹತ್ತು ಹಲವು ಕ್ರಿಯಾಯೋಜನೆಗಳನ್ನು ಹಮ್ಮಿಕೊಂಡರೂ ಅವುಗಳು ಯಾವತ್ತು ಬುಡಕಟ್ಟಿನವರಿಗೆ ತಲುಪಿದಂತಿಲ್ಲ. ತಲುಪಿದ್ದರೂ ಬುಡಕಟ್ಟುಗಳ ಜೀವನಕ್ಕೆ ಸಹಕಾರಿಯಾಗಿಲ್ಲ. ಬುಡಕಟ್ಟುಗಳಿಗೆ ಕೆಲವು ಪ್ರದೇಶಗಳಲ್ಲಿ ಸಂಘ ಸಂಸ್ಥೆಗಳು ಶಿಕ್ಷಣ ಆರೋಗ್ಯ ಸೇವೆಗಳನ್ನು ಕಲ್ಪಿಸುತ್ತಿವೆ. ಇಂತಹ ಕಡೆಗಳಲ್ಲಿ ಅಪರೂಪಕ್ಕೆಂಬಂತೆ ಸುಧಾರಣೆಗಳು ಕಂಡುಬರುತ್ತವೆ. ಎ.ಎಸ್. ಪ್ರಭಾಕರ್ ಅವರು ಬುಡಕಟ್ಟು ಸಮಾಜಕ್ಕೆ ಆಧುನಿಕತೆ ಒದಗಿಸಿದ ಸವಲತ್ತಿನ ಬಗ್ಗೆ ಹೀಗೆ ಬರೆಯುತ್ತಾರೆ. "ಆಧುನಿಕ ವ್ಯವಸ್ಥೆ ಇಂದು ಅನೇಕ ಬುಡಕಟ್ಟುಗಳಿಗೆ ತಿನ್ನಲು ಮರದ ಹೊಟ್ಟನ್ನೇ ನೀಡಿದೆ, ಇಲ್ಲವೆ ಉಪವಾಸ ಕೆಡವಿ ಸಾಯಿಸಿದೆ, ಆಳುವ ವ್ಯವಸ್ಥೆ ಏನೇ ಬದಲಾವಣೆಗಳನ್ನ ಅವರಲ್ಲಿ ತರಲೆತ್ನಿಸಿದರೂ, ಆ ಅಭಿವೃದ್ಧಿ ಯೋಜನೆಗಳು ಅವರನ್ನು ಶೋಷಣೆಗೊಳಮಾಡಿವೆ."[9]

ಭಾರತದಲ್ಲಿ ವಸಾಹತು ಆಧುನಿಕತೆಗೆ ಮೊದಲು ಮುಖಾಮುಖಿಯಾದದ್ದು, ಸಾಂಪ್ರದಾಯಿಕ ಸಮಾಜವ್ಯವಸ್ಥೆಯಲ್ಲಿ ಶ್ರೇಷ್ಠತೆಯ ಹೆಸರಿನಲ್ಲಿ ಬೀಗುವ ಮೇಲ್ಜಾತಿಗಳು, ಶೂದ್ರಾದಿ ದಲಿತ ಸಮುದಾಯಗಳು ಕೂಡ ಆಧುನಿಕತೆಗೆ ಸ್ವಲ್ಪ ತಡವಾಗಿ ಒಳಗಾಗಿವೆಯೆಂದ ಮೇಲೆ ಗುಡ್ಡಗಾಡಿನ ಬುಡಕಟ್ಟುಗಳು ಆಧುನಿಕತೆಗೆ ಮುಖಾಮುಖಿಯಾದದ್ದು ತಡವಾಗಿಯೇ. ಬುಡಕಟ್ಟು ಸಮುದಾಯಗಳು ತಮ್ಮ ಪಾಡಿಗೆ ತಾವು ಹೊರಗಿನ ಪ್ರಪಂಚದಿಂದ ದೂರ ಉಳಿಯುವ ಪ್ರಯತ್ನಪಟ್ಟರೂ ಆಧುನಿಕ ನಾಗರಿಕ ಜಗತ್ತು ಅವರನ್ನು ಬಿಡುವಂತಿಲ್ಲ. ಅರಣ್ಯ ರಕ್ಷಕರ ಸಿಬ್ಬಂಧಿ, ಪೋಲೀಸ್ ವ್ಯವಸ್ಥೆ, ರಾಜ್ಯ, ರಾಷ್ಟ್ರ ಸರ್ಕಾರಗಳ ಯೋಜನೆಗಳು ಬುಡಕಟ್ಟು ಸಮುದಾಯಗಳಿಗೆ ಪೂರಕವಾಗಿ ಪರಣಮಿಸಿಲ್ಲ.

ಬುಡಕಟ್ಟು ಸಮುದಾಯಗಳು ಆದಿಕಾಲದಿಂದಲೂ ಇವತ್ತಿನವರೆಗೆ ಹಲವು ನೆಲೆಗಳಲ್ಲಿ ಶೋಷಣೆಗೆ ಒಳಗಾಗುತ್ತಲೇ ಇವೆ. ವಸಾಹತುಶಾಹಿ ಪೂರ್ವಘಟ್ಟದಲ್ಲಿ ಉಳಿಗಮಾನ್ಯ ಪ್ರಭುತ್ವದೊಳಗೆ ಜೀವಂತವಾಗಿ ಪಶುಗಳಂತೆ ಮೂಕವೇದನೆಯನ್ನು ಅನುಭವಿಸಿದ್ದಾರೆ. ಉಳಿಗಮಾನ್ಯಶಾಹಿ ಶೋಷಣೆ ಇಂಡಿಯಾದಲ್ಲಿ ಬಹುಮುಖ ಆಯಾಮಗಳನ್ನುಳ್ಳದ್ದು, ಜೀತ, ಸ್ತ್ರೀಶೋಷಣೆ ಮೊದಲಾದ ಸಾಮಾಜಿಕ ಅಸಮಾನತೆಗಳು ಉಳಿಗಮಾನ್ಯಶಾಹಿ ಪ್ರಭುತ್ವದ ಧ್ಯೋತಕಗಳು. ಉಳಿಗಮಾನ್ಯಶಾಹಿಯ ನಡತೆಯ ಬೇರುಗಳು ಸಮಾಜದಲ್ಲಿ ಯಾವತ್ತಿನವರೆಗೆ ಅಕ್ಷಯವಾಗಿರುತ್ತವೆಯೋ ಅಂದಿನವರೆಗೆ ಅದರ ಶೋಷಣೆಯೂ ಮಾಯವಾಗುವುದಿಲ್ಲ. ಉದಾಹರಣೆಗಾಗಿ ವಾರಲೀಯರ ಹೋರಾಟವನ್ನು ನೋಡಬಹುದು. ಮಹಾರಾಷ್ಟ್ರದ ಥಾನ ಜಿಲ್ಲೆಯಲ್ಲಿ

ಹತ್ತುಹಲವು ಬುಡಕಟ್ಟುಗಳಲ್ಲಿ ವಾರಲೀಯರದ್ದು ಪ್ರಮುಖ ಬುಡಕಟ್ಟು ಸಮಾಜವಾಗಿದೆ. ಕೃಷಿಯಿಂದ ಬದುಕುತ್ತಿದ್ದ ಈ ಸಮುದಾಯವು ಚೂರುಪಾರು ಭೂಮಿಯನ್ನು ದೇಶೀಯ ಜಮೀನ್ದಾರರ ಕೈಗೆ ಒಪ್ಪಿಸಿ ಜಮೀನ್ದಾರರ ಶೋಷಣೆಗಳನ್ನು ಮೌನವಾಗಿಯೇ ಒಪ್ಪಿಕೊಂಡವು. ಭೂಮಾಲೀಕರ ದರ್ಪದೌರ್ಜನ್ಯಗಳಿಗೆ ವಾರಲೀಯರ ಹೆಣ್ಣುಮಕ್ಕಳು ಶೋಷಿತವಸ್ತುಗಳಾದರು. ಹೊಲವನ್ನು ಉಳುವಾಗ ನೊಗಕ್ಕೆ ಒಂದು ಕಡೆ ವಾರಲಿಯನಿದ್ದರೆ ಇನ್ನೊಂದು ಕಡೆ ಎತ್ತನ್ನು ಕಟ್ಟುತ್ತಿದ್ದರೆಂಬುದನ್ನು ಕೇಳಿದರೆ ಶೋಷಣೆಯ ತೀವ್ರತೆಯ ಅರಿವಾಗುತ್ತದೆ.

ಭಾರತದಲ್ಲಿ ಬುಡಕಟ್ಟು ಸಮಾಜಗಳು ಆದಿಕಾಲದಿಂದ ಇವತ್ತಿನವರೆಗೆ ಹಲವು ಬಗೆಯ ತಲ್ಲಣಗಳಿಗೆ ಒಳಗಾಗಿವೆ. ಸ್ವಾತಂತ್ರ್ಯ ಪೂರ್ವಕಾಲದಲ್ಲಿ ಯಾವೊಂದು ರಾಜಕಾರಣದಿಂದ ಈ ಸಮುದಾಯಗಳು ನಲುಗಿದ್ದವೋ, ಅವುಗಳ ಜೊತೆಗೆ ಹೆಚ್ಚಿನ ಸೌಲಭ್ಯಗಳು ರಾಜಕಾರಣದೊಂದಿಗೆ ಕೈಜೋಡಿಸಿವೆ. ಬದಲಾಗಿ ಮತ್ತಷ್ಟು ಬುಡಕಟ್ಟು ಸಮುದಾಯಗಳನ್ನು ಅತಂತ್ರ ಸ್ಥಿತಿಗೆ ತಳ್ಳಿವೆ. ಸಾಮ್ರಾಜ್ಯಶಾಹಿನೀತಿ ಇನ್ನಷ್ಟು ಶೋಷಣೆಗೆ ಒಳಗುಮಾಡಿದೆ. ವಸಾಹತು ಆಧುನಿಕತೆ, ಶಿಕ್ಷಣ, ಸಮಾಜದ ಕೆಳಜಾತಿ, ಶೂದ್ರ, ದಲಿತ, ಮಹಿಳಾಲೋಕಗಳಿಗೆ ವಿಮೋಚನೆ ನೀಡಬಲ್ಲದೆಂಬ ತಜ್ಞ ಅಭಿಪ್ರಾಯಗಳು ಸಾರಿ ಹೇಳುತ್ತವೇನೋ ನಿಜ. ಆದರೆ ಬುಡಕಟ್ಟುಗಳ ಪಾಲಿಗೆ ಆಧುನಿಕತೆ, ಶಿಕ್ಷಣ ತಂದ ಬದಲಾವಣೆಗಳೇನು? ಅವು ಯಾವ ಸ್ವರೂಪದವು? ಎಂಬುದನ್ನು ಊಹಿಸಲು ಸಾಧ್ಯವಿದೆ. ಬುಡಕಟ್ಟುಲೋಕ ಹೊರಗಿನಿಂದ ಬರುವ ಯಾವುದೇ ವಿಚಾರವನ್ನು ಅನುಮಾನದಿಂದ ನೋಡುವ ಇಲ್ಲವೆ ತಿರಸ್ಕರಿಸುವ ಇಲ್ಲವೆ ಮಡಿಮೈಲಿಗೆಯೆಂದು ಭಾವಿಸುತ್ತದೆ. ಇಂತಹ ಸಂದರ್ಭದಲ್ಲಿ ಶಿಕ್ಷಣಕ್ಕೆ, ಆಧುನಿಕ ಸವಲತ್ತುಗಳಿಗೆ ಮುಖಾಮುಖಿಯಾದಾಗ ಬುಡಕಟ್ಟು ಸಮುದಾಯ ಸಂಘರ್ಷವನ್ನು ಕಂಡಿದೆ. ಸ್ವಾತಂತ್ರ್ಯಪೂರ್ವದಲ್ಲಿ ಬುಡುಕಟ್ಟುಗಳ ಶತೃಗಳು ದೇಶೀ ನೆಲದ ಜಮೀನ್ದಾರಿ ಪ್ರಭುಗಳಾಗಿದ್ದರೆ, ಆ ನಂತರದ ದಿನಗಳಲ್ಲಿ ವಸಾಹತುಶಾಹಿಗಳು ಭೂಮಾಲೀಕರ ಜೊತೆ ಸೇರಿಕೊಂಡರು. ಜಮೀನ್ದಾರಿ ಪ್ರಭುತ್ವವು ಜೀತದಂತಹ ಅಮಾನವೀಯ ಅನಿಷ್ಟಗಳನ್ನು ನಿರಂತರವಾಗಿ ಪೋಷಿಸಿಕೊಂಡು ಬಂದಿತು. ವಸಾಹತುಗಳ ಕಾರ್ಯ ಜಮೀನ್ದಾರಿ ಪದ್ಧತಿ ಮತ್ತಷ್ಟು ಶೋಷಣೆಗೆ ಈಡುಮಾಡುತ್ತಾ ಬುಡಕಟ್ಟುಗಳನ್ನು ಒಕ್ಕಲೆಬ್ಬಿಸಿತು. ವಸಾಹತು ಆಡಳಿತವು ಪ್ರಭುತ್ವದ ಜೊತೆಗಿನ ರಾಜಕಾರಣವನ್ನು ಹೊಂದಿದ್ದರಿಂದ ವಸಾಹತು ದೇಶಗಳನ್ನು ಬಹುಬೇಗ ಮಣಿಸಿತು. ಅಲ್ಲಿಯ ನೈಸರ್ಗಿಕ ಸಂಪನ್ಮೂಲವನ್ನು ಬಳಸಿಕೊಂಡಂತೆ ಜನಶಕ್ತಿಯನ್ನು ಬಳಸಿಕೊಳ್ಳಲು ಹಿಂಜರಿಯಲಿಲ್ಲ. ದಕ್ಷಿಣಾಫ್ರಿಕಾದ ಕಪ್ಪು ಜನರನ್ನು ಯುರೋಪಿನ ಮಾರುಕಟ್ಟೆಗಳಲ್ಲಿ ಗುಲಾಮರನ್ನಾಗಿ ಮಾರಾಟಮಾಡಿದ್ದಿದೆ. ಇದು ದಕ್ಷಿಣಾಫ್ರಿಕಕ್ಕೆ ಮಾತ್ರ ಅನ್ವಯಿಸದೆ ತೃತೀಯ ಜಗತ್ತಿನ ರಾಷ್ಟ್ರಗಳೆಲ್ಲ ವಸಾಹತುದೇಶಗಳ ಇಂತಹ ಅನುಭವವನ್ನು ಅನುಭವಿಸಿವೆ.

ಈಶಾನ್ಯ ಭಾರತದಲ್ಲಿ ಬೆಟ್ಟಗುಡ್ಡಗಳಲ್ಲಿ ವಾಸಿಸುವ ಬುಡಕಟ್ಟುಗಳಾದ ಜಾರ್ಖಾಂಡಗಳು, ಸಂತಾಲರು, ನಾಗಾಗಳು, ಬೋಡೋಗಳು, ಮಿಜೋಗಳು ತಮ್ಮ ಅಸ್ತಿತ್ವಕ್ಕಾಗಿ ನಿರಂತರ ಹೋರಾಟ

ನಡೆಸುತ್ತಲೇ ಬಂದಿವೆ. ತಮ್ಮ ಅನನ್ಯತೆ ಉಳಿಸಿಕೊಳ್ಳಲು ಜಾರ್ಖಾಂಡಗಳು ತಮ್ಮದೇ ಆದ ರಾಜ್ಯವನ್ನು ಕಟ್ಟಿಕೊಳ್ಳಲು ಯತ್ನಿಸುತ್ತಿವೆ. ಈ ಬುಡಕಟ್ಟುಗಳು ತಮ್ಮ ಅಸ್ತಿತ್ವಕ್ಕಾಗಿ ಸ್ಥಳೀಯ ಭೂಮಾಲಿಕರ ವಿರುದ್ಧ ಮಾತ್ರ ಹೋರಾಟ ಮಾಡದೆ ವಸಾಹುತು ಪ್ರಭುಗಳ ವಿರುದ್ಧ ಕೂಡಾ ಯುದ್ಧ ನಡೆಸಿವೆ. ಈ ಬುಡಕಟ್ಟು ಸಮುದಾಯಗಳು ಸ್ವತಂತ್ರ ಚಳುವಳಿಯಲ್ಲಿ ತಮ್ಮ ಜೀವನದ ಹಂಗು ತೊರೆದು ಸೆಣಸಾಟ ಹೂಡಿದ್ದವು. ಇಂತಹ ಧಿರೋದಾತ್ತ ಹೋರಾಟಗಳನ್ನು ಸರ್ಕಾರ ಮತ್ತು ಮಾಧ್ಯಮಗಳು ಬುಡಕಟ್ಟು ಹೋರಾಟಗಳನ್ನು ಹೋರಾಟ, ಚಳುವಳಿ ಎಂದು ಗುರುತಿಸಲು ಇಷ್ಟಪಡುವುದಿಲ್ಲ. ಬದಲಾಗಿ ದಂಗೆಯೆಂದು ಹೆಸರಿಸಿ ಕೈತೊಳೆದುಕೊಂಡು ಬಿಡುತ್ತಿವೆ. ಇದು ಇಂಡಿಯಾ ದೇಶದ ನವನಾಗರಿಕತೆಯ ವ್ಯಂಗ್ಯವೂ ಕೂಡು. ಇಂತಹ ಘಟನೆಗಳು ಚರಿತ್ರೆಯ ಉದ್ದಕ್ಕೂ ಸಂಭವಿಸಿವೆ.

ಈಶಾನ್ಯ ಭಾರತದ ಹತ್ತುಹಲವು ಬಡುಕಟ್ಟು ಸಮುದಾಯಗಳು ತಮ್ಮ ಅಸ್ತಿತ್ವಕ್ಕಾಗಿ, ಸಂಸ್ಕೃತಿಯ ಅನನ್ಯತೆಯನ್ನು ಉಳಿಸಿಕೊಳ್ಳುವುದಕ್ಕಾಗಿ ಸಂಘಸಂಸ್ಥೆಗಳ ಮೂಲಕ ಹೋರಾಟ ಮುಂದುವರಿಸುತ್ತಿವೆ. ನೆರೆ ಹೊರೆಯ ರಾಜ್ಯಗಳಾದ ಕರ್ನಾಟಕ, ಆಂಧ್ರಪ್ರದೇಶ, ಮಹಾರಾಷ್ಟ್ರ ರಾಜ್ಯಗಳು ಭಾಷಾವಾರು ಪ್ರಾಂತ್ಯಗಳಾಗಿ ರಚನೆಯಾದಂತೆ ಜಾರ್ಖಾಂಡಗಳು ತಮ್ಮದೇ ಆದ ರಾಜ್ಯಕ್ಕಾಗಿ ಹೋರಾಟ ನಡೆಸಿವೆ. ಆ ನಿಟ್ಟಿನಲ್ಲಿ ಸಂಘಟನೆಗಳ ನಿರ್ಮಾಣ ಕಾರ್ಯಗಳು ಜರುಗುತ್ತಿವೆ.

ಬುಡಕಟ್ಟು ಸಮುದಾಯಗಳ ಮೊದಲ ಶತ್ರುಗಳು ದೇಸೀ ನೆಲದ ಜಮೀನ್ದಾರಿ ವರ್ಗವಾಗಿತ್ತು. ಭೂಮಾಲೀಕರ ಫಾರಂಗಳಲ್ಲಿ (Estate) ಅತ್ಯಂತ ಕಡಿಮೆ ಕೂಲಿಗೆ ಜೀವನಪರ್ಯಂತ ದುಡಿಯಬೇಕಾದ ಅನಿವಾರ್ಯತೆಗಳು ಸೃಷ್ಟಿಯಾಗುತ್ತಲಿವೆ. ದೇಶೀ ನೆಲದ ಭೂಮಾಲೀಕರಿಂದ ವಸಾಹತುಶಾಹಿಗಳು ಗುತ್ತಿಗೆ ಪಡೆದ ಕಾಫಿ, ಟೀ, ಯಾಲಕ್ಕಿ ಎಸ್ಟೇಟ್‌ಗಳಲ್ಲಿರುವ ಬುಡಕಟ್ಟು ಸಮುದಾಯಗಳು ಭೂಮಾಲೀಕರಿಂದ ವಸಾಹತುಶಾಹಿ ಬಂಡವಾಳಿಗರಿಗೆ ಹಸ್ತಾಂತರವಾದರು. ಆಗ ಬುಡಕಟ್ಟುಗಳ ಶೋಷಣೆ ಮತ್ತಷ್ಟು ಹೆಚ್ಚಿತು. ಈ ಸಮಸ್ಯೆ ಸ್ವತಂತ್ರ ಭಾರತದ ಸರ್ಕಾರಗಳ ಆಡಳಿತದವರೆಗೂ ವಿಸ್ತರಿಸಿತು.

ಅಸ್ಸಾಮಿನ ಆದಿವಾಸಿ 'ಬೋಡೊ' ಸಮುದಾಯ ಸ್ವಾತಂತ್ರ್ಯನಂತರದ ತನ್ನ ಸಂಸ್ಕೃತಿ, ಕಲೆ, ಭಾಷೆ ಹಾಗೂ ಅಸ್ತಿತ್ವದ ಉಳಿವಿಗಾಗಿ ಹೋರಾಟಗಳನ್ನು ಕೈಗೊಂಡಿದೆ. ಮುಖ್ಯವಾಗಿ ಅಸ್ಸಾಮಿನ ಬೋಡೋ ಸಮುದಾಯ ಭೂಮಾಲೀಕರ, ಬ್ರಿಟಿಷ್ ಎಸ್ಟೇಟ್‌ಗಳ ವಿರುದ್ಧ ಹಲವು ಬಗೆಯಲ್ಲಿ ಹೋರಾಟಗಳನ್ನು ಎದುರಿಸುತ್ತಲೇ ಬಂದಿದೆ. ಭೂಮಿಗಾಗಿ ನ್ಯಾಯಬದ್ಧ ಹೋರಾಟಗಳನ್ನು ಹಮ್ಮಿಕೊಂಡ ಈ ಸಮುದಾಯ ಆನಂತರದಲ್ಲಿ ವಿದೇಸಿ ವಲಸಿಗರ ವಿರುದ್ಧವೂ ಚಳುವಳಿಗಳನ್ನು ಹಮ್ಮಿಕೊಳ್ಳತೊಡಗಿತು. ದೇಶೀ ನೆಲದ ಜಮೀನ್ದಾರರ ವಿರುದ್ಧ ವಸಾಹತುಶಾಹಿಗಳ ವಿರುದ್ಧ ಹೋರಾಡುವ ಬೋಡೋಗಳ ನ್ಯಾಯವಾದ ಹೋರಾಟಗಳನ್ನು ಸ್ವತಂತ್ಯ ಭಾರತದಲ್ಲಿ ಸರ್ಕಾರಗಳು ಸೈನ್ಯದ ಹೋರಾಟಗಳನ್ನು ಸ್ವತಂತ್ರ ಭಾರತದಲ್ಲಿ ಸರ್ಕಾರಗಳು ಸೈನ್ಯದ ಮೂಲಕ ಚಳುವಳಿಯನ್ನು ಹತ್ತಿಕುತ್ತಿವೆ. ಅಸ್ಸಾಮಿನ ನೈಸರ್ಗಿಕ ಸಂಪತ್ತಿಗಾಗಿ

ಕಾಪಾಡುವ ಬಂಡವಾಳ ಸಮೂಹಗಳು ಬೋಡೋ ಬುಡಕಟ್ಟನ್ನು ಮೂಲವಸ್ತುವಿನಂತೆ ಪರಿಗಣಿಸಿ ಶೋಷಣೆಗೆ ಒಳಪಡಿಸಿದ್ದಾರೆ.

ಭಾರತದಾದ್ಯಂತ ಬುಡಕಟ್ಟು ಸಮುದಾಯಗಳ ವಸ್ತುಸ್ಥಿತಿ ಒಂದೇ ತೆರನಾಗಿದೆಯೆಂದರೆ ತಪ್ಪಿಲ್ಲ. ಉತ್ತರಭಾರತದ ವಾರಲೀಯರ, ಬೋಡೋ, ನಾಗಾ, ಸಂತಾಲರ, ಮುಂಡಾ ಮೊದಲಾದವರ ಹೋರಾಟಗಳ ಸ್ವರೂಪವನ್ನು ಈ ಹಿನ್ನೆಲೆಯಲ್ಲಿ ಗಮನಿಸಿಬೇಕು. ಯಾವುದೇ ರಾಷ್ಟ್ರದ, ಯಾವುದೇ ಸಮುದಾಯದ ಆದಿಮಕಾಲದಲ್ಲಿ ಆ ಸಮುದಾಯದ ಸಂಸ್ಕೃತಿ ವಿಕಾಸಶೀಲ ಲಯಕ್ಕೆ 'ಭೂಮಿ' ಮಹತ್ವದ ಕೊಡುಗೆ ನೀಡಿದೆ. ಮಾನವ ಸಮುದಾಯ 'ಭೂಮಿ' ಮೇಲೆ ಅವತರಿಸಿದಾಗ 'ಭೂಮಿ' ಯಾರ ಒಡೆತನದಲ್ಲಿಯೂ ಇರಲಿಲ್ಲ. ಮಾನವ ಕೃಷಿ ಕೆಲಸಕ್ಕೆ ತೊಡಗಿದಾಗ ತನ್ನ ಶಕ್ತಿ ಸಾಮರ್ಥ್ಯಕ್ಕನುಗುಣವಾಗಿ ಭೂಮಿಯನ್ನು ಕೃಷಿ ಮಾಡುತ್ತಿದ್ದ. ಅಲೆಮಾರಿಯಾದ ಮನುಷ್ಯನಿಗೆ 'ಭೂಮಿ' ಉತ್ಪನ್ನವಸ್ತುವೆಂದು ತಿಳಿದಾಗ ಅದರ ಬಗ್ಗೆ ವಿಶೇಷ ಗಮನವೂ ಸೆಳೆಯಿತು. ಬದಲಾಗಿ ಸಾಮೂಹಿಕ ಕೃಷಿ ಹಿಂದೆ ಸರಿದು ವ್ಯಕ್ತಿಗತವಾಯಿತು. ಸಮಷ್ಟಿ ಪ್ರಜ್ಞೆಯ ಬದಲಾಗಿ ವ್ಯಷ್ಟಿಪ್ರಜ್ಞೆ ಮುಂಚೂಣಿಗೆ ಬಂದಿತು. ಅಲೆಮಾರಿಯಾಗಿದ್ದ ಮನುಷ್ಯ ಸಮಾಜಕ್ಕೆ 'ಕೃಷಿ'ಯ ಮೂಲಕ ನಾಗರಿಕನನ್ನಾಗಿ ಮಾಡುವಲ್ಲಿ 'ಭೂಮಿ' ಮಹತ್ತರ ಪಾತ್ರವಹಿಸಿತು.

ಭೂಮಿಯ ಉಪಯೋಗ ಕಂಡುಕೊಂಡನಂತರ ಮನುಷ್ಯ ಒಂದು ನಿಶ್ಚಿತ ಪ್ರದೇಶದಲ್ಲಿ ವಾಸಿಸಲು ಆರಂಭಿಸಿದ. ಪ್ರತಿವರ್ಷವು ಒಂದು ಸೀಮಿತ ಪ್ರದೇಶವನ್ನು ಸಾಗುವಳಿಮಾಡಲು ಆರಂಭಿಸಿದ. ತಾನು ಹಸನು ಮಾಡಿದ ಜಾಗಕ್ಕೆ ಮತ್ತಾವ ಶಕ್ತಿಗಳು ಬರದಂತೆ ತಡೆದ. ಭೂಮಿಯ ಉತ್ಪಾದಕಶಕ್ತಿ ಮನುಷ್ಯನ ಸಣ್ಣತನ, ಸ್ವಾರ್ಥಗಳನ್ನು ಇಮ್ಮಡಿಗೊಳಿಸಿತು. ಭೂಮಿಯ ಒಡೆತನ ಹೆಚ್ಚಿದಂತೆಲ್ಲಾ ಭೂಮಿಯನ್ನು ಲೆಕ್ಕಾಚಾರದಂತೆ ಗೇಣಿ ಕೊಡಲು ಆರಂಭಿಸಿದ. ಭೂಮಿಯೂ ಮನುಷ್ಯನನ್ನು ಕ್ರೂರಿಯನ್ನಾಗಿ, ನಾಗರಿಕನನ್ನಾಗಿ, ಬಡವನನ್ನಾಗಿ, ಶ್ರೀಮಂತನನ್ನಾಗಿ, ಬಂಡವಾಳಿಗನನ್ನಾಗಿ ಪರಿವರ್ತಿಸಿತು. ಇಲ್ಲಿಂದ ಭೂಒಡೆತನ, ಸ್ವಾಧೀನ, ಅಧೀನ, ಒಡೆಯ-ಆಳು, ಕೂಲಿ ಮೊದಲಾದ ಸಂಬಂಧಗಳು ಆರಂಭಗೊಂಡವು. ಜಮೀನ್ದಾರನ ಪ್ರತಿಷ್ಠೆ, ಅಂತಸ್ತು ಆಸ್ತಿಯಿಂದಲೇ ನಿರ್ಧರಿತವಾಗುತ್ತದೆ. ಮಾನವನು ತನ್ನ ಆರ್ಥಿಕ ಚಟುವಟಿಕೆಗಳಿಗೆ ಮತ್ತೊಬ್ಬರನ್ನು ಬಳಸಿಕೊಳ್ಳಲು ಭೂಮಿಯು ಮೂಲ ಉತ್ಪಾದಕ ಶಕ್ತಿಯಾಯಿತು.

ಭಾರತದಲ್ಲಿ 'ಭೂಮಿ' ಪ್ರತಿಷ್ಠಿತ ಜಾತಿಗಳ ಕಪಿಮುಷ್ಠಿಯಲ್ಲಿದೆ. ಭೂಮಿ ಇಂಡಿಯಾದಲ್ಲಿ ಮೇಲ್ಜಾತಿ ಮೇಲ್ವರ್ಗಗಳ ಒಡೆತನದಲ್ಲಿ ಕೇಂದ್ರೀಕೃತವಾಗಿರುವಂತೆಯೇ, ಅಧಿಕಾರ ಗ್ರಹಣವಾಗಿರುತ್ತದೆ. ಭೂಮಿ ಈ ಹಿನ್ನೆಲೆಯಲ್ಲಿ ಅಸಮಾನತೆಯನ್ನು ಸೃಷ್ಟಿಸಿತು. ಭೂಮಿ ಮೇಲ್ಜಾತಿ ಶ್ರೀಮಂತರನ್ನು ಮತ್ತಷ್ಟು ಶ್ರೀಮಂತರನ್ನಾಗಿಸಿತ್ತು. ಜಮೀನ್ದಾರ ಪ್ರಭುಗಳ ಕೈಕೆಳಗೆ ಅಸಂಖ್ಯ ಭೂರಹಿತ ಸಮುದಾಯಗಳು ಹಲವಾರು ಸಂಕಷ್ಟಗಳಲ್ಲಿ ಬಡತನದ ಬೇಗೆಯಲ್ಲಿ ಬದುಕಲು ಕಾರಣವಾಯಿತು.

ಎ.ಎಸ್. ಪ್ರಭಾಕರ್ ಅವರು ಭೂಮಿಯ ಮೂಲಕ ಸಂಸ್ಕೃತಿಯು ರೂಪುಗೊಳ್ಳುವುದನ್ನು ಹೀಗೆ ಗುರುತಿಸುತ್ತಾರೆ. "ಭಾರತದ ಆದಿಮಸಮಾಜಗಳ ಸಂಸ್ಕೃತಿ ರೂಪಗೊಂಡಿರುವುದೇ ಭೂಮಿಯ ಜೊತೆಗಿನ

ಅವುಗಳ ಅನನ್ಯ ಅನುಸಂಧಾನದಲ್ಲಿ. ಭೂಮಿ ಮತ್ತು ಆದಿಮ ಜನಾಂಗಗಳ ನಿರಂತರ ಅನುಸಂಧಾನದ ಫಲವಾಗಿಯೇ ಸಂಸ್ಕೃತಿಗೆ ವಿಕಾಸಶೀಲ ಪ್ರವೃತ್ತಿ ಮೈಗೂಡಿ ಬಂದಿದೆ. ಆದಿಮ ಜನಸಮೂಹಗಳು, ಸಮುದಾಯಗಳಾಗಿ ಸಂಘಟಿತವಾದದ್ದೆ, ಅವು ಭೂಮಿಯ ಜೊತೆ ಸಾಧ್ಯವಾಗಿಸಿಕೊಂಡ ಆಧ್ಯಾತ್ಮಿಕ ಮೋಹದಿಂದಾಗಿ. ಭೂಮಿ ಲೌಕಿಕದಲ್ಲಿ ಅನೇಕ ಸಾಧ್ಯತೆಗಳನ್ನು ಸಕಾರಗೊಳಿಸುವ ಜೀವಂತ ವೇದಿಕೆಯೆಂಬ ಪರಿಭಾವನೆ ಈ ಸಮುದಾಯಗಳ ಮೋಹವನ್ನು ಆಧ್ಯಾತ್ಮದ ಮಟ್ಟಕ್ಕೆ ಎತ್ತರಿಸಿದೆ. ಇಂದು ಆದಿವಾಸಿಗಳು ಮತ್ತು ಕೆಳಜಾತಿಗಳ ಬಹುತೇಕ ಆಚರಣೆಗಳು ಮತ್ತು ಅಭಿವ್ಯಕ್ತಿ ಸಾಧ್ಯತೆಗಳು ಭೂಮಿಯ ಜೊತೆಗಿನ ಅವುಗಳ ಸಂಬಂಧದ ಫಲವಾಗಿ ಹುಟ್ಟಿಕೊಂಡಿವೆ."[೨]

ಭಾರತದ ಅಂತೆಯೇ ಕರ್ನಾಟಕದ ಬುಡಕಟ್ಟುಗಳು ಜಮೀನ್ದಾರರ ವಿರುದ್ಧ ಹೋರಾಟಗಳನ್ನು ನಿರಂತರವಾಗಿ ಎದುರಿಸುತ್ತಲೇ ಬಂದಿವೆ. ಮೇಲ್ಜಾತಿ ಭೂಮಾಲೀಕ ರಾಜಕಾರಣವು ಕೆಳಜಾತಿ, ಆದಿವಾಸಿಗಳಿಗೆ ಕೊಡಬಾರದೆನ್ನುವ ನಿಲುವು ಮೂಲತಃ ಇಂಡಿಯಾದ ಸಾಮಾಜಿಕ, ಧಾರ್ಮಿಕ, ರಾಜಕಾರಣದೊಂದಿಗೆ ತಳಕುಹಾಕಿಕೊಂಡಿದೆ.

ಬುಡಕಟ್ಟುಗಳ ಹಿಂದುಳಿಯುವುದಕ್ಕೆ ಗೋದಾವರಿ ಪರುಳೇಕರ್ ಅವರು 'ಮಾನವ ಎಚ್ಚೆತ್ತಾಗ' ಎಂಬ ಕೃತಿಯಲ್ಲಿ ಭೂಮಿಯ ಒಡೆತನವು ಪ್ರಮುಖ ಕಾರಣವಾಗಿರುವುದೆಂಬುದನ್ನು ಹೀಗೆ ಗುರುತಿಸುತ್ತಾರೆ. "ಭೂಮಿಯ ಒಡೆತನದ ಸಮಸ್ಯೆಯೇ ಅವರ ಇಂದಿನ ಪರಿಸ್ಥಿತಿಗೆ ಮೂಲಕಾರಣ. ಇದು ಬಗೆಹರಿಯದೇ ಆರ್ಥಿಕ ಸುಧಾರಣೆ ಆಗಲಾರದು. ಭೂಸುಧಾರಣೆ ಕಾಯ್ದೆಯನ್ವಯ ರೈತನು ವ್ಯವಸಾಯ ಮಾಡುತ್ತಿದ್ದ ಜಮೀನಿನ ಗೇಣಿ ಕಡಿಮೆಯಾಯಿತು. ಜಮೀನಿನ ಬೆಲೆಯನ್ನು ಕಂತುಗಳಲ್ಲಿ ಕಟ್ಟಿದ ಆದಿವಾಸಿಯರಿಗೆ ಗೇಣಿ ಕೊಡುವುದಿರಲಿಲ್ಲ. ರೂಢಿಯಲ್ಲಿ ಅವರು ಆದರೆ ತುಸುವೆ ಜಮೀನು, ಅದರಿಂದ ಭಾರತಕ್ಕೆ ಉತ್ಪನ್ನವೇ ಕಡಿಮೆ, ಹೀಗಾಗಿ ಆದಿವಾಸಿಯರ ಕುಟುಂಬದವರ ಉದರ ನಿರ್ವಹಣೆ ಆಗುವಂತಿಲ್ಲ."[೩]

ಆದಿವಾಸಿಗಳಿಗೂ ತಮ್ಮ ದೀನಸ್ಥಿತಿಗೆ ಭೂಮಿಯೆ ಪ್ರಮುಖ ಕಾರಣವೆಂದು ಅರಿವಿದೆ. ಈ ನಿಟ್ಟಿನಲ್ಲಿ ಬುಡಕಟ್ಟುಗಳು ನಿರಂತರವಾಗಿ ಜಮೀನ್ದಾರರ ಕ್ರೂರ ನಡತೆಗಳ ವಿರುದ್ಧ ಹೋರಾಟಗಳನ್ನು ಮಾಡುತ್ತಲೇ ಬಂದಿದ್ದಾರೆ.

ಕಾಡು ಮತ್ತು ಬುಡಕಟ್ಟುಗಳ ಬದುಕು ಆತ್ಮೀಯ ಸಂಬಂಧದ್ದು. ಕಾಡಿನ ಜೀವಿಗಳಾದ ಬುಡಕಟ್ಟು ಸಮುದಾಯಗಳು ಅಲ್ಲಿ ಬದುಕುವುದೆ ನಾಗರಿಕ ಪ್ರಪಂಚಕ್ಕೆ ಸುಪ್ತ ಪ್ರತಿರೋಧವಾಗಿದೆ. ಕಾಡಿನ ಮಧ್ಯದಲ್ಲಿ ನೈಸರ್ಗಿಕವಾಗಿ ಕುಮ್ರಿ ಬೇಸಾಯದಿಂದ ಬದುಕುತ್ತಿದ್ದ ಬುಡಕಟ್ಟುಗಳು ದೇಶೀ ಮತ್ತು ವಸಾಹತುಶಾಹಿಗಳ ಎಸ್ಟೇಟ್‌ಗಳ ನಿರ್ಮಾಣದ ಕಾರ್ಯದಲ್ಲಿ ಕರಗಿಹೋದರು. ಬುಡಕಟ್ಟು ಸಮುದಾಯ ಮತ್ತು ಭೂಮಿಯ ಸಂಬಂಧ ಆಧುನಿಕ ನವ ನಾಗರಿಕತೆಯಂತೆ ಕಾನೂನು ಬದ್ಧದಲ್ಲ. ಆ ಕಾರಣಕ್ಕಾಗಿ ಬಂಡವಾಳಿಗರಿಗೆ ಭೂಮಿಯನ್ನು ಒಪ್ಪಿಸಿ ನಿರ್ಗತಿಕರಾದರು.

## ಕರ್ನಾಟಕದ ಬುಡಕಟ್ಟುಗಳ ಸ್ಥಿತಿಗತಿ

ಕರ್ನಾಟಕದ ಪ್ರಾಕೃತಿಕ ಸನ್ನಿವೇಶಕ್ಕನುಗುಣವಾಗಿ ಇಲ್ಲಿ ವಿಶಿಷ್ಟ ಬುಡಕಟ್ಟುಗಳು ನೆಲೆಸಿವೆ. ಈ ಪ್ರಕೃತಿಯ ವೈವಿಧ್ಯದಂತೆ ಬುಡಕಟ್ಟುಗಳ ಜೀವನವೂ ಕೂಡ ವೈವಿಧ್ಯಮಯ ಲಕ್ಷಣಗಳನ್ನೊಳಗೊಂಡಿದೆ. ಕರ್ನಾಟಕದ ದಟ್ಟ ಅರಣ್ಯ ಪ್ರದೇಶಗಳಿಂದ ಹಿಡಿದು ಬಯಲುಸೀಮೆ, ಉತ್ತರ ಕನ್ನಡ, ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ವೈವಿಧ್ಯಮಯವಾದ ಬುಡಕಟ್ಟುಗಳಿವೆ. ಭೌಗೋಳಿಕ ಪರಿಸರಕ್ಕನುಗುಣವಾಗಿ ಅವರ ಆಹಾರಪದ್ಧತಿ, ಜೀವನಕ್ರಮಗಳು ನಿರೂಪಿತವಾಗಿವೆ. ಉತ್ತರಕನ್ನಡ ಜಿಲ್ಲೆಯ ಹಸಲರು, ಹಾಲಕ್ಕಿ ಒಕ್ಕಲಿಗರು, ದಕ್ಷಿಣಕನ್ನಡ ಜಿಲ್ಲೆಯ ಕೊರಗರು, ಮಲೆಯಕುಡಿಯರು, ಕೊಡಗಿನ ಯರವ, ಕುಡಿಯ ಮತ್ತು ಕೊರಮ, ಜೇನು ಕುರುಬ, ಮೈಸೂರು ಮತ್ತು ಮಂಡ್ಯ ಜಿಲ್ಲೆಯಲ್ಲಿ ಇರುವ ಸೋಲಿಗರು ಬೆಂಗಳೂರು ಮತ್ತು ಕೋಲಾರ ಜಿಲ್ಲೆಯಲ್ಲಿರುವ ಹಕ್ಕಿಪಿಕ್ಕಿಗಳು ಇರುಳಿಗರು, ಬಳ್ಳಾರಿ, ಚಿತ್ರದುರ್ಗ ಮಧ್ಯಕರ್ನಾಟಕದ ಜಿಲ್ಲೆಗಳಲ್ಲಿರುವ ಮ್ಯಾಸಬೇಡರು, ಕಾಡುಗೊಲ್ಲರು ಮೊದಲಾದ ಬುಡಕಟ್ಟು ಸಮುದಾಯಗಳು ಕರ್ನಾಟಕದಲ್ಲಿ ಕಂಡುಬರುತ್ತವೆ.

ಆರ್ಥಿಕವಾಗಿ ಕರ್ನಾಟಕದ ಬುಡಕಟ್ಟುಗಳು ಸಹಜವಾಗಿಯೇ ಹೀನ ಸ್ಥಿತಿಯಲ್ಲಿವೆ. ಉತ್ತರ ಭಾರತದಲ್ಲಿದ್ದಂತೆ, ದಕ್ಷಿಣದಲ್ಲಿ ಆದಿವಾಸಿಗಳು ಅಧಿಕ ಸಂಖ್ಯೆಯಲ್ಲಿ ಒಂದೆಡೆ ವಾಸಿಸುವುದು ಕಂಡುಬರುವುದಿಲ್ಲ. ಉತ್ತರ ಕನ್ನಡದ ಹಾಲಕ್ಕಿ ಒಕ್ಕಲಿಗರನ್ನ ಬಿಟ್ಟರೆ, ಬಹುತೇಕ ಆದಿವಾಸಿ ಸಮುದಾಯಗಳು ಅಲ್ಪಸಂಖ್ಯಾತರೇ ಆಗಿದ್ದಾರೆ. ಅಲ್ಲದೆ ಮಧ್ಯ ಕರ್ನಾಟಕದ ಮ್ಯಾಸಬೇಡರು ಮತ್ತು ಕಾಡುಗೊಲ್ಲ ಸಮುದಾಯಗಳು ಹೆಚ್ಚಿನ ಸಂಖ್ಯೆಯಲ್ಲಿ ವಾಸಿಸುತ್ತಿವೆ. ಮಧ್ಯಕರ್ನಾಟಕದ ಈ ಎರಡು ಬೃಹತ್ ಜನಸಮುದಾಯಗಳು, ಅಧಿಕ ಸಂಖ್ಯೆಯಲ್ಲಿದ್ದರೂ ಸಹ ಆರ್ಥಿಕವಾಗಿ ತೀರಾ ಹಿಂದುಳಿದಿವೆ. ತಕ್ಕಮಟ್ಟಿಗೆ ಕೃಷಿಭೂಮಿಯನ್ನು ಹೊಂದಿದ್ದರೂ ವರ್ತಮಾನದ ವ್ಯವಹಾರಿಕ ಪೈಪೋಟಿಯಲ್ಲಿ ಈ ಆದಿವಾಸಿಗಳು ಸ್ಪರ್ಧೆಗಿಳಿಯುವುದು ಕನಸಿನ ಮಾತು. ಉತ್ತರ ಕನ್ನಡದ ಹಾಲಕ್ಕಿಗಳು, ಹಸಲರು, ಕುಣಬಿಗಳು ಮತ್ತು ಮುಕ್ರಿಯರು ಸರಕಾರದ ಅಭಿವೃದ್ಧಿ ಕಾರ್ಯಕ್ರಮಗಳಿಂದ ಅನೇಕ ಆತಂಕಗಳನ್ನಣ ಎದುರಿಸುತ್ತಲೇ ಬದುಕುತ್ತಿವೆ. ಉತ್ತರ ಕನ್ನಡದಲ್ಲಿ ಪ್ರಕೃತಿಯನ್ನ ಅಭಿವೃದ್ಧಿ ಕಾರ್ಯಕ್ರಮಗಳು ಹಂತಹಂತವಾಗಿ ನಾಶಮಾಡಿದಂತೆ, ಅಲ್ಲಿನ ಆದಿವಾಸಿಗಳನ್ನು ಇನ್ನಿಲ್ಲದಂತೆ ಕಾಡಿವೆ. ಕೈಗಾ, ಕಾಳೀ ಯೋಜನೆ, ಶರವಾತಿ ಟೇಲ್‌ರೇಸ್, ಲಿಂಗನಮಕ್ಕಿ ಅಣೆಕಟ್ಟು, ಸುಪಾ ಅಣೆಕಟ್ಟು, ಬೇಡ್ತೀ ಯೋಜನೆ, ಇತ್ತೀಚಿನ ಸೀಬರ್ಡ್ ಮುಂತಾದ ಬೃಹತ್ ಯೋಜನೆಗಳಲ್ಲಿ ನೆಪ ಮಾತ್ರದ ಪರಿಹಾರವನ್ನೂ ಕಾಣದೆ ಇಲ್ಲಿನ ಆದಿವಾಸಿಗಳು ಒಕ್ಕಲೆದ್ದು ಹೋಗಿವೆ. ಇಂದಿಗೂ ಹವ್ಯಕರ ತೋಟಗಳಲ್ಲಿ ಜೀತ ಮಾಡುತ್ತಿರುವ ಅನೇಕ ಆದಿವಾಸಿಗಳ ಬದುಕು ಹೀನಸ್ಥಿತಿಯಲ್ಲಿದೆ. ನಿಶ್ಚಿತ ಆದಾಯ ತರುವ ಸಂಪನ್ಮೂಲಗಳಿಲ್ಲದೆ, ವರ್ತಮಾನದ ತುರುಸಿನ ಸ್ಪರ್ಧೆಯಲ್ಲಿ ದಿಕ್ಕೆಟ್ಟಿವೆ.

ಇಂದು ಆದಿವಾಸಿಗಳ ಸಂವರ್ಧನೆಗೆ ಅನೇಕ ಸ್ವಯಂ ಸೇವಾ ಸಂಸ್ಥೆಗಳು ನಿರತವಾಗಿವೆ. ವಿದೇಶಿ ಧನ ಸಹಾಯ ಮತ್ತು ಸರಕಾರದ ಸೀಮಿತ ಅನುದಾನಗಳನ್ನ ಮಾತ್ರ ನೆಚ್ಚಿಕೊಂಡು ಕೆಲಸಮಾಡುವ, ಈ ಸಂಸ್ಥೆಗಳು ಆದಿವಾಸಿಗಳ ಬದುಕಿನ ಸಮಗ್ರ ಬದಲಾವಣೆಗೆ ಒಂದು ಸೈದ್ಧಾಂತಿಕ ನೆಲೆಯನ್ನ ಕಂಡುಕೊಂಡಿಲ್ಲ. ಈ ಸಂಸ್ಥೆಗಳ ಕಾರ್ಯ ವೈಖರಿಗೆ ಒಂದು ಸ್ಪಷ್ಟ ಮಿತಿಯೇರ್ಪಟ್ಟಿರುವುದು ಇದೇ ಕಾರಣಗಳಿಗಾಗಿ. ಇವುಗಳ ರಾಜಕೀಯ ಅಮಾಯಕ ನಿಲುವುಗಳಿಂದ ಆದಿವಾಸಿಗಳ ಹೋರಾಟದ ಸಂಕಲ್ಪಶಕ್ತಿಯೂ ಕ್ಷೀಣಿಸಿ ಹೋಗಿದೆ. ಕೆಲವೆಡೆ ಹಲವು ಸ್ವಯಂಸೇವಾ ಸಂಸ್ಥೆಗಳು ಕೇವಲ ದಲ್ಲಾಳಿಗಳಂತೆಯೂ ವರ್ತಿಸುತ್ತಿವೆ. ಕವಿರಂನಂತಹ ಎಡಪಂಥೀಯ ಸಂಘಟನೆಗಳು ಮಾತ್ರ ಆದಿವಾಸಿಗಳಿಗೆ ಆತ್ಮಪ್ರತ್ಯಯ ಮತ್ತು ಹೋರಾಟದ ಸಂಕಲ್ಪಶಕ್ತಿಯನ್ನ ಮೈಗೂಡಿಸಲು ಯತ್ನಿಸುತ್ತವೆ.

ಸರಕಾರೀ ಕಾರ್ಯತಂತ್ರದಲ್ಲಿ ಆದಿವಾಸಿಗಳಿಗೆ ಅನೇಕ ಯೋಜನೆಗಳಿವೆ. ಪ್ರತಿವರ್ಷ ಕೋಟ್ಯಾಂತರ ರೂಪಾಯಿಗಳನ್ನು ಅಯವ್ಯಯದಲ್ಲಿ ಮೀಸಲಾಗಿರಿಸಲಾಗುತ್ತದೆ. ಆದರೆ ಸರಕಾರದ ಅಭಿವೃದ್ಧಿ ನೀತಿಗೂ ಆದಿವಾಸಿಗಳ ಬದುಕುವ ರೀತಿಗೂ ಹೊಂದಾಣಿಕೆಯಾಗುತ್ತಿಲ್ಲ. ಏಕರೂಪೀ ಅಭಿವೃದ್ಧಿಯ ಮಾನದಂಡಗಳು ಆದಿವಾಸಿಗಳ ಜೀವನಕ್ರಮಗಳನ್ನ ಬುಲ್‌ಡೋಜರ್ ತರಹ ಸಮ ಮಾಡಿಬಿಡಲು ಯತ್ನಿಸುತ್ತವೆ. ಆದಿವಾಸಿಗಳಿಗೆ 'ನಾಗರಿಕ' ಪ್ರಪಂಚದ ರಂಗಿಗಿಂತ ತಮ್ಮ ಸಾಂಸ್ಕೃತಿಕ ಚಹರೆ ಮುಖ್ಯ. ಈವತ್ತೂ ಆದಿವಾಸಿಗಳು ತಮ್ಮ ಸಾಂಸ್ಕೃತಿಕ ಚಹರೆಯನ್ನ ಬುಲ್‌ಡೋಜ್ ಮಾಡಲು ಬರುವ ಅಭಿವೃದ್ಧಿ ಯೋಜನೆಗಳನ್ನ ಸಾರಾಸಗಟಾಗಿ ನಿರಾಕರಿಸುತ್ತಾರೆ. ಒತ್ತಾಯಪೂರ್ವಕವಾಗಿ ಕಾಡಿನಿಂದ ಆಚೆಗೆ ಕಟ್ಟಿಕೊಟ್ಟ ಮನೆಗಳನ್ನ, ಆಧುನಿಕ ಸೌಲಭ್ಯಗಳನ್ನ ಬುಡಕಟ್ಟುಗಳು ಒಪ್ಪಿಕೊಳ್ಳುತ್ತಿಲ್ಲ. ಹೀಗಾಗಿ ಸರಕಾರದ ಅಭಿವೃದ್ಧಿ ನೀತಿ ಮತ್ತು ಜನಸಮುದಾಯಗಳ ಮಧ್ಯೆ ಯಾವತ್ತೂ ಕಂದಕಗಳೇರ್ಪಡುತ್ತಿರುವುದು ಭಾರತದ ಜನತಂತ್ರ ವ್ಯವಸ್ಥೆಯಲ್ಲಿ ಒಂದು ದುರಂತವೆಂದೇ ಭಾವಿಸಬೇಕಾಗುತ್ತದೆ.

ಇನ್ನು ಸರಕಾರದ ಅರಣ್ಯನೀತಿ, ವಸಾಹತುಶಾಹಿಯ ಪಡಿಯಚ್ಚೇ ಆಗಿದೆ. ಯಾವ ವಸಾಹತುಶಾಹಿ ಭಾರತದ ಅರಣ್ಯಗಳನ್ನು ಕೊಳ್ಳೆ ಹೊಡೆಯಲು, ಆದಿವಾಸಿಗಳನ್ನ ಕಾಡುಗಳಿಂದ ಒಕ್ಕಲೆಬ್ಬಿಸಲು ರೂಪಿಸಿದ ಅರಣ್ಯನೀತಿಯನ್ನೇ, ಇಂದಿನ ಜನತಂತ್ರ ವ್ಯವಸ್ಥೆಯನ್ನ 'ಆಳುತ್ತಿರುವ' ಮಂದಿಯೂ ಮುಂದುವರೆಸಿಕೊಂಡು ಬಂದಿದ್ದಾರೆ. ಹೀಗಾಗಿ ಪಶ್ಚಿಮದ ಎಲ್ಲಾ ಬಗೆಯ ಮಾನವ ವಿರೋಧೀ ನಿಲುವುಗಳು ಈ ಅರಣ್ಯ ನೀತಿಯಲ್ಲಿ ಮೈಗೂಡಿವೆ. ಅರಣ್ಯವನ್ನ ತಮ್ಮ ಬದುಕಿನ ಒಂದು ಅವಿಭಾಜ್ಯ ಅಂಗವೆಂದೇ ಭಾವಿಸಿರುವ ಆದಿವಾಸಿಗಳನ್ನ, ಅರಣ್ಯದಿಂದ ಹೊರಹಾಕಿ 'ರಕ್ಷಿತ ಅರಣ್ಯ'ವನ್ನಾಗಿಸುವ ಸರಕಾರದ ನೀತಿಯ ಹಿಂದೆ ಯಾವ ಹುನ್ನಾರುಗಳಿವೆ ಎಂಬುದು ಸ್ಪಷ್ಟವಾಗಿಯೇ ಕಾಣುತ್ತಿದೆ. ಕುದುರೆಮುಖ ರಾಷ್ಟ್ರೀಯ ಉದ್ಯಾನ, ನಾಗರಹೊಳೆ ರಾಷ್ಟ್ರೀಯ ಉದ್ಯಾನಗಳನ್ನ ರೂಪಿಸಿದ ಸರಕಾರದ ಹಿಂದೆ ಬಹುರಾಷ್ಟ್ರೀಯ ಕಂಪನಿಗಳ ದುರಾಸೆಗಳೇ ಕೆಲಸ ಮಾಡಿವೆ. ಸರಕಾರದ ಪ್ರವಾಸೋದ್ಯಮ ನೀತಿಯೂ ಸಹ ಈ ಬಗೆಯ 'ಡಾಲರ್‌ಗಳ ಆಸೆ'ಯಿಂದಲೇ ರೂಪಗೊಂಡಿದೆ. 'ನಮ್ಮದೇ ನೆಲದ ಬಹುತ್ವ ನಾಶವಾದರೂ ಚಿಂತೆಯಿಲ್ಲ, ಸರಕಾರಕ್ಕೆ ವಿದೇಶೀ ಹಣದ ಪ್ರವಾಹ ನಿಲ್ಲಬಾರದೆಂಬ' ಉದ್ದೇಶ ಸರಕಾರದ್ದು.

ಶತಮಾನಗಳಿಂದಲೂ ಆದಿವಾಸಿಗಳು ಭೂವಿಯನ್ನು ನಂಬಿಕೊಂಡು ಬಂದಿದ್ದಾರೆ. ಕರ್ನಾಟಕದ ಬಹುತೇಕ ಬುಡಕಟ್ಟುಗಳು ಕೃಷಿಯನ್ನೇ ಅವಲಂಬಿಸಿವೆ. ಆದಿವಾಸಿಗಳ ಪುರಾಣಗಳೆಲ್ಲವೂ, ಬುಡಕಟ್ಟುಗಳ ಕಸಬುಗಳ ಚಾರಿತ್ರಿಕ ಬೆಳವಣಿಗೆಗಳನ್ನ ಕಟ್ಟಿಕೊಡುವಾಗ, ಕೃಷಿಯನ್ನೇ ಮೂಲವಾಗಿಟ್ಟುಕೊಳ್ಳುತ್ತವೆ. ಆದರೆ ಇಂದು ಬಹುತೇಕ ಆದಿವಾಸಿಗಳಿಗೆ ಭೂಮಿ ಇಲ್ಲ. ಹಾಲಕ್ಕಿ ಒಕ್ಕಲಿಗರು ಇಂದು ಅರಣ್ಯದ ಉಪ ಉತ್ಪನ್ನಗಳನ್ನ ನಂಬಿ ಬದುಕುವ ಸ್ಥಿತಿ ಬಂದೊದಗಿದೆ. ಕರ್ನಾಟಕದಲ್ಲಿ ಊಳಿಗಮಾನ್ಯ ವ್ಯವಸ್ಥೆ ಆದಿವಾಸಿಗಳ, ಭೂಮಿಯ ಪಾರಂಪರಿಕ ಅವಲಂಬನೆಯನ್ನ ನಾಶಮಾಡುತ್ತಲೇ ಬಂದಿದೆ. ಈವತ್ತು ದೊಂಬರು, ಹಕ್ಕಿಪಿಕ್ಕಿಗಳಂತಹ ಕೃಷಿಕ ಸಮುದಾಯಗಳೂ ಸಹ ಅಲೆಮಾರಿಗಳಾಗಿ ಬದುಕುತ್ತಿವೆ. ನಾಗರಹೊಳೆಯ ಸೋಲಿಗರು, ಜೇನು ಮತ್ತು ಕಾಡುಕುರುಬರೂ ಸಹ ಅತಂತ್ರ ಸ್ಥಿತಿಯಲ್ಲೇ ಇದ್ದಾರೆ. ಮಲೆಕುಡಿಯರು, ಕುಣಬಿಗಳು, ಯರವರಂತೂ 'ನಾಗರಿಕ' ಪ್ರಪಂಚದ ಕಿರುಕುಳಗಳಿಂದ ಬೇಸತ್ತು ಘಟ್ಟದ ಮೇಲೆ ನಿರ್ಮಾನುಷ ಜಗತ್ತಿನಲ್ಲಿ ಈವತ್ತಿಗೂ ಕೃಷಿಕರಾಗಿ ಬದುಕುತ್ತಿದ್ದಾರೆ.

ಒಟ್ಟಿನಲ್ಲಿ ಕರ್ನಾಟಕದ ಆದಿವಾಸಿಗಳು ಆರ್ಥಿಕವಾಗಿ ಸಬಲವಾಗೇನೂ ಇಲ್ಲ. ಈ ಆದಿವಾಸಿಗಳ ಬದುಕಿಗೂ, ಸರಕಾರದ ನೀತಿಗಳಿಗೂ, ಆಧುನಿಕ 'ನಾಗರಿಕ' ಜಗತ್ತಿಗೂ ಸ್ಪಷ್ಟ ಅಂತರಗಳಿವೆ. ಇವೆಲ್ಲ ಪರಸ್ಪರ ಮುಖಾಮುಖಿಯಾಗುವಲ್ಲಿ ಅನೇಕ ಬಿಕ್ಕಟ್ಟುಗಳು ತಲೆದೋರುತ್ತಿವೆ. ವರ್ತಮಾನದಲ್ಲಿ ಮುಖ್ಯ ಪ್ರವಾಹದ ಜೊತೆ ಆದಿವಾಸಿಗಳನ್ನ ಬೆಸೆಯುವ ಸಾಮರಸ್ಯದ ತಂತು ಇನ್ನು ಅಗೋಚರವಾಗಿಯೇ ಉಳಿದುಕೊಂಡಿದೆ.

\ "ಕರ್ನಾಟಕದಲ್ಲಿ ೬೩ ಪರಿಶಿಷ್ಟ ಬುಡಕಟ್ಟುಗಳನ್ನು ಗುರುತಿಸಲಾಗಿದ್ದು ಪರಿಶಿಷ್ಟ ಬುಡಕಟ್ಟುಗಳ ಪಟ್ಟಿಗೆ ಸೇರಲು ಅವಕಾಶ ದೊರೆಯದಿರುವ ಹಲವಾರು ಬುಡಕಟ್ಟುಗಳು ಇವೆ. ಕೆಲವು ಬುಡಕಟ್ಟುಗಳನ್ನು 'ಅಲೆಮಾರಿ ಬುಡಕಟ್ಟುಗಳು' (Nomadic Tribes) ಕೆಲವು ಬುಡಕಟ್ಟುಗಳನ್ನು 'ಅರೆ-ಅಲೆಮಾರಿ ಬುಡಕಟ್ಟುಗಳು' (Semi-Nomadic Tribes) ಎಂದು ಪರಿಗಣಿಸಿ ಹಿಂದುಳಿದ ವರ್ಗಗಳ (Backward classes) ಪಟ್ಟಿಗೆ ಸೇರಿಸಲಾಗಿದೆ."[೨] ಕರ್ನಾಟಕದಲ್ಲಿ 'ಗೋಸಂಗಿ' ಬುಡಕಟ್ಟು ಸಮುದಾಯವು, ಅತ್ಯಂತ ಕಡಿಮೆ ಜನಸಂಖ್ಯೆಯನ್ನುಳ್ಳದಾಗಿದ್ದು, ಅರೆ ಅಲೆಮಾರಿ ಬುಡಕಟ್ಟು ಸಮುದಾಯದ ಪಟ್ಟಿಗೆ ಸೇರುತ್ತದೆ. ಇವರು ಮೂಲತಃ ಮಹಾರಾಷ್ಟ್ರದಿಂದ ಕರ್ನಾಟಕಕ್ಕೆ ವಲಸೆ ಬಂದವರಾಗಿದ್ದು 'ಮರಾಠಿ' ಭಾಷೆ ಇವರ ಮಾತೃಭಾಷೆಯಾಗಿದೆ. ಗೋಸಂಗಿಗಳ ಭಾಷೆ 'ಮುರುಗಾ' ಭಾಷೆಯನ್ನು ಹೋಲುತ್ತದೆ.\

ಕರ್ನಾಟಕಕ್ಕೆ ಹೊರಗಡೆಯಿಂದ ವಲಸೆ ಬಂದ ಬುಡಕಟ್ಟುಗಳಲ್ಲಿ ಗೋಸಂಗಿಗಳ ಸಮುದಾಯವೂ ಒಂದು. ಗೋಸಂಗಿಗಳು ಕರ್ನಾಟಕಕ್ಕೆ ವಲಸೆ ಬಂದ ವಿವರಗಳು ಯಾವ ಶಾಸನ, ತಾಳೆಗರಿ, ಪತ್ರಗಳಲ್ಲಿ ದಾಖಲಾಗಿಲ್ಲ. ಮೌಖಿಕವಾದ ಯಾವ ಜನಪದ ಕಥೆ, ಗೀತೆಗಳಲ್ಲೂ ಇಲ್ಲ. ತಮ್ಮ ಪೂರ್ವಜರ ಬಗ್ಗೆ ಹೇಳಿಕೊಳ್ಳುವ ಮಾತುಗಳಲ್ಲಿ ವಲಸೆ ಬಂದ ವಿವರಗಳು ಸಿಗುತ್ತವೆ. ಗೋಸಂಗಿಗಳು ಯಾವ ಕಾಲಮಾನದಲ್ಲಿ ಕರ್ನಾಟಕಕ್ಕೆ ಬಂದರು ಹಾಗೂ ಅವರ ಮೂಲ ಉದ್ದೇಶದ ಬಗೆಗೆ ಚರಿತ್ರೆಮೌನವಾಗಿದೆ.

ಕರ್ನಾಟಕದಲ್ಲಿ ಬುಡಕಟ್ಟು ಸಮುದಾಯಗಳು ಒಂದೊಂದು ಭಾಗವನ್ನು ತಮಗಾಗಿ ಗುರುತಿಸಿಕೊಳ್ಳುತ್ತವೆ. ಗೋಸಂಗಿಗಳು ಈ ತರಹ ಒಂದು ನಿರ್ದಿಷ್ಟ ಪ್ರದೇಶವನ್ನು ಗುರುತಿಸಿಕೊಳ್ಳದೆ ಅಲೆಮಾರಿಗಳಾಗಿದ್ದಾರೆ. ಕರ್ನಾಟಕದ ಅಲೆಮಾರಿ ಬುಡಕಟ್ಟು ಸಂಸ್ಕೃತಿಯನ್ನು ಗೋಸಂಗಿಗಳು ಹೊಂದಿದ್ದು, ಕರ್ನಾಟಕದ ಇತರೆ ಬುಡಕಟ್ಟುಗಳಿಗಿಂತ ಸಾಂಸ್ಕೃತಿಕವಾಗಿ ಭಿನ್ನತೆಯನ್ನು ಹಾಗೂ ಅನನ್ಯತೆಯನ್ನುಳಿಸಿಕೊಂಡು ಬಂದಿವೆ. ಕರ್ನಾಟಕದಲ್ಲಿ ಈಗಾಗಲೇ ಅನೇಕ ಬುಡಕಟ್ಟುಗಳ ಬಗೆಗೆ ವಿದ್ವಾಂಸರು, ಸಂಶೋಧಕರು ಅಧ್ಯಯನಗಳನ್ನು ಕೈಗೊಂಡಿದ್ದಾರೆ. ಅರೆಅಲೆಮಾರಿ ಬುಡಕಟ್ಟು ಸಮುದಾಯವಾದ ಗೋಸಂಗಿ ಸಮುದಾಯದ ಬಗೆಗೆ ಕೆಲವೊಂದು ಲೇಖನಗಳನ್ನು ಬಿಟ್ಟರೆ ಇಡೀ ಸಮುದಾಯದ ಬಗೆಗೆ ಅಧ್ಯಾಯನಗಳು ನಡೆದಿದ್ದಲ್ಲ. ಈ ನಿಟ್ಟಿನಲ್ಲಿ ಕರ್ನಾಟಕದಲ್ಲಿ ಗೋಸಂಗಿ ಸಮುದಾಯದ ಸಾಂಸ್ಕೃತಿಕ ಅಧ್ಯಯನಕ್ಕೆ ಹೆಚ್ಚು ಮಹತ್ವವಿದೆಯೆಂದು ಈ ಅಧ್ಯಯನವು ನಿರೀಕ್ಷಿಸುತ್ತದೆ.

## ಗೋಸಂಗಿ ಸಮುದಾಯದ ಹಿನ್ನೆಲೆ

ಕರ್ನಾಟಕದಲ್ಲಿ 'ಗೋಸಂಗಿ' ಮತ್ತು 'ಗೋಸಾಯಿ'(ವಿ) ಸಮುದಾಯಗಳ ಕುರಿತು ಅನೇಕ ಅಪಕಲ್ಪನೆಗಳಿವೆ. ಆದರೆ ವಿಪುಲ ಕ್ಷೇತ್ರಕಾರ್ಯದಿಂದ ನನ್ನ ಗಮನಕ್ಕೆ ಬಂದ ಸಂಗತಿಯೆಂದರೆ ಇವರೆಡು ಕರ್ನಾಟಕಕ್ಕೆ ಸಂಬಂಧಿಸಿದಂತೆ ಭಿನ್ನ ಸಾಂಸ್ಕೃತಿಕ ಚಹರೆಗಳನ್ನೊಳಗೊಂಡ ಸಮುದಾಯಗಳು. 'ಗೋಸಂಗಿ' ಮರಾಠಿ ಮೂಲದ ಅಲೆಮಾರಿ ಸಮುದಾಯವಾಗಿದ್ದು, ನಾಥಪಂಥದ ಎಲ್ಲಾ ತಾಂತ್ರಿಕ ಅಂಶಗಳನ್ನು ಮೈಗೂಡಿಸಿಕೊಂಡಿದೆ. ಅಂದರೆ ಆರ್ಥಿಕವಾಗಿ ಅತ್ಯಂತ ಹೀನಸ್ಥಿತಿಯಲ್ಲಿರುವ ಈ ಸಮುದಾಯವು ಭಿನ್ನ ವೃತ್ತಿಗಳಲ್ಲಿ ತೊಡಗಿಸಿಕೊಂಡಿದೆ. ಅಗ್ಗದ ಸೌಂದರ್ಯ ಸಾಮಗ್ರಿಗಳನ್ನು ಮಾರಾಟ ಮಾಡುವುದು, ಸುಖಾಸೀನಗಳ ದುರಸ್ತಿ ಮಾಡುವುದು, ಒಳನಾಡ ಮೀನುಗಾರಿಕೆ ಇಂತಹ ಬಿನ್ನ ವೃತ್ತಿಗಳಲ್ಲಿ ಚದುರಿಹೋಗಿದ್ದಾರೆ. ಸಾಂಸ್ಕೃತಿಕವಾಗಿ ಗೋಸಾಯಿಗಳಿಗಿಂತ ಭಿನ್ನ ಚಹರೆಗಳನ್ನು ಹೊಂದಿರುವ ಗೋಸಂಗಿ ಸಮುದಾಯವು ಮಹರಾಷ್ಟ್ರಾದ 'ಗೋಸಾಯಿ' ಸಮುದಾಯದ ಸಾಂಸ್ಕೃತಿಕ ಲಕ್ಷಣಗಳಿಗೆ ಸಮೀಪವೆಂಬಂತೆ ಭಾಸವಾಗುತ್ತದೆ. ಆದರೆ ಮಹಾರಾಷ್ಟ್ರದಲ್ಲಿ ಈಗಾಗಲೇ ಸಾಮಾಜಿಕ ಮತ್ತು ಆರ್ಥಿಕ ಸ್ಥಾನಮಾನಗಳಲ್ಲಿ ಎಲೈಟ್ (Elite) ಸ್ತರದಲ್ಲಿರುವ ಗೋಸಾಯಿಗಳಿಗೂ, ಕರ್ನಾಟಕದ ಗೋಸಂಗಿಗಳಿಗೂ ಅನೇಕ ವ್ಯತ್ಯಾಸಗಳಿವೆ. ಹೆಸರಿನ ಮೂಲವನ್ನು ನೆಚ್ಚಿಕೊಂಡು 'ಬಳಿ' ಮತ್ತು ಕೆಲವು ಧಾರ್ಮಿಕ ಚಟುವಟಿಕೆಗಳಲ್ಲಿ ಎಲ್ಲೋ ಒಂದು ಕಡೆ ಸಾಮ್ಯತೆಯಿದ್ದರೂ ಗೋಸಂಗಿ ಮತ್ತು ಗೋಸಾಯಿ ಸಮುದಾಯಗಳು ಕರ್ನಾಟಕದಲ್ಲಿ ಭಿನ್ನ ಸಾಮಾಜಿಕ ಸ್ಥಾನಮಾನಗಳನ್ನು ಹೊಂದಿವೆ.

ಕರ್ನಾಟಕದ ಅಲೆಮಾರಿ ಸಮುದಾಯಗಳ ಚಾರಿತ್ರಿಕ ಬೆಳವಣಿಗೆಗಳ ಕುರಿತು ನಿಖರವಾಗಿ ಹೇಳಲು ಬೇಕಾದ ಆಕರ ಸಾಮಗ್ರಿಗಳು ಪಕ್ಷಪಾತದ ನಿಲುವುಗಳು ಸಹ ಈ ಬಗೆಯ ಸಮುದಾಯಗಳ ಚರಿತ್ರೆಯನ್ನು ಕಟ್ಟಿಕೊಡಲು ಹೋದಾಗ ಸಂಶೋಧಕನನ್ನು ದಿಕ್ಕು ತಪ್ಪಿಸುತ್ತವೆ.

ಸಮುದಾಯಗಳ ಚರಿತ್ರೆ ಕರ್ನಾಟಕದಲ್ಲಿ ರೂಪಗೊಂಡ ಪ್ರಕ್ರಿಯೆಯ ಹಿಂದೆ ಅನೇಕ ರಾಜಕೀಯ ಹುನ್ನಾರಗಳು ಕೆಲಸಮಾಡಿವೆ. ಬ್ರಿಟಿಷ್‌ಪೂರ್ವ ಮತ್ತು ಬ್ರಿಟಿಷ್ ಕಾಲಾವಧಿಯಲ್ಲಿ ರೂಪಗೊಂಡ ಸಮುದಾಯಗಳ ಚರಿತ್ರಾಶಾಸ್ತ್ರವು ಪಶ್ಚಿಮದ Oriental ಮತ್ತು ಶುದ್ಧ ವಸಾಹತುಶಾಹಿ ಅಭೀಪ್ಸೆಗಳ ಮಿಶ್ರಣಗಳಿಂದ ಕೂಡಿದುದಾಗಿದೆ. ಇದೇ ಕಾರಣಕ್ಕೆ ಇಂಡಿಯಾದ ಮೇಲ್ಜಾಜಾತಿಗಳು ಭಾರತೀಯ ಸಂಸ್ಕೃತಿಯ ನಿರ್ಮಾತೃಗಳಾದರೆ, ಕೆಳಜಾತಿ ಮತ್ತು ದುಡಿವ ವರ್ಗಗಳು ಅಪರಾಧಿ ಸಮುದಾಯಗಳೆಂದೇ ಈ ಚರಿತ್ರಾಶಾಸ್ತ್ರದಲ್ಲಿ ಪರಿಗಣಿಸಲ್ಪಟ್ಟವು. ಬಹುಮುಖ್ಯವಾಗಿ ಉಪಯೋಗವಾದಿ ವಸಾಹತುಶಾಹಿ ದೃಷ್ಟಿಕೋನ ಮತ್ತು ದೇಶೀಯ ಮತೀಯ ಪೂರ್ವಗ್ರಹಗಳು ಇಂಡಿಯಾದ ಜನಾಂಗಗಳ ಚರಿತ್ರೆಯನ್ನು ವಿರೂಪಗೊಳಿಸಿದವು. ಈ ಬಗೆಯ ಅಶಾಸ್ತ್ರೀಯ ದೃಷ್ಟಿಕೋನದ ಫಲವಾಗಿ ರೂಪಗೊಂಡ ಸಮುದಾಯಗಳ ಚರಿತ್ರೆ ಇಂದು ಅನೇಕ ವೈಧಾನಿಕ ಸಮಸ್ಯೆಗಳನ್ನು ಸಂಶೋಧಕನ ಮುಂದಿಟ್ಟಿದೆ. ಅದು ಕೆಳಜಾತಿ, ಅಲೆಮಾರಿ ಮತ್ತು ಆದಿವಾಸಿ ಸಮುದಾಯಗಳ ಕುರಿತು ವಸಾಹತುಶಾಹಿ ಚರಿತ್ರೆ ಅನೇಕ ಅಪಕಲ್ಪನೆಗಳನ್ನು ಮೈಗೂಡಿಸಿಕೊಂಡಿದೆ.

ಚರಿತ್ರೆಯ ಯಾವುದೋ ಕಾಲಘಟ್ಟದಲ್ಲಿ ಗೋಸಾಯಿ ಸಮುದಾಯದ ಜೊತೆ ಸಂಬಧವಿದ್ದಿರಿಸಿಕೊಂಡಿದ್ದ ಗೋಸಂಗಿಗಳು ಕಾಲಾನಂತರ ಕರ್ನಾಟಕದ ಕಡೆ ವಲಸೆ ಬಂದ ಕಾರಣಕ್ಕಾಗಿ ಸಾಂಸ್ಕೃತಿಕವಾಗಿ ಮತ್ತು ಸಾಮಾಜಿಕ ಅವಮಾನಗಳ ದೃಷ್ಟಿಯಿಂದ ತುಂಬಾ ಭಿನ್ನರಾಗಿ ಕರ್ನಾಟಕದಲ್ಲಿ ಬದುಕುತ್ತಿದ್ದಾರೆ. ಕರ್ನಾಟಕದಲ್ಲಿ ಅದರಲ್ಲೂ ಉತ್ತರ ಕರ್ನಾಟಕದ ಭೂಮಾಲೀಕ ಸಮಾಜದಲ್ಲಿ ಅನೇಕ ಬಗೆಯ ಭಿನ್ನ ವೃತ್ತಿಗಳಲ್ಲಿ ತೊಡಗಿಸಿಕೊಂಡ ಇವರು ನಿಶ್ಚಿತ ಆರ್ಥಿಕ ಮೂಲಗಳನ್ನು ಸಂಪಾದಿಸಿಕೊಳ್ಳಲಾಗಲಿಲ್ಲ. ಇವರು ಇಂದು ಬಹುವಾಗಿ ನೆಚ್ಚಿಕೊಂಡಿರುವ ಒಳನಾಡ ಮೀನುಗಾರಿಕೆಯೂ ಸಹ, ಸರ್ಕಾರದಿಂದ ಅನುಮೋದಿಸಲ್ಪಟ್ಟ ಬೃಹತ್ ಮೀನುಗಾರಿಕೆಯ ಪ್ರದೇಶಗಳಲ್ಲಿ ಇವರಿಗೆ ಮೀನುಗಾರಿಕೆ ಮಾಡಲು ಅವಕಾಶಗಳಿಲ್ಲ. ಯಾವುದೇ ಲಾಭದಾಯಕವೆನಿಸದ ಕಡೆಯಲ್ಲಿ ಮೀನುಗಾರಿಕೆಗಾಗಿಯೇ ಮೀಸಲಾಗಿರದ ಚಿಕ್ಕಪುಟ್ಟ ತೊರೆ, ಹಳ್ಳ, ನದಿ ತೀರಗಳಲ್ಲಿ ಇವರು ದಿನದ ದೈನಂದಿನ ಬದುಕಿನ ನಿರ್ವಹಣೆಗೆ ಬೇಕಾಗುವಷ್ಟು ಸಂಪಾದಿಸಲೆಂದೇ ಮೀನುಗಾರಿಕೆಯಲ್ಲಿ ತೊಡಗಿಸಿಕೊಳ್ಳುತ್ತಾರೆ.

ಲಭ್ಯವಿರುವ ಮಾಹಿತಿಗಳ ಪ್ರಕಾರ ಗೋಸಂಗಿ ಮತ್ತು ಗೋಸಾಯಿ ಸಮುದಾಯಗಳ ಕುರಿತು ಅನೇಕ ಭಿನ್ನಾಭಿಪ್ರಾಯಗಳು ವ್ಯಕ್ತವಾಗಿವೆ. ನಾನು ಈ ಅಧ್ಯಯನಕ್ಕೆಂದು ಕ್ಷೇತ್ರಕಾರ್ಯದಲ್ಲಿ ತೊಡಗಿದ್ದಾಗ ಕೆಲವೆಡೆ ಗೋಸಂಗಿಗಳು ತಮ್ಮನ್ನು ತಾವು ಗೋಸಾಯಿಗಳೆಂದು ಕರೆದುಕೊಳ್ಳುವುದು ಕಂಡುಬಂದಿದೆ. ಆದರೆ ಗೋಸಂಗಿ ಮತ್ತು ಗೋಸಾಯಿ ಸಮುದಾಯಗಳ ಕುರಿತು ಇಲ್ಲಿಯವರೆಗೆ ನಡೆದ ಅಧ್ಯಯನಗಳು ಈ ಎರಡು ಸಮುದಾಯಗಳ ನಡುವೆ ಸ್ಪಷ್ಟ ಭಿನ್ನತೆಗಳನ್ನು ಗುರುತಿಸಿವೆ. ಆದರೆ ಒಂದು ಅಲೆಮಾರಿ ಸಮುದಾಯದ ಮೂಲವನ್ನು ಹುಡುಕಿಕೊಂಡು ಹೋಗುವುದು ಅತ್ಯಂತ ಪ್ರಯಾಸದ ಕೆಲಸ. ಅಲ್ಲದೆ ಅಲೆಮಾರಿ ಸಮುದಾಯವಾದ, ಸಾಮಾಜಿಕ ಶ್ರೇಣಿಕರಣದಲ್ಲಿ ಅತ್ಯಂತ ಕೆಳಸ್ತರಕ್ಕೆ ಸೇರಿದ ಗೋಸಂಗಿಗಳು

ತಮ್ಮನ್ನು ತಾವು ಮೇಲ್‌ಸ್ತರದ ಗೋಸಾಯಿ ಸಮುದಾಯದ ಜೊತೆ ಸಮೀಕರಿಸಿಕೊಳ್ಳಲು ಯತ್ನಿಸುತ್ತಾರೆ. ಇದು ಈ ಬಗೆಯ ಪ್ರವೃತ್ತಿ ಬಹುತೇಕ ಎಲ್ಲಾ ಕೆಳಜಾತಿ ಸಮುದಾಯಗಳಲ್ಲಿ ಕಂಡುಬರುತ್ತದೆ. ಅಲ್ಲದೆ ಒಂದು ಸಮುದಾಯ ತಾನಿದ್ದ ಹೀನಸ್ಥಿತಿಯನ್ನು ಮಾನಸಿಕವಾಗಿ ಮೀರುವುದಕ್ಕೋಸ್ಕರವಾದರೂ ಈ ಬಗೆಯಲ್ಲಿ ತನ್ನನ್ನು ತಾನು ಉನ್ನತೀಕರಿಸಿಕೊಳ್ಳುವುದಲ್ಲದೆ ತನ್ನ ಸಮುದಾಯವನ್ನು ಮೇಲುಸ್ತರಕ್ಕೆ ಹೆಚ್ಚಿಸಲು ಯತ್ನಿಸುತ್ತದೆ. ಕೇವಲ ಹುಟ್ಟಿನ ಕಾರಣಕ್ಕೋಸ್ಕರ ಒಂದು ಸಮುದಾಯ ಸಮಾಜದಲ್ಲಿ ಏನೆಲ್ಲಾ ಹಿಂಸೆ, ಮತ್ತು ಅವಮಾನಗಳನ್ನು ಅನುಭವಿಸಬೇಕಾದ 'ಇಂಡಿಯಾದಲ್ಲಿ, ಈ ಬಗೆಯ ಸಮುದಾಯಗಳು ತಮ್ಮನ್ನು ತಾವು ಅವಮಾನಗಳನ್ನು ಮೀರಲು ಈ ಬಗೆಯಲ್ಲಿ ಯತ್ನಿಸುತ್ತವೆ. ಇಂಡಿಯಾದಲ್ಲಿ ಜಾತಿಯ ಕಾರಣಕ್ಕೋಸ್ಕರವಾಗಿ, ಮೀಸಲಾತಿ ಸೌಲಭ್ಯಕ್ಕಾಗಿ ಸಂವಿಧಾನ ಕಲ್ಪಿಸಿದ್ದರೂ ಸಾಮಾಜಿಕ ಅವಮಾನಗಳನ್ನು ಮೀರಿ ನಿಲ್ಲುವ ಒಂದೇ ಒಂದು ಕಾರಣಕ್ಕಾಗಿ ಇಂತಹ ಸಮುದಾಯಗಳು ತಮ್ಮನ್ನು ಉನ್ನತೀಕರಿಸಿಕೊಳ್ಳಲು ಮತ್ತು ಆತ್ಮಪ್ರತ್ಯಯವನ್ನು ತಂದುಕೊಳ್ಳಲು ಪ್ರಯತ್ನ ಮಾಡುತ್ತವೆ. ಅಧ್ಯಯನಕಾರ ಇಂತಹ ಸಂದರ್ಭಗಳಲ್ಲಿ ಗೊಂದಲಕ್ಕೀಡಾಗುತ್ತಾನೆ. ಆದರೆ ಅಧ್ಯಯನಕಾರನ ಮುಖ್ಯ ಗುರಿ ಸತ್ಯಶೋಧನೆ. ಅತ್ಯಂತ ಕೆಳಸ್ತರದ ಸಮುದಾಯಗಳ ಆತ್ಮಪ್ರತ್ಯಯಕ್ಕೆ ಕುಂದುಬರದಂತೆ ಸತ್ಯ ಹೇಳುವ ಸಾಂಸ್ಕೃತಿಕ ಜವಬ್ದಾರಿ ಅಧ್ಯಯನಕಾರನದಾಗಿರುತ್ತದೆ. ಉತ್ತರ ಭಾರತ ಮತ್ತು ಉತ್ತರ ಕರ್ನಾಟಕದ ಕಡೆಗಳಲ್ಲಿರುವ ಗೋಸಾಯಿಗಳಿಗೂ ಮಧ್ಯ ಮತ್ತು ದಕ್ಷಿಣ ಕರ್ನಾಟಕದಲ್ಲಿರುವ ಗೋಸಂಗಿಗಳಿಗೂ ಕೆಲವು 'ಬಳಿ' (ಬೆಡಗು)ಗಳ ಮಟ್ಟದಲ್ಲಿ ಸಾಮ್ಯತೆಗಳಿದ್ದರೂ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳಲ್ಲಿ ಅಜಗಜಾಂತರ ವ್ಯತ್ಯಾಸಗಳಿವೆ.

ಡಾ. ಬಸವರಾಜ ನೆಲ್ಲಿಸರ ಅವರು "ಗೋಸಾಯಿಗಳನ್ನ ಸುತ್ತಮುತ್ತಲಿನ ಜನರು ಗ್ಯಾಸರು, ಗೇಸರು, ಗೋಸಂಗಿಗಳೆಂದು ಕರೆಯುತ್ತಾರೆ. ಅವರು ತಮ್ಮನ್ನು 'ಗೋಸಂಗಿ'ಗಳೆಂದು ಕರೆಯಬೇಕೆನ್ನುತ್ತಾರೆ. 'ಗ್ಯಾಸರು' ಎಂದರೆ ಕೋಪಿಸಿಕೊಳ್ಳುತ್ತಾರಾದರೂ ಜನರ ಬಾಯಲ್ಲಿ ಅದೇ ಉಳಿದುಬಂದಿದೆ."[9] ಎಂದು ಗೋಸಂಗಿಗಳ ಕುರಿತು ಬರೆಯುತ್ತಾರೆ. ಹೆಚ್ಚಾಗಿ ಉತ್ತರ ಕರ್ನಾಟಕದಿಂದ ತಮ್ಮ ಕ್ಷೇತ್ರಕಾರ್ಯವನ್ನು ಆರಂಭಿಸಿದ ಥರ್ಸ್ಟನ್ ಅವರು ಸಹ ಗೋಸಾಯಿಗಳ ಬಗ್ಗೆ ಬರೆಯುತ್ತಾರೆಯೆ ಹೊರತು ಗೋಸಂಗಿಗಳ ಕುರಿತು ಎಲ್ಲಿಯೂ ಉಲ್ಲೇಖಿಸಿಲ್ಲ.

ಥರ್ಸ್ಟನ್ ಗೋಸಾಯಿಗಳ ಬಗ್ಗೆ ಬರೆಯುತ್ತಾ "The name Gosain mens Cithes guostvami or master of cows or go-swami, master of senses. In Bengal, the heads of the Bairagi or Vashnava Monusttries are called Gossain, and the preisfs of the Vaishnva vallabhachary sect are known as Gokulastha Gossains."[10] ಥರ್ಸ್ಟನ್ ಹೇಳುವ ಗೋಸಾಯಿಗಳು ಶಂಕರಾಚಾರ್ಯನ ಅನುಯಾಯಿಗಳಾಗಿದ್ದು ಉತ್ತರ ಭಾರತದ ಪ್ರಮುಖ ವೈಧಿಕ ಮಠಗಳ ಜೊತೆ ಸಂಪರ್ಕಗಳನ್ನಿಟ್ಟುಕೊಂಡಿದ್ದಾರೆ. ಥರ್ಸ್ಟನ್‌ನ ಪ್ರಕಾರ ಗೋಸಾಯಿಗಳು ಒಂದು ಧಾರ್ಮಿಕ ಸಮುದಾಯ, ಬಂಗಾಳದಲ್ಲಿ ಇವರಿಗೆ ಬೈರಾಗಿ ಗುರುಪರಂಪರೆ ಎಂದಿದೆ.

ಥರ್ಸ್ಟನ್‌ನ ಪ್ರಕಾರ "There are now Gosayies who, though belonging to the relegious class, have adopted trade as their cheif occupation. As merchants, bankers and tradesmen, they hold a responsible position. Some carry on their transfactions on a large scale in northern India"[2] 'ಗೋಸಾಯಿ' ಎಂಬುದು ಗೋಸಾಯಿ, 'ಗೋಸ್ವಾಯಿ' ಎಂಬ ಹೆಸರುಗಳು ಮುಖ್ಯವಾಗಿ ಮಹಾರಾಷ್ಟ್ರ ಮತ್ತು ಕರ್ನಾಟಕದಲ್ಲಿ ನಾಥಪಂಥದ ಅಲೆಮಾರಿ ಸಂತರಿಗೆ ಕರೆಯುವ ಹೆಸರುಗಳಾಗಿವೆ. ಕರ್ನಾಟಕದಲ್ಲಂತೂ ಈ ಬಗೆಯ ನಾಥ ಸಾಧುಗಳ ಹೆಸರಿನಲ್ಲಿ ಕೆರೆಗಳು, ಬೆಟ್ಟಗಳು, ಊರುಗಳಿವೆ. ಹೀಗಾಗಿ ಇದೊಂದು ಧಾರ್ಮಿಕ ಸಮುದಾಯವಾಗಿದ್ದು, ಎಲ್ಲಾ ಜಾತಿಯ ಜನರು ಗೋಸಾಯಿಗಳು ಆಗಬಹುದಾದ ಸಾಧ್ಯತೆಗಳಿವೆ. ಹೀಗಾಗಿ ಕರ್ನಾಟಕದಲ್ಲಿ ಗೋಸಾಯಿ ಎನ್ನುವ ಸಮುದಾಯ ಉತ್ತರ ಕರ್ನಾಟಕದಲ್ಲಿ ಗೋಸಾಯಿಗಳೆಂದು ಕರೆದುಕೊಳ್ಳುವ ಶೈವ ಬ್ರಾಹ್ಮಣರಿಗೆ ಸಮೀಪವಾಗಿದೆ. ಈ ಶೈವ ಬ್ರಾಹ್ಮಣರು ಸಹ ಗೋಸಾಯಿಗಳೆಂದು ಕರೆದುಕೊಳ್ಳುವ ನಾಥಪಂಥದ ಬೈರಾಗಿಗಳನ್ನ ತಮ್ಮ ಗುರು ಪಂರಪಂರೆಯಿಂದ ಕರೆದುಕೊಳ್ಳುತ್ತದೆ. ಥರ್ಸ್ಟನ್ ಕರ್ನಾಟಕದಲ್ಲಿ ತನ್ನ ಕ್ಷೇತ್ರಕಾರ್ಯದ ಉದ್ದಕ್ಕೂ ಭೇಟಿಯಾದ ಗೋಸಾಯಿಗಳೇ ಈ ಶೈವ ಬ್ರಾಹ್ಮಣರು. ಥರ್ಸ್ಟನ್ ಕೊನೆಯಲ್ಲಿ ಗೋಸಾಯಿಗಳ ಕುರಿತು

"The Gosavi is no caste, and generally any devotee may be called as such, whether he lives a life of cebibacy or not; whether he roams about the country collecting alms in houses like the rest of the people, whether he deads an indolent life or exmploys himself in trade"[3] ಎನ್ನುತ್ತಾನೆ.

ಉತ್ತರ ಭಾರತದಲ್ಲಿ ಗೋಸಾಯಿಗಳು, ಗೋಸಾವಿಗಳು ಎಂದು ಕರೆಯಲ್ಪಡುವ ಸಮುದಾಯವು ಮುಖ್ಯವಾಗಿ ವ್ಯಾಪಾರಿ ಸಮುದಾಯವಾಗಿದ್ದು, ಸಾಮಾಜಿಕ ಸ್ಥಾನಮಾನಗಳಲ್ಲಿ ಉಚ್ಚಸ್ಥರದಲ್ಲಿದೆ. ಅಲ್ಲದೆ ಮಹಾರಾಷ್ಟ್ರದಲ್ಲಿ ಗೋಸಂಗಿಗಳಿಗೆ ಗೋಸಾವಿಗಳೇ ಗುರುಗಳು. ಗೋಸಾವಿಗಳು ಗುರುಪರಂಪರೆಗೆ ಸೇರಿದ ನಾಥಪಂಥದ ಅನುಯಾಯಿಗಳು. ಗೋಸಾವಿಗಳನ್ನು ಕುರಿತು ಮುಂಬಯಿ ಕರ್ನಾಟಕದ ಇಲಾಖೆಗೆ ಸೇರಿದ ಗೆಜಟಿಯರ್‌ನಲ್ಲಿ ಈ ರೀತಿಯಿದೆ. "ಇವರ ಜನ್ಮಭಾಷೆ ಹಿಂದೂಸ್ತಾನೀ ಇವರೊಳಗೆ ಗಿರೀ, ಪುರೀ, ಭಾರತಿ ವನ, ಅರಣ್ಯ, ತೀರ್ಥ, ಆಶ್ರಮ, ಸಾಗರ, ಪರ್ವತವೆಂಬ ಹತ್ತು ಭೇದಗಳಿರುತ್ತವೆ. ಗೋಸಾವಿಗಳು ಶಿವನ ಭಕ್ತರು, ಬೋಐರಾಗಿಗಳ ವಿರೋಧಿಗಳು, ಮಧ್ಯಮಾಂಸ ಮುಟ್ಟುವುದಿಲ್ಲ. ತಂಬಾಕು, ಗಾಂಜ, ಅಫೂ ಇವುಗಳ ವ್ಯಸನ ಬಹಳ. ಬ್ರಾಹ್ಮಣರಿಗೆ ಮಾನಕೊಡುವರು, ಹೆಣಗಳನ್ನು ಹುಗಿಯುವರು. ಗೋಸಾವಿಗಳಲ್ಲಿ ಕೆಲವರು ಲಗ್ನಮಾಡಿಕೊಂಡು ಗೃಹಸ್ಥಾಶ್ರಮಿಗಳಾಗಿ, ಮನೆಮಾಡಿಕೊಂಡು ಒಕ್ಕಲುತನ ಮುಂತಾದ ಹೊರೆಗಳನ್ನು ಮಾಡುವರು. ಇವರ ಹೆಂಗಸರು ಶಾಟಿಗಳನ್ನಾಡುವರು.

ಆದರೆ ಗೋಸಾವಿಗಳಲ್ಲಿ ವಿರಕ್ತರೇ ಬಹಳ. ಅವರು ಜಡೆಯನ್ನು, ಉಗುರುಗಳನ್ನು ಬೆಳೆಸುವರು. ಮೈ ತುಂಬಾ ಭಸ್ಮ ಹಚ್ಚಿಕೊಳ್ಳುವರು. ಲಂಗೋಟಿ ಶಾಟಿಗಳನ್ನು ಧರಿಸುವರು. ಭಿಕ್ಷೆಯಿಂದ ಜೀವಿಸುವರು. ಈ ಗೋಸಾವಿಗಳಿಗೆ ಗಾಂಜಿಯ ವ್ಯಸನವಿರುತ್ತದೆ. ಕೆಲವರು ಅಫೀಮು ತಿನ್ನುವರು, ನಿಜವಾಗಿ ವೈರಾಗ್ಯದಿಂದ ವರ್ತಿಸುವ ಗೋಸಾವಿಗಳು ಬಹುಸ್ವಲ್ಪ ಜನರು ಅವರು ಪಂಚಾಗ್ನಿ, ಊರ್ಧ್ವಬಾಹು, ಏಕಪಾದ ಮುಂತದ ತಪಶ್ಚರ್ಯಗಳನ್ನು ಮಾಡುವರು, ಪಂಚಾಗ್ನಿಯೆಂದರೆ ತಲೆಯ ಮೇಲೆ ಸೂರ್ಯ ನಾಲ್ಕು ದಿಕ್ಕುಗಳಲ್ಲಿ ಅಗ್ನಿಜ್ವಾಲೆ, ಈ ಪ್ರಕಾರ ಐದು ತಾಪಗಳನ್ನ ಸಹನ ಮಾಡಿಕೊಂಡು ದೇವರ ಧ್ಯಾನಮಾಡುವುದು. ಈ ಗೋಸಾವಿಗಳು ಕಾಶಿ, ರಾಮೇಶ್ವರಗಳ ಯಾತ್ರೆಯನ್ನು ಯಾವಾಗಲೂ ಮಾಡುತ್ತಿರುವರು. ಇವರಿಗೆ ಜಾತಿ ನಿರ್ಬಂಧವಿಲ್ಲ. ಬೇಕಾದವರಲ್ಲಿ ಅನ್ನ ಕೊಳ್ಳುವರು. ಇವರು ಬೇಕಾದ ಜಾತಿಯವರಿಗೆ ಉಪದೇಶ ಮಾಡಿ ಅವರನ್ನು ತಮ್ಮ ಶಿಷ್ಯರನ್ನು ಮಾಡಿಕೊಳ್ಳುವರು. ಹೊಸ ಶಿಷ್ಯರಿಗೆ ಇವರು ಬೋಧಿಸುವ ಕಟ್ಟಳೆಗಳೇನೆಂದರೆ ಬ್ರಹ್ಮಚರ್ಯದಿಂದ, ಭಿಕ್ಷೆಯಿಂದ ಜೀವಿಸು ಸಾಧಿಸಿದಷ್ಟು ಅನ್ನದಾನ ಮಾಡು, ತೀರ್ಥಕ್ಷೇತ್ರ ಯಾತ್ರೆಗಳನ್ನು ಮಾಡುತ್ತಿರು ಇತ್ಯಾದಿ.”[೯]

ಕರ್ನಾಟಕ ರಾಜ್ಯ ಗೆಜೆಟಿಯರ್‌ನಲ್ಲಿ ಗೋಸಂಗಿಗಳನ್ನು ಪರಿಶಿಷ್ಟ ಜಾತಿಯ ಪಟ್ಟಿಯಲ್ಲಿ ಸೇರಿಸಲಾಗಿದೆ. ಇದರ ಜೊತೆಗೆ ಗೋಸಾವಿಯೆಂದರೆ ಗೆಜೆಟಿಯರ್‌ನ ಸಂಪಾದಕರು ಕೊಡುವ ಅರ್ಥ “ಧರ್ಮದ ಹೆಸರಿನಲ್ಲಿ ಭಿಕ್ಷೆ ಎತ್ತಿ ತಿರುಗುವವರು”[೧೦]ಎಂದಿದೆ. ಮದ್ರಾಸ್ ಸರ್ಕಾರ ೧೯೫೦ರಿಂದ ಗೋಸಂಗಿಗಳನ್ನು ಪರಿಶಿಷ್ಟಜಾತಿ ಪಟ್ಟಿಗೆ ಸೇರಿಸಲಾಗಿದೆ. ೧೯೦ರಲ್ಲಿ ಅಂದಿನ ಮೈಸೂರು ರಾಜ್ಯದ ದಕ್ಷಿಣಕನ್ನಡ ಜಿಲ್ಲೆ ಹಾಗೂ ಮೈಸೂರು ಜಿಲ್ಲೆಯ ಕೊಳ್ಳೆಗಾಲ ತಾಲೂಕಿಗೆ ಇವರನ್ನು ಸೀಮಿತಗೊಳಿಸಿ, ೧೯೭೭ರಲ್ಲಿ ಈ ಪ್ರಾದೇಶಿಕ ಮಿತಿಯನ್ನು ಸಡಿಲಿಸಿ ಕರ್ನಾಟಕ ರಾಜ್ಯಕ್ಕೆ ವಿಸ್ತರಿಸಲಾಯಿತು.

ಗೋಸಂಗಿಗಳನ್ನು ಕುರಿತು ಕೆ.ಎಸ್.ಸಿಂಗ್ ಕೊಡುವ ವಿವರಣೆ ಹೀಗಿದೆ. “.. It is belived that they are called Gosangi because of their occupation as caretakers of cattle. But others assert that their occupation is beef selling and in support of that contention, the urder word gosh, meaning meat, is mentioned as the root word of their comunity name Gosangi head bads in village were called Goska which mighit have lates become Gosika, Gosikollu and finally Gosangi.”[೧೧]

ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟಿನ ಪ್ರಕಾರ ಗೋಸಂಗಿಗಳ ಬಗ್ಗೆ ಕೆಲವು ಮಾಹಿತಿಗಳು ಸಿಗುತ್ತವೆ.
ಗೋಸ್ಸ, ಘೋಸ (ನಾ) ೧, ಘೋಷ: ಶಬ್ದ: ಗಿಳ್ಳಿನೆಯಲ್ಲವ ಸೋರ್ಕನೆಗಳ ಕಾಲ
ಸಂಕತಿಯ ಗೋಸದೊಳ (ಕಬ್ಬಿಣ ಳಳ) ೨, ಗೊಲ್ಲರಹಳ್ಳಿ, ತುರುಹಟ್ಟಿ
ಗೋಸ್ತ(ನಾ)ಒಂದು ಬಗೆಯ ಸುಗಂಧ ದ್ರವ್ಯ: ರಕ್ತಬೋಳ: ಗೋಸ=ರಕ್ತಬಾಳ (ಗಂಗಾಮ೧೧೩ ಸಂ)
ಗೋಸಂಖ್ಯ (ನಾ) ಗೋವುಗಳ ವಿವರವನ್ನು ಬಲ್ಲವನು: ಗೊಲ್ಲ: ಗೋವಳ (ಸಂ)

ಗೋಸಂಪಿಗೆ (ನಾ) ಒಂದು ಬಗೆಯ ಗಿಡ, ದುಂಡು ಸಂಪಿಗೆಯ ಗಿಡ; ದೇವ ಕಣಿಗಲು
ಗೋಸಗೆ (ನಾ) ದನಕರುಗಳನ್ನು ಮೇವಿಗೆ ಬಿಡುವ ಸಮಯ; ಬೆಳಗಿನ ಕಾಲ ಪುಟ: ೧೯೫೬
ಗೋಸರು (ನಾ) (ಕರಾ) ಹಾವಸೆ: ಪಾವಸೆ ಒಂದು ಬಗೆಯ ಔಷಧವಸ್ತು: ಪಾಚೆ: ಬಂಡೆಗಳ ಮೈಯಲ್ಲೂ ಅಂಥ ಗೋಸರು ಅಲ್ಲೊಂದು ಕಡೆ ಗೋಸರು ಹಿಡಿದ ಹೆಬ್ಬಂಡೆ ಕಾಣಿಸಿತು (ಸ್ವಪ್ನ ಹೊ ೧೬)
ಗೋಸಾಸ (ನಾ) ತುರುಕಾಳಗದಲ್ಲಿ ಹಸುಗಳನ್ನು ಬಿಡಿಸಿಕೊಳ್ಳುವುದಕ್ಕಾಗಿ ತೋರುವ ಸಾಹಸ ಗೋವುಗಳನ್ನು ಹಿಡಿಯುವಲ್ಲಿ ತೋರುವ ಪರಾಕ್ರಮ
ಗೋಸಾಸ್ತ (ನಾ) ಸಾವಿನ ಹಸುಗಳು, ಸಾವಿನ ಹಸುಗಳ ದಾನ
ಗೋಸಾಸ್ಕ (ನಾ) ಒಂದು ಊರಿನ ಹೆಸರು. ಪುಣೆ ಜಿಲ್ಲೆಯ ಬೇಡ ತಾಲ್ಲೂಕಿನ ಒಂದು ಹಳ್ಳಿ
ಗೋಸಾಸಿ (ನಾ) ತುರುಕಾಳಗದಲ್ಲಿ ಹೋರಾಡಿದ ಸಾಹಸಿ; ಒಂದು ಬಿರುದು
ಗೋಸುಗಲಿ (ನಾ) ಕೂಗಿ ಆಡಂಬರಮಾಡುತ್ತಾ ನುಗ್ಗುವ ಶೂರ
ಗೋಸ್ತ (ನಾ) ದನಕರುಗಳ ಕೊಟ್ಟಿಗೆ
ಗೋಸ್ತಂಭ (ನಾ) ದನಕರುಗಳನ್ನು ಕಟ್ಟುವ ಕಂಬ
ಗೋಸ್ತನ (ನಾ) ಆಕಳ ಕೆಚ್ಚಲು ಹೂವಿನ ಗೊಂಚಲು
ಗೋಸ್ವಾಮಿ (ನಾ) ಗೋವುಗಳ ಒಡೆಯ; ಗೋವಾಳಿಗ ಗೊಲ್ಲ; ಗೋಮಾನ್, ಗೋಮಿ, ಗೋಸ್ವಾಮಿ ಈ ೩ ತುರುಕಾರರ್ (ಹಲಾಯು ೪೪-೧೦೭) ಇಂದ್ರಿಯಗಳನ್ನು ಜಯಿಸಿದವನು; ಬೈರಾಗಿ: ಮಹಾರಾಜನೆಂಬ ಹೆಸರಹಿನ ಜೊತೆಗೆ ಗೋಸಾಯಿನ್ (ಗೋಪಾಲಕ) ಗೋಸ್ವಾಮಿ, ಆಚಾರ್ಯ, ಗುರುಪ್ರಭು ಮುಂತಾದ ಬಿರುದುಗಳೂ ರೂಢಿಗೆ ಬಂದವು.

ಕಿಟೆಲ್ ನಿಘಂಟಿನ ಪ್ರಕಾರ ಗೋಸಂಗಿ ಪದದ ವಿವರಣೆ ಈ ರೀತಿ ಇದೆ.

ಗೋಸಾಯಿ go-sayi = ಗೋಸಾವಿ (My; te, M)
ಗೋಸಾವಿ go-sayi, Tbn of ಗೋಸ್ವಾಮಿ No-2 (Mhr.s.Mhr, te)
ಗೋಸ್ವಾಮಿ go-swami ಗೋಸಾಯಿ, ಗೋಸಾವಿ The Master or possessor of cows or of herds, a sudra, and same-times a Brahmana, that has renounced the world, a religious mendicant (of the saiva or Vaisnava Sect) (p: 611)

ಕ್ಷೇತ್ರಕಾರ್ಯದ ಸಮಯದಲ್ಲಿ ಗೋಸಂಗಿಗಳು ಕೊಟ್ಟ ಮಾಹಿತಿಗಳ ಪ್ರಕಾರ ಗೋಸಂಗಿಗಳ ಪಾರಂಪರಿಕ ವೃತ್ತಿಯ ಬಗ್ಗೆ ಒಂದು ಕಥೆ ಹೀಗಿದೆ. ಮಾರುಕಟ್ಟೆಯಲ್ಲಿ ಮಾರಾಟ ಮಾಡಿದ ಗೋವುಗಳನ್ನು ತೆಗೆದುಕೊಂಡವನ ಊರಿಗೆ ತಲುಪಿಸುವ ವೃತ್ತಿಯಲ್ಲಿ ಕೆಲವು ದಿನಗಳ ಕಾಲ ಗೋಸಂಗಿಗಳ ಮೂಲ ಪುರುಷನು ತೊಡಗಿಸಿಕೊಂಡದ್ದನೆಂದು ಗೋಸಂಗಿ ವಕ್ತೃಗಳು ತಿಳಿಸುತ್ತಾರೆ. ಗೋವಿಗೆ (ಹಸು) ಈ ಸಮುದಾಯದಲ್ಲಿ ಪೂಜ್ಯನೀಯ ಸ್ಥಾನವಿದ್ದುದು ತಿಳಿದುಬರುತ್ತದೆ. ಗೋವುಗಳ ಕಡೆ ಕಾಲು, ಚಾಚಿ ಮಲಗುವಂತಿಲ್ಲ. ಗೋವುಗಳಿಗೆ ಕಟ್ಟಿದ ಹಗ್ಗವನ್ನು ದಾಟುವಂತಿಲ್ಲ. ಈ ನಿಯಮವನ್ನು ಗೋಸಂಗಿಗಳು ಇಂದಿನವರೆಗೂ ತಪ್ಪದೆ ಪಾಲಿಸಿಕೊಂಡು ಬರುತ್ತಿದ್ದಾರೆ.

ಕನ್ನಡ ಸಾಹಿತ್ಯ ಪರಿಷತ್‌ನ ನಿಘಂಟಿನ ಪ್ರಕಾರ ಮತ್ತು ನನಗೆ ಕ್ಷೇತ್ರಕಾರ್ಯ ಸಮಯದಲ್ಲಿ ದೊರೆತ ಮಾಹಿತಿಗಳ ಪ್ರಕಾರ ಗೋಸಂಗಿಗಳಿಗೂ ಮತ್ತು ಪಶುಪಾಲನೆಗೂ ಸಂಬಂಧವಿದ್ದು, ಮೂಲದಲ್ಲಿ ಇದೊಂದು ಪಶುಪಾಲಕ ಸಮುದಾಯವಾಗಿತ್ತು ಎಂದು ಹೇಳಬಹುದು. ವಕ್ತೃಗಳು ತಮ್ಮ ಮೂಲದ ಬಗ್ಗೆ ನೀಡುವ ಮತ್ತೊಂದು ಕತೆಯ ಪ್ರಕಾರ "ನಾವು ಲಂಬಾಣಿ, ವಾಗ್ರಿ (ಹಕ್ಕಿಪಿಕ್ಕಿ), ಮಾರ್ವಾಡಿ, ಬೈಲ್ ಕಮ್ಮಾರ್ ಐದು ಜನ ಅಣ್ಣತಮ್ಮಂದಿರು, ಅಪ್ಪನ ಅಪ್ಪಣೆಯಂತೆ ಕಟ್ಟಿಗೆ ತರಲು ಲಂಬಾಣಿಯೂ, ಬೇಟೆಗೆ ಹಕ್ಕಿಪಿಕ್ಕಿಯೂ, ವ್ಯಾಪಾರಕ್ಕೆ ಮಾರ್ವಾಡಿಯೂ, (ಬೈಲ್ ಕಮ್ಮಾರ್ ಬಗ್ಗೆ ಮಾಹಿತಿಯಿಲ್ಲ) ನಾವು ಭಿಕ್ಷೆಗೆ ಹೋದೆವು. ಹೀಗೆ ಒಬ್ಬರು ಒಂದೊಂದು ಕೆಲಸದಲ್ಲಿ ತೊಡಗಿದೆವು. ಹಾಗಾಗಿ ನಾವು ಅಂದಿನಿಂದ ನಮ್ಮ ಕಸುಬು ಭಿಕ್ಷೆಯಾಗಿದೆ." ಎಂದು ಗೋಸಂಗಿಯ ಅನೇಕ ಬುದ್ಧಿಜೀವಿಗಳು ಹೇಳುತ್ತಾರೆ. ಈ ಎಲ್ಲಾ ಅಂಶಗಳನ್ನು ನೋಡಿದರೆ ಈ ಐದು ಜನ (ಸಮುದಾಯದ) ಮೂಲ ಒಂದೇ ಆಗಿರಬಹುದು.

ಒಟ್ಟಿನಲ್ಲಿ ಈ ಬಗೆಯ ಅಲೆಮಾರಿ ಸಮುದಾಯಗಳ ಚಾರಿತ್ರಿಕ ಬೆಳವಣಿಗೆಯನ್ನು ಕಟ್ಟಿಕೊಡಲು ಹೊರಟಾಗ ಅನೇಕ ಸಮಸ್ಯೆಗಳು ಎದುರಾಗುತ್ತವೆ. ಅಲೆಮಾರಿಗಳ ಬದುಕು ಎಷ್ಟು ಸಂಕೀರ್ಣವೋ ಅವುಗಳ ಬದುಕಿನ ಚರಿತ್ರೆಯೂ ಕೂಡಾ ಅಷ್ಟೇ ಸಂಕೀರ್ಣವಾದುದು. ಮುಂದಿನ ಅಧ್ಯಾಯಗಳಲ್ಲಿ ಕ್ಷೇತ್ರಕಾರ್ಯ ಮಾಡಿದ ಸ್ಥಳದಿಂದ ನಾನು ಪಡೆದುಕೊಂಡ ಮಾಹಿತಿಯನ್ನು ವಿಷಯಾನುಸಾರಕೊಡುತ್ತಿದ್ದೇನೆ. ಮುಖ್ಯವಾಗಿ ಅವರ ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಬದುಕಿನ ವಿವರಗಳಿಗೆ ಇಲ್ಲಿ ಹೆಚ್ಚಿನ ಒತ್ತುಕೊಡಲಾಗಿದೆ.

## ಅಡಿಟಿಪ್ಪಣಿಗಳು

೧. ಎ.ಎಸ್. ಪ್ರಭಾಕರ್, ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು, ಪುಟ: ೧೨, ೨೦೦೨
೨. ಎ.ಎಸ್. ಪ್ರಭಾಕರ್, ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು, ಪುಟ: ೯೩, ೨೦೦೨
೩. ಗೋದಾವರಿ ಪರುಳೇಕರ್, ಮಾನವ ಎಚ್ಚೆತ್ತಾಗ ಪುಟ: ೧೬೮, ೨೦೦೦
೪. ತೀ.ನಂ.ಶಂಕರನಾರಾಯಣ, ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು, ಪುಟ: ೧೩, ೧೯೮೨
೫. ಡಾ. ಬಸವರಾಜ ನೆಲ್ಲಿಸರ, ಜಾನಪದ ಸಾಹಿತ್ಯ ದರ್ಶನ - ೧೭, ಪುಟ: ೭೦, ೧೯೯೩
೬. H.V.Nanjundayya & A K. Iyer, The Mysore Tribes and Castes. Vol 3, p: 254, 1988
೭. ಅದೇ ಪುಟ : ೨೫೬
೮. ಅದೇ ಪುಟ: ೨೫೮
೯. ಮುಂಬಯಿ ಇಲಾಖೆಗೆ ಸೇರಿದ ಕರ್ನಾಟಕ ಭಾಗದ್ದು ಅಥವಾ ದಕ್ಷಿಣ ಮಹಾರಾಷ್ಟ್ರ ಸಂಸ್ಥಾನಗಳ ಸಹಿತ (ಧಾರವಾಡ, ಬೆಳಗಾಂ, ವಿಜಾಪುರ, ಕಾನಡಾ)
೧೦. ಸಂ: ಸೂರ್ಯನಾಥ್ ಕಾಮತ್, ಕರ್ನಾಟಕ ಗೆಜಿಟಿಯರ್ ಭಾಗ: ೧. ಪುಟ: ೩೭೭, ೧೯೮೪
೧೧. People of India Vol-II Edit by K.S.Singh ಪುಟ: ೫೬೬, ೧೯೯೩



## ಅಧ್ಯಾಯ - ಎರಡು

# ಗೋಸಂಗಿಗಳ ಸಾಮಾಜಿಕ ವ್ಯವಸ್ಥೆ

೧. ಕೌಟುಂಬಿಕ ವ್ಯವಸ್ಥೆ

೨. ಬಳಿಗಳು

೩. ನ್ಯಾಯ ಪದ್ಧತಿ

೪. ವಸತಿ ವ್ಯವಸ್ಥೆ

೫. ಆಹಾರ ಪದ್ಧತಿ

೬. ಉಡುಗೆ-ತೊಡುಗೆ

## ಗೋಸಂಗಿಗಳ ಸಾಮಾಜಿಕ ವ್ಯವಸ್ಥೆ

ಭಾರತದ ಯಾವುದೇ ಸಮುದಾಯ ಅನನ್ಯತೆಯನ್ನ ಉಳಿಸಿಕೊಳ್ಳಲು ತನ್ನ ಸಾಮಾಜಿಕ ನಿಯಮಗಳನ್ನ ಯಾವುತ್ತೂ ಕಟ್ಟುನಿಟ್ಟಿನಿಂದ ಪಾಲಿಸುತ್ತಲೇ ಇರುತ್ತದೆ. ಇದೇ ಕಾರಣಕ್ಕೆ ಸಹಜವಾಗಿ ಒಂದು ಸಮಾಜ ತನ್ನ ರೂಢಿಗತ ಬದುಕಿನ ನಿಯಮಗಳನ್ನ ಆತ್ಮದಂತೆ ಪೋಷಿಸಿಕೊಂಡು ಬರುತ್ತದೆ. ಈ ನಿಮಯಗಳಿಗೆ ಕರ್ಮಠ ವ್ಯವಸ್ಥೆಯನ್ನ ರೂಪಿಸುವ ಹುನ್ನಾರಗಳೇನಿರುವುದಿಲ್ಲ. ಅದರಲ್ಲೂ ಆದಿವಾಸಿ, ಕೆಳಜಾತಿ, ಅಲೆಮಾರಿ ಮತ್ತು ಶ್ರಮಿಕ ಸಮಾಜಗಳ ಬದುಕಿನ ಕ್ರಮಗಳು ಯಾವತ್ತೂ, ಯಾವುದೋ ಸನಾತನ ಉರುಲಿಗೆ ತಮ್ಮ ಕೊರಳನ್ನು ಕೊಟ್ಟುಕೊಳ್ಳಲಿಚ್ಛಿಸುವುದಿಲ್ಲ. ಇಂಡಿಯಾದ ಆಳುವ ವರ್ಗ ಸಾಮಾಜಿಕ ಕಾನೂನುಗಳನ್ನ ಬರೆದು ಈ ಶ್ರಮಿಕ ಸಮುದಾಯಗಳ ಸಾಮಾಜಿಕ ಮತ್ತು ಆರ್ಥಿಕ ಅಧಿಕಾರಗಳನ್ನ ಕಿತ್ತುಕೊಂಡಿದ್ದರೂ ಇವು ತಮ್ಮ ಜೀವನಕ್ರಮಗಳನ್ನ, ಅವುಗಳ ಆದಿಮ ಚಹರೆಗಳಿಗೆ ಕುಂದಾಗದಂತೆ ಉಳಿಸಿಕೊಂಡು ಬಂದಿವೆ. ಅಂದರೆ ಯಾವ ಬದಲಾವಣೆಗಳೂ ಈ ಸಮಾಜಗಳಲ್ಲಿ ಸಂಭವಿಸಿಲ್ಲ ಎಂದು ಭಾವಿಸಕೂಡದು. ಇಂಡಿಯಾದ ಸಮುದಾಯಗಳು ಯಾವತ್ತೂ ತಮ್ಮ ಸಂಸ್ಕೃತಿಯ ಕೋಶದ ಒಳಗೆ ಹೊಸದನ್ನ 'ಸ್ವೀಕರಿಸುವ' ಮತ್ತು 'ನಿರಾಕರಿಸುವ' ಎಚ್ಚರವನ್ನು ಸದಾ ಜಾಗೃತವಾಗಿಟ್ಟುಕೊಂಡಿರುತ್ತವೆ. ಈ ಬಗೆಯ ನಮ್ಯ ಸ್ವಭಾವದಿಂದಾಗಿಯೇ ಈ ಸಮುದಾಯಗಳು ಯಾವ ಬದಲಾವಣೆಗಳನ್ನ ಚಿಕಿತ್ಸಕ ನೆಲೆಯಲ್ಲೇ ಒಪ್ಪಿಕೊಳ್ಳುತ್ತವೆ. ಆಧುನಿಕವಾಗುತ್ತಲೇ ತನ್ನ ಆದಿಮ ಪ್ರಾಂಜಲ ನಿಲುವುಗಳನ್ನು ಉಳಿಸಿಕೊಳ್ಳುವ ಛಲ ಯಾವತ್ತೂ ಈ ಸಮುದಾಯಗಳಲ್ಲಿ ಜೀವಮತವಾಗಿರುತ್ತದೆ. ಹೀಗಾಗಿ ತನ್ನ ರೂಢಿಗತ ಚಹರೆಗೆ ಆಗಾಗ ಹೊಸ ರೂಪಕೊಡುತ್ತಲೇ ಪರಂಪರೆಯ ಕಡೆಗಿನ ತಮ್ಮ ಆರೋಗ್ಯಕರ ಮೋಹಗಳನ್ನ ಈ ಸಮುದಾಯಗಳು ಬಿಟ್ಟುಕೊಡುವುದಿಲ್ಲ. ಓರಿಯಂಟಲ್ ಅಧ್ಯಯನ ಕ್ರಮಗಳು ಇಂಡಿಯಾದ ಸಮುದಾಯಗಳನ್ನ ಅರ್ಥೈಸಿಕೊಳ್ಳುವಲ್ಲಿ ವಿಫಲವಾಗಿದ್ದೇ ಇಲ್ಲಿ. "ಕೈಗಾರಿಕೀಕರಣದಿಂದಾಗಿ 'ನಾವು' (ಯುರೋಪಿನವರು) ಆಧುನಿಕರಾಗಿ ಬಿಟ್ಟಿದ್ದೇವೆ" ಎಂಬ ಅಹಂನಿಂದಲೇ ಈ ಅಧ್ಯಯನ ಕ್ರಮಗಳು ಪೂರ್ವದೇಶಗಳ ಸಮುದಾಯಗಳನ್ನ ಅರ್ಥಮಾಡಿಕೊಳ್ಳಲೆತ್ನಿಸಿದವು.

ಬದಲಾಗುವುದೆಂದರೆ, ಆಧುನಿಕವಾಗುವುದೆಂದರೆ, ಭೌತಿಕ ಪರಿಕರಗಳನ್ನ ವೇಗವಾಗಿ ಬದಲಿಸಿಕೊಳ್ಳುವುದೆಂದೇ ಪಶ್ಚಿಮದ ಸಮಾಜ ಭಾವಿಸಿತು. ಇದೇ ಕಾರಣಕ್ಕೆ ಇಂಡಿಯಾದ ಕಾಡೊಳಗಿನ ಆದಿವಾಸಿಗಳನ್ನ, ಕೆಳಜಾತಿಗಳನ್ನ ಮತ್ತು ತನ್ನ ಪುರಾತನ ಹಳವಂಡಗಳಲ್ಲಿ ಕೊಳೆಯುತ್ತಲೇ ಬದುಕುತ್ತಿದ್ದ ಪುರೋಹಿತಶಾಹಿಯನ್ನ ನೋಡಿದ ಪಶ್ಚಿಮದವರು, ಈ ಸಮುದಾಯಗಳನ್ನ ಆಧುನಿಕ ಯುಗದ 'ಗೊಡ್ಡು' ಗುಂಪುಗಳೆಂದೇ ಪರಿಗಣಿಸಿದರು. ಈ ಸಮುದಾಯಗಳ ಪ್ರಾಚೀನ ವೈಭವ ಮುಗಿದು ಅವುಗಳ ಸೃಜನಶೀಲತೆ ಬತ್ತಿ ಹೋಗಿದೆಯೆಂದೇ ಓರಿಯಂಟಲ್ ಅಧ್ಯಯನ ಕ್ರಮಗಳು ಭಾವಿಸಿಬಿಟ್ಟವು.

ಇಂಡಿಯಾದ ಬಹುಸಂಸ್ಕೃತಿಗಳ ಅಂತಃಸತ್ವವಿರುವುದೇ ಅವುಗಳು ಬದಲಾವಣೆಗಳನ್ನ 'ಸ್ವೀಕರಿಸುವ' ವಿಶಿಷ್ಟ ಗುಣದಲ್ಲಿ. ಪ್ರಭಾವಶಾಲಿ ಅನೇಕ ಮತಧರ್ಮಗಳು, ಪ್ರಖರ ತತ್ವಜ್ಞಾನದಿಂದ ಹುಟ್ಟಿದ ಅನೇಕ ಜ್ಞಾನಶಿಸ್ತುಗಳು, ಬೃಹತ್ ಸಾಮ್ರಾಜ್ಯಗಳನ್ನ ಕಟ್ಟಿದ ರಾಜಶಾಹಿ ವ್ಯವಸ್ಥೆಗಳು ಇಂಡಿಯಾದ ಸಮಾಜಗಳನ್ನ ಸಾವಿರಾರು ವರ್ಷ ಆಳಿಕೊಂಡು ಬಂದಿದ್ದರೂ ಸಹ, ಇವು ತಮ್ಮ ಆದಿಮ ತಿಳುವಳಿಕೆಯ ಜಗತ್ತನ್ನ ಶ್ರದ್ಧೆಯಿಂದ ಉಳಿಸಿಕೊಂಡು ಬಂದಿವೆ. ಬದಲಾವಣೆಗಳನ್ನ ಪರಿಷ್ಕರಿಸಿ ತನ್ನವುಗಳನ್ನಾಗಿಸಿಕೊಂಡು ಮೂಲ ರೂಪುಗಳನ್ನು ಹಾಗೆಯೇ ಕಾಯ್ದುಕೊಂಡಿವೆ. ಈ ಕಾರಣಕ್ಕಾಗಿ 'ಬದಲಾವಣೆ' ಎಂಬುದು ಕೇವಲ ಭೌತಿಕ ಪರಿಕರಗಳ ಸ್ಫೋಟವಲ್ಲ. ಅದು ಸಮುದಾಯಗಳ ಅಂತಃಸ್ಥ ಬದುಕಿನಲ್ಲಿ ಮತ್ತು ತಿಳುವಳಿಕೆಯ ಜಗತ್ತಿನಲ್ಲಿ ಸಂಭವಿಸುವ ಬೌದ್ಧಿಕ ಪ್ರಕ್ರಿಯೆ.

ಇದೇ ದೃಷ್ಟಿಕೋನದಿಂದ ನಾನು ಗೋಸಂಗಿ ಸಮುದಾಯವನ್ನು ಈ ಮಹಾಪ್ರಬಂಧದಲ್ಲಿ ನೋಡಲು ಇಚ್ಛಿಸಿದ್ದೇನೆ. ಈವತ್ತು ಆದಿಮ ಜಗತ್ತೊಂದರಲ್ಲಿ ಬದುಕುತ್ತಿರುವಂತೆ ಕಂಡುಬರುವ ಈ ಸಮುದಾಯದ ಸಾಮಾಜಿಕ ವ್ಯವಸ್ಥೆಯಲ್ಲಾಗಿರುವ ಬದಲಾವಣೆಗಳನ್ನ ಈ ಅಧ್ಯಯನದಲ್ಲಿ ದಾಖಲಿಸಲೆತ್ನಿಸಿದ್ದೇನೆ.

ಜಾಗತೀಕರಣದ ಈ ಹೊತ್ತಿನ ಸಂದರ್ಭದಲ್ಲಿ ಗೋಸಂಗಿಗಳು ಇನ್ನು ಅಲೆಮಾರಿಗಳಾಗಿ, ಅರೆ ಅಲೆಮಾರಿಗಳಾಗಿ, ಸಂಚಾರಿ ಜೀವನ ನಡೆಸುತ್ತಿರುವುದು ಕಂಡುಬರುತ್ತದೆ. ಪ್ರಪಂಚವೇ ಒಂದು ಹಳ್ಳಿಯಾಗುವ, ಆರ್ಥಿಕತೆಯೇ ಜೀವನದ ಪರಮ ಮೌಲ್ಯವಾಗಿರುವ ಈ ದಿನಗಳಲ್ಲಿ ಪ್ರಪಂಚೀಕರಣದ ಅಬ್ಬರದ ದಾಳಿಗೆ ಭಾರತದ ಯಾವೊಂದು ಬುಡಕಟ್ಟುಗಳೂ ಬದುಕು ಹಸನುಗೊಳ್ಳುವ ಲಕ್ಷಣಗಳು ಕಾಣುತ್ತಿಲ್ಲ. ವಿವಿಧ ಭಾಷೆ, ಧರ್ಮ, ಜಾತಿ, ಬುಡಕಟ್ಟುಗಳಿರುವ ಭಾರತದಲ್ಲಿ ಜಾಗತೀಕರಣವೂ ಕಷ್ಟವೂ ಅಲ್ಲ, ಸಾಧುವೂ ಅಲ್ಲ ಎನ್ನುವ ಸ್ಥಿತಿ ನಿರ್ಮಾಣವಾಗಿದ್ದರೂ, ಅದರ ಪರಿಣಾಮಗಳು ಸಮಾಜದ ಮೇಲೆ, ಕುಟುಂಬದ ಮೇಲೆ, ರಾಷ್ಟ್ರದ ಮೇಲೆ ಬೀರಿವೆ. ಮಾಹಿತಿ ತಂತ್ರಜ್ಞಾನವು ಇಂದು ಮನುಷ್ಯಜೀವನದ ಪ್ರತಿಯೊಂದು ಹೆಜ್ಜೆಯನ್ನು ನಿಯಂತ್ರಿಸುತ್ತದೆ. ನಿರೂಪಿಸುತ್ತದೆನ್ನುವಷ್ಟು ಅದರ ಕ್ಷೇತ್ರಕಾರ್ಯ ವಿಸ್ತರಿಸಿದೆ. ಪ್ರಪಂಚ ಇಂದೆಂದು ಕೇಳಲಾರದ, ನೋಡಲಾರದ ಹೊಸ ಹೊಸ ತಂತ್ರಜ್ಞಾನಗಳ ಆವಿಷ್ಕಾರ, ಪ್ರಯೋಗಗಳನ್ನು ಕಾಣುತ್ತಿದೆ. ಬದಲಾಗಿ ಅಲೆಮಾರಿ ಗೋಸಂಗಿ ಸಮುದಾಯವು ಇಂತಹ

ಅತ್ಯಾಧುನಿಕಯುಗದಲ್ಲಿಯೂ ಕೂಡಾ ಸಾಮಾಜಿಕ ಜೀವನ ನಿರೂಪಣೆಗೆ ತಮ್ಮದೇ ಆದ ರೀತಿ ರಿವಾಜುಗಳನ್ನು, ಕಟ್ಟುಪಾಡುಗಳನ್ನು ನಿರ್ಮಿಸಿಕೊಂಡಿದೆ. ಆ ಕಟ್ಟುಪಾಡುಗಳನ್ನು ಚಾಚೂ ತಪ್ಪದೇ ಇಂದಿಗೂ ಅನುಸರಿಸಿಯೇ ಜೀವನ ನಡೆಸುತ್ತಿದ್ದಾರೆ. ಸಂಪ್ರದಾಯಬದ್ಧ ವಿಧಿ ನಿಷೇಧಗಳು, ನಂಬಿಕೆಗಳು, ಆ ಸಮುದಾಯವನ್ನು ಕಾಪಾಡುವಲ್ಲಿ ರಕ್ಷಾ ಕವಚದಂತೆ ಕಾರ್ಯನಿರ್ವಹಿಸುತ್ತವೆ.

ಶತಮಾನಗಳಿಂದ ಸಂಚಾರಿ ಜೀವನವನ್ನು ನಡೆಸಿಕೊಂಡು ಬಂದ ಗೋಸಂಗಿಗಳಲ್ಲಿ 'ಜಾತಿ ಪಂಚಾಯತಿ' ಒಂದು ದೊಡ್ಡ ಶಕ್ತಿಯಾಗಿ ಇಂದಿಗೂ ಸಹ ಉಳಿದುಕೊಂಡು ಬಂದಿರುವುದು ಕಂಡು ಬರುತ್ತದೆ. ಈ ಹೊತ್ತಿನ ಆಧುನಿಕ ಯುಗದಲ್ಲಿಯೂ ಕೂಡಾ ಗೋಸಂಗಿಗಳು ಕೋರ್ಟು, ಪೋಲೀಸುಠಾಣೆಗಳ ಮೆಟ್ಟಿಲುಗಳನ್ನು ಹತ್ತಿಲ್ಲ. ಎಂತಹ ಕಷ್ಟದ ಪರಿಸ್ಥಿತಿಯಲ್ಲಿಯೂ ಕೂಡಾ ಪಂಚಾಯತಿಗಳಲ್ಲಿಯೇ ವ್ಯಾಜ್ಯಗಳನ್ನು ಬಗೆಹರಿಸಿಕೊಳ್ಳುತ್ತಾರೆ. ಇಂದು ನಗರದ ಹಾಗೂ ಪಟ್ಟಣದಲ್ಲಿ ಹತ್ತಿರ ವಾಸಿಸುವವರಲ್ಲಿ ಇತ್ತೀಚಿಗೆ ಬದಲಾವಣೆಗಳು ಕಂಡುಬರುತ್ತಿವೆ. ಈ ವಿಷಯದಲ್ಲಿ ಪ್ರಾದೇಶಿಕವಾಗಿ ಭಿನ್ನತೆಗಳು ಕಂಡು ಬರುತ್ತವೆ. ಗೋಸಂಗಿಗಳ ಸಾಮಾಜಿಕ ವ್ಯವಸ್ಥೆ ನಡೆದು ಬಂದದ್ದರ ಬಗ್ಗೆ ಯಾವುದೇ ಲಿಖಿತ ಆಧಾರಗಳಾಗಲಿ, ಪುರಾಣ ಐತಿಹಾಸಿಕ ಶಾಸ್ತ್ರಗ್ರಂಥಗಳಲ್ಲಿನ ಆಧಾರಗಳಾಗಲಿ ಸಿಗುವುದಿಲ್ಲ. ಹಾಗಾಗಿ ಇಂದಿಗೂ ಸಹ ವಿವಿಧ ಬುಡಕಟ್ಟುಗಳಲ್ಲಿರುವಂತೆ ಇವರಲ್ಲೂ ಸಹ ಆಯಾ ಪರಿಸರಕ್ಕೆ ತಕ್ಕಂತೆ ತಮ್ಮಲ್ಲಿ ಸಾಮಾಜಿಕ ಕಟ್ಟುಪಾಡುಗಳನ್ನು ಅನುಸೂಚಿಕವಾಗಿ ತಪ್ಪದೇ ಅನುಸರಿಸಿಕೊಂಡು ಬರುತ್ತಿದ್ದಾರೆ. ಕುಟುಂಬದ ಹಿರಿಯರ ಆಜ್ಞೆಗಳನ್ನು ಪಾಲಿಸುವುದು, ಸಮುದಾಯದ ದೈವಗಳಿಗೆ ಗೌರವಕೊಡುವುದು, ಸಮುದಾಯದ ಎಲ್ಲಾ ಕಾರ್ಯಗಳಲ್ಲಿ ಪಾಲ್ಗೊಳ್ಳುವುದು, ನ್ಯಾಯಪಂಚಾಯತಿಗೆ ತಲೆಬಾಗುವುದು ಮೊದಲಾದ ಪಾರಂಪರಿಕ ಮೌಲ್ಯಗಳ ನೆರಳಿನಲ್ಲಿ ಗೋಸಂಗಿಗಳ ಬದುಕು ಸಾಗುತ್ತಿದೆ. ಹಿಂದೆ ಅಲೆಮಾರಿಗಳಾಗಿದ್ದ ಗೋಸಂಗಿಗಳು ಇಂದು ಅರೆ ಅಲೆಮಾರಿಗಳಾಗಿ (Semi Nomadic) ಅಲ್ಲಲ್ಲಿ ತಂಡೋಪತಂಡಗಳಾಗಿ ನೆಲೆಯೂರಲು ಪ್ರಯತ್ನಿಸುತ್ತಿದ್ದಾರೆ. ವಾಸಕ್ಕೆ ತುಂಡು ಜಾಗವನ್ನು ಕೊಳ್ಳಲು ಶಕ್ತಿ ಇಲ್ಲದ ಇವರು ಊರ ಹೊರಗಿನ ಸರ್ಕಾರಿ ಅಥವಾ ಆಯಾ ಊರಿನ ಭೂಮಾಲಿಕರ ಬೀಳು ಬಿಟ್ಟ ಸ್ಥಳಗಳಲ್ಲಿ ಡೇರಾಗಳನ್ನು ನಿರ್ಮಿಸಿಕೊಳ್ಳುವರು. ಆರ್ಥಿಕವಾಗಿ ಸಬಲರಿರುವ ಇವರಲ್ಲಿ ಕೆಲವರು ಆರ್.ಸಿ.ಸಿ., ಜಿಂಕ್‌ಶೀಟ್, ಹೆಂಚಿನ ಮನೆಗಳನ್ನು ಕಟ್ಟಿಕೊಂಡಿದ್ದಾರೆ. ಉಳಿದಂತೆ ಶೇಕಡಾ ಎಪ್ಪತ್ತರಷ್ಟು ಜನ ಡೇರಾ (Tent)ವಾಸಿಗಳಾಗಿದ್ದಾರೆ. ಕೆಲವು ಪ್ರದೇಶಗಳಲ್ಲಿ ಸ್ಥಳೀಯರ ಹಾಗೂ ಸರಕಾರಿ ಅಧಿಕಾರಿಗಳ ಸಹಕಾರದಿಂದ ಕೆಲವರಿಗೆ 'ಜನತಾ' ಮನೆಗಳು ದೊರೆತಿರುವುದು ನನ್ನ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕಂಡಿದ್ದೇನೆ. ಆದರೆ ತುಂಬಾ ಹಿಂದುಳಿದ ಮತ್ತು ಅತ್ಯಂತ ಬಡ ಕುಟುಂಬಗಳಿಗಾಗಿ ರೂಪಿಸಿದ ಸರ್ಕಾರದ ಯೋಜನೆಗಳ್ಯಾವೂ ಸರಿಯಾದ ಪ್ರಮಾಣದಲ್ಲಿ ಗೋಸಂಗಿಗಳಿಗೆ ತಲುಪದೇ ಇರುವುದು ದುರ್ದೈವ. ಬಹುಶಃ ಇವರ ಅಲೆಮಾರಿ ಬದುಕು ಸರ್ಕಾರಿ ಯೋಜನೆಗಳನ್ನು ಪಡೆಯುವಲ್ಲಿ ವಿಫಲವಾಗಿರಬೇಕು ಹಾಗೂ ಸರ್ಕಾರಿ ಯೋಜನೆಗಳ ಯೋಜಕರಿಗೂ ಇಂತಹ ಅಲೆಮಾರಿಗಳನ್ನು ಗುರಿತಿಸುವುದು ಕಷ್ಟವಾಗಿರಬೇಕು. ಹೀಗೆ ಕೆಲವು ಪ್ರದೇಶದಲ್ಲಿ

ಕೆಲವು ಕುಟುಂಬಗಳು ತಮ್ಮ ಸ್ವಂತ ಶಕ್ತಿಯಿಂದ ಮತ್ತು ಸರ್ಕಾರದ ಸಹಕಾರದಿಂದ ಸೂರುಗಳನ್ನು ನಿರ್ಮಿಸಿಕೊಂಡರೆ, ಇನ್ನು ಕೆಲವರು ಈಗಲೂ ಡೇರಾವಾಸಿಗಳಾಗಿಯೇ ಜೀವನ ಸಾಗಿಸುತ್ತಿರುವುದು ಸಾಮಾನ್ಯ ಸಂಗತಿಯಾಗಿದೆ.

ಹಿಂದೆ ಇವರು ಊರು ಬಿಟ್ಟ ಮೂರ್ನಾಲ್ಕು ಕಿಲೋಮೀಟರ್ ದೂರದಲ್ಲಿ ವಾಸಿಸುತ್ತಿದ್ದು, ಕಾಡು ಪ್ರಾಣಿಗಳಿಂದ ತಮ್ಮ ಜೀವಗಳನ್ನು ರಕ್ಷಿಸಿಕೊಳ್ಳಲು ಡೇರಾಗಳ ಸುತ್ತ ಬಲೆಯನ್ನು ಕಾಕುತ್ತಿದ್ದರಂತೆ. ಜೊತೆಗೆ ಬೇಟೆನಾಯಿಗಳೂ ಸಹ ಅವರ ರಕ್ಷಣೆಗೆ ಸಹಕಾರಿಯಾಗಿರುತ್ತಿದ್ದವಂತೆ. ಬಲೆ ಮತ್ತು ಬೇಟೆನಾಯಿಗಳು ಇಲ್ಲದ ಸಂದರ್ಭದಲ್ಲಿ ಹಿರಿಯರಾದವರು ರಾತ್ರಿಯೆಲ್ಲ ಎಚ್ಚರವಿದ್ದು ತಮ್ಮ ಕುಟುಂಬಗಳನ್ನು ರಕ್ಷಿಸಿಕೊಳ್ಳುತ್ತಿದ್ದರೆಂದು ವಕ್ತೃಗಳಿಂದ ತಿಳಿದು ಬರುತ್ತದೆ. ಈಚೆಗೆ ನಗರ ಪ್ರದೇಶಗಳಲ್ಲಿ ಹೆಚ್ಚಾಗಿ ವಾಸಿಸುತ್ತಿರುವುದರಿಂದ ಗೋಸಂಗಿಗಳು ತಮ್ಮ ಕುಟುಂಬಗಳನ್ನು ಕಾಡುಪ್ರಾಣಿಗಳಿಂದ ರಕ್ಷಿಸಿಕೊಳ್ಳಲು ಹಿಂದೆ ಪಟ್ಟಷ್ಟು ಕಷ್ಟ ಇಂದು ಪಡಬೇಕಾಗಿಲ್ಲ. ಬದಲಾಗಿ ಗೋಸಂಗಿಗಳು ಇಂದು ಇರಲು ಒಂದು ಸೂರು ಕಾಣದೆ ಅತಂತ್ರ ಸ್ಥಿತಿಯಲ್ಲಿದ್ದಾರೆ. ಇನ್ನೂ ಕೆಲವು ಪ್ರದೇಶಗಳಲ್ಲಿ ಸ್ಥಳೀಯರ ಹಾಗೂ ಸರ್ಕಾರಿ ಅಧಿಕಾರಿಗಳ ಕಿರುಕುಳದಿಂದ ತುಂಬಾ ಬೇಸತ್ತಿದ್ದಾರೆ. ಇಷ್ಟೆಲ್ಲಾ ತೊಂದರೆಗಳ ನಡುವೆಯೂ ತಮ್ಮ ಬದುಕು ಶಿಸ್ತು-ಸಂಯಮದಿಂದ ಕೂಡಿದೆ.

ಗೋಸಂಗಿಗಳು ಶೇಕಡಾ ಎಪ್ಪತ್ತರಷ್ಟು ಡೇರಾವಾಸಿಗಳಾಗಿದ್ದು, ಇರುವ ತಮ್ಮ ಪುಟ್ಟ ಡೇರಾದಲ್ಲಿ ದಿನಬಳಕೆ ವಸ್ತುಗಳನ್ನು ಅಚ್ಚುಕಟ್ಟಾಗಿ ಜೋಡಿಸಿಕೊಂಡು ಮಲಗಲು ಸ್ಥಳಾವಕಾಶ ಮಾಡಿಕೊಳ್ಳುವರು. 'ಬಾಲಕೃಷ್ಣನ ಬಾಯಲ್ಲಿ ಬ್ರಹ್ಮಾಂಡವೇ ಅಡಗಿದೆ' ಎನ್ನುವಂತೆ ಚಿಕ್ಕದಾದ ಡೇರಾದಲ್ಲಿ ತಮ್ಮ ಜೀವನವೇ ಅಡಗಿ ಕೊಂಡಿರುತ್ತದೆ. ಹಾಸಲು, ಹೊದೆಯಲು ಚಾಪೆ, ಕೌದಿಗಳನ್ನು ಬಳಸುತ್ತಾರೆ. ಹಿಂದೆ ಡೇರಾಗಳ ನಿರ್ಮಾಣಕ್ಕೆ ಹಳೇ ಸೀರೆ, ಪಂಚೆ ಇನ್ನಿತರ ತುಂಡು ಬಟ್ಟೆಗಳನ್ನು ಜೋಡಿಸಿ ಹೊಲಿದ ಕೌದಿಯನ್ನು ಬಳಸುತ್ತಿದ್ದರು. ಇತ್ತೀಚಿಗೆ ಪ್ಲಾಸ್ಟಿಕ್ ಚೀಲಗಳನ್ನು ಹೊಲೆದು ಡೇರಾ ಹೊದಿಕೆಯನ್ನು ಸಿದ್ಧಪಡಿಸಿಕೊಳ್ಳುವರು. ಕೆಲವುಕಡೆ ಸ್ನಾನಕ್ಕಾಗಿ ಡೇರಾದ ಮುಂದುಗಡೆ ಹಳೇಸೀರೆ ಅಥವಾ ಗೋಣಿಚೀಲಗಳಿಂದ ಒಂದಿಷ್ಟು ಆಸರೆ ಮಾಡಿಕೊಂಡಿದ್ದಾರೆ. ಇನ್ನೂ ಕೆಲವು ಕಡೆ, ಸೊಪ್ಪು, ಸದೆಗಳನ್ನು ಬಳಸಿ ಆಸರೆಮಾಡಿಕೊಂಡಿರುತ್ತಾರೆ. ಸಾಕುಪ್ರಾಣಿಗಳಾದ ಹಾಗೂ ತಮ್ಮ ಅಲೆಮಾರಿ ಬದುಕಿಗೆ ಆಸರೆಯಾಗುವ ಆಕಳು, ಕುದುರೆ, ಕತ್ತೆ, ಕುರಿ, ಕೋಳಿ, ನಾಯಿ ಮುಂತಾದವುಗಳನ್ನು ತಮ್ಮ ಡೇರಾದ ಮುಂದುಗಡೆ ಪ್ರತ್ಯೇಕ ಸ್ಥಳದಲ್ಲಿ ಕಟ್ಟಿರುತ್ತಾರೆ. ಹೀಗೆ ಅಲೆಮಾರಿ ಬದುಕಿನ ಸಂದರ್ಭದಲ್ಲಿ ತಮ್ಮ ಇತಿಮಿತಿಯೊಳಗೆ ಅಚ್ಚುಕಟ್ಟಾದ ಜೀವನವನ್ನು ಸಾಗಿಸುತ್ತಿದ್ದಾರೆ.

ದೈವತ್ವಕ್ಕೆ ಹೆಚ್ಚು ಮಹತ್ವ ಕೊಡುವ ಗೋಸಂಗಿಗಳು ಖಿಡ್ಕಾದೇವಿ (ಭವಾನಿ), ಮಲ್ಹಾರ (ಮೈಲಾರಲಿಂಗ), ರಣಿಯಾರ್ (ಮಹಾಕಾಳಿ), ಕಾಳಿಶ್ರೀ (ಚಾಮುಂಡೇಶ್ವರಿ), ಭಾಂಗ್ಯ (ಶಿವ), ಸೊನಾರಿಮರಿ

(ಸಿರ್ಿಮಾರಿಕಾಂಬ), ಹಿರೇಕೇರಿ (ದುರ್ಗಾದೇವಿ), ಸಿತಳಾ (ಎಲ್ಲಮ್ಮಾ), ಅಜ್ಞಾಮರಿ (ಮೂಕಾಂಬಿಕ), ಉಧೋಳಿ (ಹುಲಿಗೆಮ್ಮ), ಬಡಿದೇವ್, ಆದಿಶಕ್ತಿ, ಖವೀಸ್ ಮಹರಾಜ್ ಇತ್ಯಾದಿ ದೇವರುಗಳನ್ನು ಪೂಜೆ ಮಾಡುವರು. ಮೂರ್ತಿಪೂಜೆ ಕಲ್ಪನೆ ಇಲ್ಲದ ಇವರು ಪ್ರತಿಯೊಂದು ದೇವರುಗಳನ್ನು ವಿಧ ಬಣ್ಣದ ಬಟ್ಟೆ (ಕೆಂಪು, ಬಿಳಿ, ಖಾವಿ, ಇತ್ಯಾದಿ)ಗಳಿಂದ ಗುರುತಿಸುವರು ಹೀಗೆ ವಿವಿಧ ದೇವರುಗಳನ್ನು ಸಂಕೇತಿಸುವ ಬಣ್ಣದ 'ಬಟ್ಟೆಗಳನ್ನು ಉದ್ದನೆಯ ಬಿದಿರು ಕೋಲುಗಳಿಗೆ ಕಟ್ಟುವರು. ಅವರು ವಾಸಿಸುವ ಪ್ರದೇಶದ ಪಕ್ಕದಲ್ಲೇ ಒಂದು ಸ್ಥಳವನ್ನು ಸ್ವಚ್ಛಮಾಡಿ ಪ್ರತ್ಯೇಕವಾದ ಒಂದು ಡೇರಾವನ್ನು ನಿರ್ಮಿಸಿ, ಆ ದೇವರುಗಳ ಕೋಲುಗಳನ್ನು ನಿಲ್ಲಿಸಿ ಪೂಜೆಗೆ ಅಣಿಗೊಳಿಸಿಕೊಳ್ಳುವರು. ಹೀಗೆ ಪ್ರತ್ಯೇಕವಾದ ಸ್ಥಳದಲ್ಲಿ ಸ್ಥಾಪಿಸಿದ ದೇವರುಗಳ ಹತ್ತಿರಕ್ಕೆ ಹೆಂಗಸರು ಪ್ರವೇಶಿಸುವಂತಿಲ್ಲ. ಅಷ್ಟೇ ಅಲ್ಲ. ಆ ದೇವರುಗಳ ನೆರಳನ್ನು ಸಹ ಅವರು ದಾಟುವಂತಿಲ್ಲ. ಈ ಎಲ್ಲಾ ದೇವರುಗಳನ್ನು ಪೂಜೆ ಮಾಡಲು ತಮ್ಮಲ್ಲೇ ಒಬ್ಬ ಪುರಷನನ್ನು ನೇಮಿಸುತ್ತಾರೆ. ಈತನಿಗೆ 'ಭಗತ' (ಪೂಜಾರಿ) ಎಂದು ಕರೆಯುವರು.

ಭಗತನನ್ನು ವಂಶಪಾರಂಪರೆಯ ಆಧಾರದ ಮೇಲೆ ಆಯ್ಕೆ ಮಾಡುವ ಪದ್ಧತಿ ಇವರಲ್ಲಿಲ್ಲ. ಯಾರು ನೇಮ-ನಿಷ್ಠೆಯಿಂದ ಇರುತ್ತಾರೋ, ಎಲ್ಲರಿಗೂ ಒಳ್ಳೆಯದನ್ನು ಯಾರು ಬಯಸುತ್ತಾರೋ, ಅಂತಹ ವ್ಯಕ್ತಿಯನ್ನು 'ಭಗತ'ನನ್ನಾಗಿ ಆಯ್ಕೆಮಾಡುತ್ತಾರೆ. ಸಮುದಾಯದ ಪ್ರತಿಯೊಂದು ಆಚರಣೆಯಲ್ಲಿ ಈತನ ಪಾತ್ರ ಬಹು ಮುಖ್ಯವಾಗಿರುತ್ತದೆ. ಎಲ್ಲರೂ ಈತನ ಸಲಹೆ-ಸೂಚನೆಗಳನ್ನು ಚಾಚೂ ತಪ್ಪದೇ ಪಾಲಿಸಿಕೊಂಡು ಹೋಗಬೇಕು. ಹೊಗುತ್ತಾರೆ ಕೂಡಾ. ಹೀಗೆ ಗೋಸಂಗಿಗಳ ಸಾಮಾಜಿಕ ಸಂಘಟನೆಯ ಸಂದರ್ಭಗಳಲ್ಲಿ 'ಭಗತ'ನ ಪಾತ್ರ ಬಹಳ ಮುಖ್ಯವಾಗಿರುತ್ತದೆ.

ಗೋಸಂಗಿ ಸಮುದಾಯದಲ್ಲಿ ಸಾಮಾಜಿಕ ಸಂಘಟನೆ ಇನ್ನೂ ಸಹ ಗಟ್ಟಿಯಾಗಿರಲು ಮುಖ್ಯ ಕಾರಣ ಕರ್ತರೆಂದರೆ 'ದೈವಗಳು' ದೈವದವರು ಹಾಗೂ 'ಜಾತಿಭಟ್ಟರು'. ಇವರ ಆಯ್ಕೆಯೂ ಸಹ ವಂಶಪರಂಪರೆಯಿಂದ ಬಂದುದಲ್ಲ. ಅನುಭವಸ್ಥ ಹಿರಿಯರು ಯಾರೇ ಆಗಿರಬಹುದು ಮತ್ತು ಆ ಸಮುದಾಯದಲ್ಲಿನ ಆಗು ಹೋಗುಗಳನ್ನು ಸರಿದೂಗಿಸಿಕೊಂಡು, ಎಲ್ಲರಿಗೂ ಸಾಮಾಜಿಕ ನ್ಯಾಯವನ್ನು ಒದಗಿಸಿಕೊಡುವಲ್ಲಿ ನಿಷ್ಪಕ್ಷಪಾತ ಧೋರಣೆಯನ್ನು ತಳೆಯುವಂತವನಾಗಿರಬೇಕು. ಸಮುದಾಯದ ದೇವರ ಕಾರ್ಯವಿರಲಿ, ತಂಟೆ-ತಕರಾರುಗಳಿರಲಿ, ನ್ಯಾಯ ತೀರ್ಮಾನಗಳಾಗಿರಲಿ, ಈ ಎಲ್ಲಾ ಸಮಯ-ಸಂದರ್ಭಗಳಲ್ಲಿ 'ದೈವಗಳು' ಯಾರಿಗೂ ಅನ್ಯಾಯವಾಗದಂತೆ ಎಲ್ಲರಿಗೂ ಸಮಾನ ನ್ಯಾಯವನ್ನು ಒದಗಿಸಿ ಕೊಡುವವನಾಗಿರಬೇಕು. ಇಂತಹ ವ್ಯಕ್ತಿತ್ವವುಳ್ಳ ವ್ಯಕ್ತಿಗಳು ದೈವಗಳಾಗಿ, ಜಾತಿಭಟ್ಟರಾಗಿ ಕಾರ್ಯ ನಿರ್ವಹಿಸಬಹುದು. ಈ ಸಂದರ್ಭಗಳಲ್ಲಿ ಹೊಸ ಹೊಸ ಪ್ರದೇಶಗಳ, ಹೊಸ ಹೊಸ ವ್ಯಕ್ತಿಗಳ ಪರಿಚಯವಾಗುತ್ತದೆ. ಆಗ ಅವರೊಂದಿಗೆ ಹೇಗೆ ಬೆರೆಯಬೇಕು, ಯಾವ ರೀತಿ ಹೊಂದಿಕೊಂಡು ಹೋಗಬೇಕು ಎಂಬುದನ್ನು ಹಿರಿಯರಾದವರು ಕಿರಿಯರಿಗೆ ಮಾರ್ಗದರ್ಶನ ನೀಡುತ್ತಾರೆ. ಜೊತೆಗೆ 'ಗಾವುರಾ ಲೋಕ್ ಲೀನ್ ಆಂಖೆ ನಹಿ ಪಣ್ಣೂ' (ಊರು ಜನರ ದೃಷ್ಟಿಯಲ್ಲಿ ನಾವು ಕೆಟ್ಟವರಾಗಬಾರದು) ಎಂಬ ಎಚ್ಚರಿಕೆಯನ್ನು

ನೀಡುತ್ತಾರೆ. ಈ ಸಮುದಾಯದಲ್ಲಿ ದೈವಗಳ ಮಾತಿಗೆ ಹೆಚ್ಚಿನ ಬೆಲೆ ಇರುತ್ತದೆ. ಈತನೇ ಸಮುದಾಯದ ಪ್ರತ್ಯಕ್ಷ ದೇವರು ಎಂಬ ಭಾವನೆಯು ಕೂಡ ಇದೆ. ಮದುವೆ ಸಂದರ್ಭದಲ್ಲಿ 'ದೈವ'ನ ಪಾತ್ರ, ನ್ಯಾಯದ ಸಂದರ್ಭಗಳಲ್ಲಿ 'ನಾಯದಾರಿ'ಯ ಪಾತ್ರ ಹೀಗೆ ವಿವಿಧ ಸಂದರ್ಭಗಳಲ್ಲಿ ವಿವಿಧ ಹೆಸರಿನಿಂದ ಕರೆಯುವ ಇಂತಹ ಹಿರಿಯರು ಸಮುದಾಯದ ಶಾಂತಿಯನ್ನು ಕಾಪಾಡುವಲ್ಲಿ ಪ್ರಮುಖ ಪಾತ್ರ ವಹಿಸುತ್ತಾರೆ. ಹಾಗಾಗಿ ಇಂತಹ ಪದವಿಗಳನ್ನ ಹೊತ್ತ ಹಿರಿಯರಿಗೆ ಸಮುದಾಯದ ಎಲ್ಲರೂ ವಿಶೇಷ ಗೌರವದಿಂದ ನೋಡುತ್ತಾರೆ. ಸಮುದಾಯದ ಎಲ್ಲರೂ ಈತನ ಮಾರ್ಗದರ್ಶನದಂತೆ ನಡೆಬುಕೊಳ್ಳುತ್ತಾರೆ. ಸಕಾರಣವಿಲ್ಲದೆ ಯಾರೊಬ್ಬರೂ ವಿರೋಧವನ್ನು ವ್ಯಕ್ತಪಡಿಸುವಂತಿಲ್ಲ. ವಿರೋಧ ವ್ಯಕ್ತಪಡಿಸಿದವರನ್ನು ಸಮುದಾಯದಿಂದ (ಜಾತಿಯಿಂದ) ಹೊರಹಾಕುವರು. ಆದ್ದರಿಂದ ದೈವಗಳ ಮಾತನ್ನು ಚಾಚು ತಪ್ಪದೆ ಪಾಲಿಸಿಕೊಂಡು ಬರುತ್ತಾರೆ. ತಮ್ಮ ಸಮಾಜದ ಶ್ರೇಯಸ್ಸಿಗಾಗಿ ಎಲ್ಲರೂ ಒಟ್ಟಾಗಿ ದುಡಿಯುತ್ತಾರೆ. ಇದು ಪ್ರತಿಯೊಂದು ಬುಡಕಟ್ಟಿನ ಲಕ್ಷಣವೂ ಹೌದು.

ಗೋಸಂಗಿ ಸಮುದಾಯದಲ್ಲಿ ಮದುವೆ ಇನ್ನಿತರ ಕಾರ್ಯಗಳಿಗೆ ಹೊರಗಡೆಯಿಂದ ಬ್ರಾಹ್ಮಣ ಪುರೋಹಿತರನ್ನು ಕರೆತರುವುದಿಲ್ಲ. ತಮ್ಮಲ್ಲೇ ಒಬ್ಬ ಅನುಭವಸ್ಥ ಹಿರಿಯನನ್ನು 'ಜಾತಿಭಟ್ಟ' ನನ್ನಾಗಿ ನೇಮಿಸುತ್ತಾರೆ. ಈತ ಮದುವೆ ಸಂದರ್ಭದಲ್ಲಿ ಬ್ರಾಹ್ಮಣ ಪುರೋಹಿತ ಮಾಡುವ ಎಲ್ಲಾ ಕೆಲಸಗಳನ್ನು ಮಾಡಿ ಮುಗಿಸುತ್ತಾನೆ. ಬುಡಕಟ್ಟು ಲಕ್ಷಣಗಳನ್ನೊಳಗೊಂಡ ಪ್ರತಿಯೊಂದು ಸಮುದಾಯಗಳು ಇದೇ ಪದ್ಧತಿಯನ್ನು ಅನುಸರಿಸಿಕೊಂಡು ಬರುತ್ತಿರುವುದು ಕಂಡುಬರುತ್ತದೆ. ಎಂತಹ ಅನಿವಾರ್ಯ ಸಂದರ್ಭದಲ್ಲೂ ಹೊರಗಿನ ಶಕ್ತಿಗಳಿಗೆ ಮಣಿಯುವುದಿಲ್ಲ. ಇದಕ್ಕೆ ಕಾರಣ ಪರಂಪರೆಯಿಂದ ಅವರು ನಂಬಿಕೊಂಡು ಬಂದ ಜೀವನ ಮೌಲ್ಯಗಳಿಗೆ ದಕ್ಕೆಯುಂಟಾಗಬಹುದೆಂಬ ಭಯ ಒಂದು ಕಡೆಗಾದರೆ ಮತ್ತೊಂದು ಕಡೆಗೆ ತಮ್ಮ ಸಮುದಾಯ ನಾಗರಿಕ ಸಂಪರ್ಕದಿಂದ ಹೇಳ ಹೆಸರಿಲ್ಲದೆ ಛಿದ್ರವಾಗಿ ಹೋಗಿ ಬಿಡಬಹುದೆಂಬ ಭಯ ಅವರನ್ನು ಕಾಡುತ್ತಿರಬೇಕು. ಹಾಗಾಗಿ ಬೇರೆ ಸಮುದಾಯಗಳ ಜೊತೆ ಅಷ್ಟಾಗಿ ಸಂಪರ್ಕವನ್ನು ಬಯಸುವುದಿಲ್ಲ. ಇದು ಪ್ರತಿಯೊಂದು ಬುಡಕಟ್ಟು ಸಮುದಾಯಗಳ ಮಿತಿಯೂ ಕೂಡಾ. ಇಂದು ನಮ್ಮ ಕಣ್ಣೆದುರಿಗಿರುವ ಎಷ್ಟೋ ಬುಡಕಟ್ಟು ಸಮುದಾಯಗಳು ನಾಗರಿಕ ಸಂಪರ್ಕಕ್ಕೆ ಸಮೀಪದಲ್ಲಿದ್ದರೂ ತಮ್ಮ ಪರಂಪರೆಯಿಂದ ಬಂದ ಜೀವನ ಮೌಲ್ಯಗಳನ್ನು ಉಳಿಸಿಕೊಳ್ಳಲು ಹೆಣಗಾಡುತ್ತಿರುವುದನ್ನು ನಾವಿಂದು ನೋಡಬಹುದಾಗಿದೆ.

ಸುಮಾರು ಮೂರ್ನಾಲ್ಕು ದಶಕಗಳ ಹಿಂದೆ ಗೋಸಂಗಿಗಳು ಊರ ಹೊರವಲಯದಲ್ಲಿ ಡೇರಾಗಳನ್ನು ನಿರ್ಮಿಸಿಕೊಂಡು ವಾಸಿಸುತ್ತಿದ್ದರಂತೆ. ಆಗ ಕೆಲವರು ಬೇಟೆಯಾಡಿ ಆಹಾರಕ್ಕೆ ಮಾಂಸವನ್ನು ಸಂಗ್ರಹಿಸಿದರೆ ಮತ್ತೆ ಕೆಲವರು ಸಾಧುವೇಷ ಧರಿಸಿಕೊಂಡು ಊರೊಳಗೆ ಭಿಕ್ಷೆಬೇಡಿ ಕಾಳುಕಡಿಯನ್ನು ಸಂಗ್ರಹಿಸುತ್ತಿದ್ದರಂತೆ. ಆದರೆ ಇತ್ತೀಚಿಗೆ ನಗರಪ್ರದೇಶಗಳಲ್ಲೇ ಹೆಚ್ಚಾಗಿ ವಾಸಿಸುತ್ತಿರುವ ಗೋಸಂಗಿಗಳು ಒಂದೊತ್ತಿನ ಗಂಜಿಗಾಗಿ ಪರದಾಡುತ್ತಿದ್ದಾರೆ. 'ಉದರ ನಿಮಿತ್ತಂ ಬಹುಕೃತಂ ವೇಷಂ' ಎನ್ನುವಂತೆ ಹೊಟ್ಟೆಪಾಡಿಗಾಗಿ, ಗಂಧದೆಣ್ಣೆ

ಮಾರಾಟ, ಸ್ಟೌವ್ ರಿಪೇರಿ, ಸೋಫಾರಿಪೇರಿ, ಪ್ಲಾಸ್ಟಿಕ್ ಬಕೇಟ್ ರಿಪೇರಿ, ಸಾಧುವೇಷ, ಶಾಸ್ತ್ರಹೇಳುವುದು, ಹಳೇ ಪ್ಲಾಸ್ಟಿಕ್ ಚೀಲಗಳನ್ನು ಆಯುವುದು, ಹೀಗೆ ವಿವಿಧ ರೀತಿಯ ಅಸ್ಥಿರ ಕಸಬುಗಳನ್ನು ಅವಲಂಬಿಸಿದ್ದಾರೆ. ಕೆಲವು ಪ್ರದೇಶಗಳಲ್ಲಿ ತಮ್ಮ ಅಲೆಮಾರಿ ಜೀವನಕ್ಕೆ ಕಡಿವಾಣವನ್ನು ಹಾಕಿರುವ ಗೋಸಂಗಿಳು ಒಂದಡೆ ನೆಲೆನಿಲ್ಲಲು ಪ್ರಯತ್ನಿಸುತ್ತಿದ್ದಾರೆ. ಹೀಗೆ ನೆಲೆ ನಿಂತ ಕೆಲವು ಪ್ರದೇಶಗಳಲ್ಲಿ ಹಂಚಿನ ಮನೆಗಳು, ದಾಬಾ ಮನೆಗಳು, ಆರ್.ಸಿ.ಸಿ.ಕಟ್ಟಡಗಳು ತಲೆ ಎತ್ತಿರುವುದು ಕಂಡು ಬರುತ್ತದೆ. ಇದು ಅವರ ಆರ್ಥಿಕ ಸ್ಥಿತಿಯನ್ನು ಅವಲಂಬಿಸಿದೆ. ಇನ್ನೂ ಕೆಲವುಪ್ರದೇಶಗಳಲ್ಲಿ ಗೋಸಂಗಿಗಳು ಡೇರಾ ವಾಸಿಗಳಾಗಿದ್ದು ತುಂಬಾ ನಿಕೃಷ್ಟವಾಗಿ ಜೀವನ ಸಾಗಿಸುತ್ತಿದ್ದಾರೆ. ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ನಾನು ಗಮನಿಸಿದಂತೆ ಕೆಲವು ಪ್ರದೇಶಗಳಲ್ಲಿ ಕೆಲವರು ಒಂದೆಡೆ ನೆಲೆ ನಿಂತು ವಿವಿಧ ಕಸುಬುಗಳನ್ನು ಅವಲಂಬಿಸಿದ್ದರೆ ಮತ್ತೆ ಕೆಲವರು ಅದೇ ಅರೆ ಅಲೆಮಾರಿ ಜೀವನವನ್ನು ಮುಂದುವರಿಸಿಕೊಂಡು ಹೋಗುತ್ತಿದ್ದಾರೆ. ವಾಸದಮನೆ, ದರಿಸುವ ಉಡುಪು, ಜೀವನಕ್ಕಾಗಿ ಅವಲಂಬಿಸಿರುವ ಕಸಬುಗಳಲ್ಲಿ ಅಲ್ಪಸ್ವಲ್ಪ ಬದಲಾವಣೆಯನ್ನು ಕಂಡು ಕೊಂಡಿದ್ದಾರೆಯೇ ವಿನಹ ಪರಂಪರೆಯಿಂದ ಬಂದ ಸಮುದಾಯಗಳಲ್ಲಿನ ಆಚರಣೆಗಳಲ್ಲಿ ಅಷ್ಟಾಗಿ ಬದಲಾವಣೆಗಳು ಕಂಡು ಬರುತ್ತಿಲ್ಲ. ಎಷ್ಟೇ ಕಷ್ಟದ ಸ್ಥಿತಿಯಲ್ಲಿದ್ದರೂ ತಮ್ಮ ಆಚರಣೆಗಳನ್ನು ನಿಲ್ಲಿಸಿಲ್ಲ. ಯಾವುದೇ ಆಚರಣೆ ಮಾಡಲಿ ಸಾಮೂಹಿಕವಾಗಿಯೇ ಮಾಡುತ್ತಾರೆ. ಬೇಟೆ ಸಂದರ್ಭಗಳಲ್ಲಿ ಸಹ ಎಲ್ಲಾರೂ ಕೂಡಿ ಬೇಟೆಯಾಡುತ್ತಾರೆ. ಎಲ್ಲರೂ ಸಮಾನವಾಗಿ ಹಂಚಿಕೊಳ್ಳುತ್ತಾರೆ. 'ಸರ್ವರಿಗೆ ಸಮಬಾಳು ಸರ್ವರಿಗೆ ಸಮಪಾಲು' ಎಂಬ ನೀತಿ ಗೋಸಂಗಿಗಳದ್ದು. ಹಾಗಾಗಿ ಇಂದೂ ಸಹ ಇವರ ಸಾಮಾಜಿಕ ಸಂಘಟನೆ ಶಕ್ತಿಯುತವಾಗಿದೆ. ಎಲ್ಲರೂ ಸಾಮಾಜಿಕ ಸಂಘಟನೆಗೆ ಸಹಕರಿಸುತಾರೆಯೇ ವಿನಹ ವಿಘಟನೆಗೆ ಪ್ರಯತ್ನಿಸುವುದಿಲ್ಲ. ಆಧುನಿಕ ಸಂದರ್ಭದಲ್ಲಿ ಸಮುದಾಯದ, ಕುಟುಂಬದ ಹಾಗೂ ವ್ಯಕ್ತಿಗತ ಸಮಸ್ಯಗಳನ್ನು ಬಗೆಹರಿಸಿಕೊಳ್ಳಲು ಕೋರ್ಟು ಕಛೇರಿಗಳ ಅನುಕೂಲಗಳಿದ್ದಾರೂ ಸಹ ಅವುಗಳ ಕಡೆ ಗಮನ ಹರಿಸುವುದಿಲ್ಲ. ಅಷ್ಟೇ ಏಕೆ ಯಾರಾದರೂ ಇಂತಹ ವ್ಯವಸ್ಥೆಗಳಿಗೆ ಮಾರು ಹೋಗಿದ್ದೇ ಆದಲ್ಲಿ ಅಂಥವರನ್ನು ಸಮುದಾಯದಿಂದ ಹೊರಗಿಡುತ್ತಾರೆ. ಆಧುನಿಕ ಸಮಾಜದಲ್ಲಿನ ಇಂತಹ ಸೌಕರ್ಯಗಳು ಸರಿಯಾದ ನ್ಯಾಯ ಒದಗಿಸಿಕೊಡುವಲ್ಲಿ ವಿಫಲವಾಗುತ್ತಿರುವುದು ಎಲ್ಲರಿಗು ತಿಳಿದ ವಿಚಾರ. ಇಲ್ಲಿ ಅವರ ಬಲಾಬಲದ ಮೇಲೆ ನ್ಯಾಯವನ್ನು ಪಡೆಯಬಹುದು. ಆದರೆ ಬುಡಕಟ್ಟು ಸಮುದಾಯಗಳಲ್ಲಿ ಇಂತವುಗಳಿಗೆ ಅವಕಾಶವಿರುವುದಿಲ್ಲ. ಇಲ್ಲಿ ವ್ಯಕ್ತಿತ್ವಕ್ಕೆ ಬೆಲೆ ಕೊಡುತ್ತಾರೆ. ಅಪರಾಧಿಗೆ ಸರಿಯಾದ ಶಿಕ್ಷೆ ಆಗಿಯೇ ತೀರುತ್ತದೆ. ಆ ಕಾರಣಕ್ಕಾಗಿ ಬುಡಕಟ್ಟು ಸಮುದಾಯಗಳಲ್ಲಿ ತಪ್ಪುಗಳು ಮತ್ತೆಮತ್ತೆ ಪುನರುಕ್ತಿಯಾಗುವುದು ತೀರಾ ಕಡಿಮೆ ಎಂದೇ ಹೇಳಬಹುದು.

## ೧. ಕೌಟುಂಬಿಕ ವ್ಯವಸ್ಥೆ

ಪಿತೃಪ್ರಧಾನ ಸಮುದಾಯವಾಗಿರುವ ಗೋಸಂಗಿಗಳಲ್ಲಿ ಶೇಕಡಾ ೭೦ ರಷ್ಟು ಭಾಗ ಅವಿಭಕ್ತ ಕುಟುಂಬ ಜೀವನ ಕ್ರಮ ಕಂಡು ಬರುತ್ತಿದ್ದರೂ, ಅಲ್ಲಲ್ಲಿ ವಿಭಕ್ತಿ ಕುಟುಂಬ ಜೀವನ ಕ್ರಮವನ್ನು ಸಹ ಕಾಣಬಹುದಾಗಿದೆ. ಈಚೆಗೆ ಅರೆ ಅಲೆಮಾಗಳಾಗಿರುವ ಗೊಸಂಗಿಗಳಿಗೆ ಇದು ಅನಿವಾರ್ಯವೂ ಕೂಡಾ.

ಪಿತೃಪ್ರಧಾನವಾದ ಕುಟುಂಬ ವ್ಯವಸ್ಥೆಯಲ್ಲಿ ಕುಟುಂಬದ ಹಿರಿಯನೇ ಮನೆಯ ಯಜಮಾನನಾಗಿರುತ್ತಾನೆ. ಈತನ ನಂತರ ಅಧಿಕಾರ ಹಿರಿಯಮಗನಿಗೆ ಸಲ್ಲುತ್ತದೆ. ಕೆಲವು ಪ್ರದೇಶಗಳಲ್ಲಿ ಬಹುಪತ್ನಿತ್ವ ಹೊಂದಿದ್ದು, ಅಂತಹ ಕುಟುಂಬಗಳಲ್ಲಿ ವಯಸ್ಸಿನಲ್ಲಿ ಹಿರಿಯನಾದವನು ಮನೆಯ ಯಜಮಾನನಾಗುತ್ತಾನೆ. ಕೆಲವೊಮ್ಮೆ ಬುದ್ಧಿ ಮತ್ತು ವ್ಯವಹಾರಗಳಲ್ಲಿ ಚತುರನಾದ ಮಗನಿಗೆ ಯನಮಾನಿಕೆಯನ್ನು ಕೊಟ್ಟಿರುವುದು ಕಂಡು ಬರುತ್ತದೆ. ಈತನ ಆದೇಶವನ್ನು ಕುಟುಂಬದ ಉಳಿದ ಸದಸ್ಯರು ಮೀರುವಂತಿಲ್ಲ. ಕುಟುಂಬದ ಸಂಪೂರ್ಣ ಹೊಣೆಗಾರಿಕೆ ಈತನದೇ ಆಗಿರುತ್ತದೆ. ಎಲ್ಲರೂ ಈತನ ಮಾರ್ಗದರ್ಶನದಂತೆ ನಡೆಯುತ್ತಾರೆ. ಹೀಗಾಗಿ ಕುಟುಂಬ ಮತ್ತು ಸಮಾಜದಲ್ಲಿ ಈತನಿಗೆ ವಿಶೇಷ ಗೌರವವಿದೆ.

ಗೋಸಂಗಿ ಸಮುದಾಯದಲ್ಲಿ ಬಹುಮುಖ್ಯ ಸ್ಥಾನಮಾನಗಳನ್ನು ಪುರುಷರೇ ಆಕ್ರಮಿಸಿಕೊಂಡಿರುವುದರಿಂದ, ಸ್ತ್ರೀಯರು ಪುರುಷರಿಗೆ ಅಧೀನರಾಗಿ ಬಾಳುತ್ತಿದ್ದಾರೆ. ಅಲೆಮಾರಿ ಗೋಸಂಗಿಗಳು ಯಾವುದೇ ಸ್ಥಿರಾಸ್ತಿಯನ್ನು ಹೊಂದಿಲ್ಲದ ಕಾರಣ ಗಂಡು-ಹೆಣ್ಣು ಇಬ್ಬರೂ ದುಡಿಮೆಯಲ್ಲಿ ಪಾಲ್ಗೊಳ್ಳುವುದು ಸಾಮಾನ್ಯವಾಗಿದೆ. ಸ್ತ್ರೀಯರು ಪುರಷರಿಗೆ ವಿಶೇಷ ಗೌರವವನ್ನು ಕೊಡುತ್ತಾರೆ. ಮದುವೆಯಾದ ಹೆಣ್ಣು ತನ್ನ ಗಂಡನನ್ನಾಗಲಿ ಅಥವಾ ಸಮುದಾಯದ ಹಿರಿಯರನ್ನಾಗಲಿ ಹೆಸರನ್ನಿಡಿದು ಸಂಬೋಧಿಸುವಂತಿಲ್ಲ. ಹಾಗೆ ಸಂಬೋಧಿಸಿದರೆ ಹಿರಿಯರಿಗೆ ಅಗೌರವ ಸೂಚಿಸುದಂತಾಗುತ್ತದೆ ಎಂಬ ಭಾವನೆ ಇವರಲ್ಲಿದೆ. ಅಷ್ಟೇ ಅಲ್ಲ ಹಾಗೆ ಸಂಬೋಧಿಸುವುದರಿಂದ ಅವರ ಆಯುಷ್ಯ ಕಡಿಮೆಯಾಗುತ್ತದೆಂದು, ಬೇಗನೆ ಮುಪ್ಪಾವಸ್ಥೆಗೆ ಬರುವರೆಂಬ ನಂಬಿಕೆ ಇವರಲ್ಲಿದೆ. ಒಂದು ವೇಳೆ ಹಿರಿಯರ ಹೆಸರನ್ನಿಡಿದು ಕರೆದದ್ದೇ ಆದಲ್ಲಿ ಅಂತವರು ತಪ್ಪುದಂಡ ತೆರಬೇಕಾಗುತ್ತದೆ. ಪ್ರತಿಯೊಂದು ಬುಡಕಟ್ಟು ಸಮಯದಾಯಗಳು ತಮ್ಮ ಸಮುದಾಯದ ಹಿರಿಯರಿಗೆ ಗೌರವ ಕೊಡುತ್ತಾ ಬಂದಿರುವುದನ್ನು ನಾವಿಂದು ಕಾಣಬಹುದಾಗಿದೆ.

ಗೋಸಂಗಿ ಸಮುದಾಯಗಳಲ್ಲಿ 'ಏಕಪತ್ನಿತ್ವ' ಕುಟುಂಬ ಪದ್ಧತಿಯೇ ಹೆಚ್ಚಾಗಿ ಕಂಡುಬರುತ್ತಿದ್ದರೂ, ಅಲ್ಲಲ್ಲಿ 'ಬಹುಪತ್ನಿತ್ವ' ಕುಟುಂಬ ಪದ್ಧತಿಗಳು ಅಸ್ಥಿತ್ವದಲ್ಲಿರುವುದನ್ನು ಕಾಣಬಹುದಾಗಿದೆ. ಹೆಂಡತಿ ಬಂಜೆಯೆಂದು ಕಂಡುಬಂದಲ್ಲಿ ಅಥವಾ ಗಂಡು ಸಂತಾನವಿಲ್ಲದಿದ್ದಲ್ಲಿ, ಪುನಃ ಅವನು ಒಂದಕ್ಕಿಂತ ಹೆಚ್ಚು ಸ್ತ್ರೀಯರನ್ನು ಮದುವೆಯಾಗಲು ಅವಕಾಶವಿದೆ. ಇನ್ನು ಕೆಲವು ಸಂದರ್ಭಗಳಲ್ಲಿ ಕನ್ಯೆಯೊಬ್ಬಳು ಮದುವೆಯಾದ ಪುರುಷನನ್ನು ಇಷ್ಟಪಟ್ಟು ಅಕ್ರಮವಾಗಿ ಮನೆಯನ್ನು ಪ್ರವೇಶಿಸಿದರೆ ಆಗ ಸಮುದಾಯದ ಹಿರಿಯರೆಲ್ಲಾರೂ ಸೇರಿ ಎರಡು ಕುಟುಂಬಗಳ ಒಪ್ಪಿಗೆಯನ್ನು ಪಡೆದು ವಿವಾಹ ಮಾಡಿಸುತ್ತಾರೆ. ಇಲ್ಲಿ ಕನ್ಯೆಯೇ ಮುಂದಡಿಯಿಡುತ್ತಾಳೆ. ಈ ರೀತಿಯ ವಿವಾಹಗಳಿಗೆ ಇವರಲ್ಲಿ ಅನುಮತಿ ನೀಡಿದರೂ ಸಹ ಇಂತಹ ಘಟನೆಗಳು ಘಟಿಸುವುದು ತೀರಾ ಕಡಿಮೆಯೆಂದೇ ಹೇಳಬಹುದು.

ಗಂಡು ಮಕ್ಕಳು ಸಾಮಾನ್ಯವಾಗಿ ಮದುವೆಯಾಗುವವರೆಗೆ ತಂದೆಯ ಆಶ್ರಯದಲ್ಲೇ ಜೀವಿಸುತ್ತಾರೆ. ಮದುವೆಯಾದ ನಂತರ ಪ್ರತ್ಯೇಕವಾಗಿ ಜೀವಿಸಲು ಇಷ್ಟಪಡುತ್ತಾನೆ. ಇದಕ್ಕೆ ಅವರ ಅಲೆಮಾರಿತನವೇ

ಕಾರಣವಿರಬೇಕು. ಏಕೆಂದರೆ ಗೋಸಂಗಿಗಳು ಇಂದೂ ಸಹ ಅಲೆಮಾರಿಗಳಾಗಿದ್ದು, ಒಮ್ಮೆ ಮನೆಯನ್ನು ಬಿಟ್ಟರೆ ಮತ್ತೆ ಮನೆ ಸೇರುವುದು ಹಬ್ಬ ಇನ್ನಿತರ ವಿಶೇಷ ಸಂದರ್ಭಗಳಲ್ಲಿ ಮಾತ್ರ. ಹಾಗಾಗಿ ಮದುವೆಯಾದ ನಂತರ ತನ್ನ ಹೆಂಡತಿಯೊಂದಿಗೆ ಊರೂರು ಅಲೆಯುವುದರಿಂದ ಅವಿಭಕ್ತ ಕುಟುಂಬದಿಂದ ಬೇರ್ಪಡುವುದು ಅನಿವಾರ್ಯವಾಗುತ್ತದೆ. ಹೀಗೆ ಅನಿವಾರ್ಯವಾಗಿ ಬೇರ್ಪಟ್ಟ ವ್ಯಕ್ತಿ ತನ್ನ ಸಂಚಾರಿ ಜೀವನವನ್ನು ಮುಗಿಸಿಕೊಂಡು ಮತ್ತೆ ಕುಟುಂಬವನ್ನು ಸೇರಿಕೊಳ್ಳಲು ಅವಕಾಶವಿರುತ್ತದೆ. ಹೊಸದಾಗಿ ಮದುವೆಯಾದ ಗಂಡ-ಹೆಂಡತಿರಲ್ಲಿ ಜಗಳಗಳೇನಾದರೂ ಸಂಭವಿಸಿದರೆ ಅಂತವರನ್ನು ತಾತ್ಕಾಲಿಕವಾಗಿ ಹೊರಗಿಡುತ್ತಾರೆ. ಹೀಗೆ ಜನಳವಾಡಿ ಕುಟುಂಬದಿಂದ ಹೊರ ಹೋದ ವ್ಯಕ್ತಿಗಳನ್ನು ಸಮುದಾಯದ ಜನ ತುಂಬಾ ಕೀಳಾಗಿ ನೋಡುತ್ತಾರೆ. ಆದ್ದರಿಂದ ಗಂಡ-ಹೆಂಡತಿಯರು ದೈವಗಳ ಎದುರಲ್ಲಿ ತಮ್ಮ ತಪ್ಪನ್ನು ಒಪ್ಪಿಕೊಂಡು ಮತ್ತೆ ಕುಟುಂಬವನ್ನು ಸೇರುವರು. ಗಂಡ-ಹೆಂಡತಿ ನಡುವಿನ ಇಂತಹ ಜಗಳಗಳು ಎರಡು-ಮೂರು ಮಕ್ಕಳಾಗುವವರೆಗೂ ಮುಂದುವರೆದ ನಿದರ್ಶನಗಳುಂಟು. ಇಂದೂ ಸಹ ವಧುದಕ್ಷಿಣೆ ಪದ್ಧತಿಯನ್ನೇ ಅನುಸರಿಸುತ್ತಿರುವ ಈ ಸಮುದಾಯವು ಆಧುನಿಕ ಸಮಾಜದಲ್ಲಿನ ವರದಕ್ಷಿಣೆ ಪಿಡುಗಿನಿಂದ ದೂರ ಉಳಿದಿದೆ.

ಮದುವೆಯಾದ ಸ್ವಲ್ಪ ದಿನಗಳಲ್ಲಿ ಗಂಡ ಅಥವಾ ಹೆಂಡತಿಯೇನಾದರೂ ಅಕಾಲ ಮರಣಕ್ಕೆ ತುತ್ತಾದರೆ, ಅಂತಹ ಗಂಡ ಅಥವಾ ಹೆಂಡತಿ (ವಿಧುರಾ ಅಥವಾ ವಿಧವೆ) ಮರು ಮದುವೆ ಮಾಡುವ ಪದ್ಧತಿ ಇವರಲ್ಲಿದೆ. ಇಂತಹ ಮದುವೆಗೆ 'ಕೂಡಿಕೆ' 'ಸೀರುಡಿಕೆ' ಅಥವಾ 'ಕೂಡಾವಳಿ'ಎಂತಲೂ ಕರೆಯುವರು. ಇಂತಹ ಕೂಡಿಕೆಗಳು ಸಮುದಾಯದ ಎದುರಿನಲ್ಲಿ, ಅವರ ಒಪ್ಪಿಗೆಯನ್ನು ಪಡದೇ ಮಾಡಬೇಕು. ಈ ರೀತಿಯ ಕೂಡಿಕೆ ಬಹುತೇಕ ಎಲ್ಲಾ ಬುಡಕಟ್ಟುಗಳಲ್ಲಿ ಕಂಡು ಬರುತ್ತದೆ. ಹೀಗೆ ವಿಧವೆ ಅಥವಾ ವಿಧುರರಿಗೆ ಮರು ಮದುವೆಮಾಡಿ ಮತ್ತೆ ಹೊಸಬಾಳು ಕೊಡುವುದರ ಮೂಲಕ ಮಾನವೀಯ ಮೌಲ್ಯಗಳನ್ನು ಮೆರೆದಿದ್ದಾರೆ. ಇದಲ್ಲದೆ ತಮ್ಮ ಅಲೆಮಾರಿ ಬದುಕಿನ ಸಂದರ್ಭಗಳಲ್ಲಿ ಅನಾಥ ಮಕ್ಕಳೇನಾದರು ಸಿಕ್ಕರೆ (ಏಳುವರ್ಷ ಏಳು ತಿಂಗಳೊಳಗಿನ ಮಕ್ಕಳನ್ನು ಮಾತ್ರ) ಅಂತಹ ಮಕ್ಕಳನ್ನು, ಮಕ್ಕಳಿಲ್ಲದ ದಂಪತಿಗಳು 'ದತ್ತು' ಸ್ವೀಕರಿಸುವುದು ರೂಢಿಯಲ್ಲಿದೆ. ಹೀಗೆ ಸ್ವೀಕರಿಸುವಾಗ ಸಮುದಾಯದ ದೈವಗಳನ್ನು ಕರೆಸಿ, ಅವರ ಒಪ್ಪಿಗೆ ಹಾಗೂ ನೆರೆದಂತ ಸಮುದಾಯದ ಬಂಧುಗಳ ಒಪ್ಪಿಗೆಯನ್ನು ಪಡೆದು ಚಿಕ್ಕಚಿಕ್ಕ ಮಕ್ಕಳಿಗೆ ಬೆಲ್ಲ ಹಂಚಿ, ದತ್ತು ಸ್ವೀಕರಿಸುವರು. ಹೀಗೆ ಸ್ವೀಕರಿಸಿದ ಮಕ್ಕಳಿಗೆ ಗೋಸಂಗಿಗಳು 'ಕಾಡ್ರಾ' ಎಂದು ಕರೆಯುವರು. ಕಾಡ್ರಾ ಎಂದರೆ 'ಹೊರಗಿನವ', 'ದತ್ತುಪುತ್ರ' ಎಂಬರ್ಥವಿದ್ದು ತಮ್ಮಲ್ಲೇ ಹುಟ್ಟಿದ ಮಕ್ಕಳಿಗೆ 'ಹಾಡ್ರಾ' (ಒಳಗಿನವನು) ಎಂದು ಕರೆದು ಕೊಳ್ಳುವರು. ಹಾಗಾಗಿ ಗೋಸಂಗಿಗಳು ವಿವಾಹ ಸಂದರ್ಭಗಳನ್ನು ಬೆಳೆಸುವಾಗ ಹಾಡ್ರಾ (ಒಳಗಿನವ) ಮತ್ತು ಕಾಡ್ರಾ (ಹೊರಗಿನವ, ದತ್ತುಪುತ್ರ) ಪ್ರಭೇಧಗಳನ್ನು ಮುಖ್ಯವಾಗಿ ಗಣನೆಗೆ ತೆಗೆದುಕೊಳ್ಳುತ್ತಾರೆ. ವೈವಾಹಿಕ ಸಂಬಂಧಗಳು ಹೊರಭಾಂಧವ್ಯ 'ಬಳಿ' (ಬೆಡಗು)ಗಳಿಂದ ಕೂಡಿರುತ್ತದೆ. ಸಮಬಳಿಗಳಲ್ಲಿ ಸೋದರ

ಭಾವನೆಯಿದ್ದು, ಬೆಸ ಬಳಿಗಳಲ್ಲಿ ನೆಂಟರ ಭಾವನೆ ಇರುವುದು ಕಂಡುಬರುತ್ತದೆ. ಪ್ರತಿ ಬಳಿಯವರು ಪ್ರತ್ಯೇಕವಾದ ದೈವಗಳನ್ನು ಹೊಂದುರುತ್ತಾರೆ.

ಇತ್ತೀಚಿಗೆ ಗೋಸಂಗಿ ಸಮುದಾಯದ ಪುರುಷರು, ಗಂಧದೆಣ್ಣೆ ಮಾರಾಟ, ಬಿದ್ದ ಹಲ್ಲನ್ನು ಕಟ್ಟುವುದು, ಕೈಶಾಸ್ತ್ರ ಹೇಳುವುದು, ಭಿಕ್ಷೆಬೇಡುವುದು, ಸೋಫಾ ರಿಪೇರಿ, ಪ್ಲಾಸ್ಟಿಕ್ ಕೊಡ, ಬಕೆಟ್ ರಿಪೇರಿ, ಸ್ಟೌವ್ ರಿಪೇರಿ ಯಂತಹ ಕೆಲಸಗಲಲ್ಲಿ ತೊಡಗಿಸಿಕೊಂಡಿದ್ದು. ಹೆಂಗಸರು ನಗರ ಇನ್ನಿತರ ಪ್ರದೇಶಗಳಲ್ಲಿ ಪ್ಲಾಸ್ಟಿಕ್ ಪೇಪರ್, ಕಬ್ಬಿಣದಂತ ತ್ಯಾಜ್ಯವಸ್ತುಗಳನ್ನು ಆಯುವ ಕೆಲಸದಲ್ಲಿ ನಿರತರಾಗಿತ್ತಾರೆ. ಹೀಗೆ ಅಸ್ಥಿರ ಕಸಬುಗಳನ್ನು ಆಶ್ರಯಿಸಿ ಕಷ್ಟ ಜೀವನ ಸಾಗಿಸುತ್ತಿದ್ದಾರೆ. ಪ್ರಾಥಮಿಕ ಶಿಕ್ಷಣವನ್ನು ಕಾಣದ ಇವರಲ್ಲಿ ವ್ಯವಹಾರಿಕ ಜ್ಞಾನಕ್ಕೇನು ಕೊರತೆಯಿಲ್ಲ. ಆಧುನಿಕತೆಯ ಪ್ರಭಾವದಿಂದ ಗೋಸಂಗಿ ಯುವಕರಲ್ಲಿನ ಉಡುಪು, ಕಸಬು, ಹಾಗೂ ಹೆಸರುಗಳಲ್ಲಿ ಅಲ್ಪಸ್ವಲ್ಪ ವ್ಯತ್ಯಾಸಗಳು ಕಂಡು ಬರುತ್ತಿದ್ದರೂ ಅವರ ಸಂಪ್ರದಾಯ ಆಚಾರ ವಿಚಾರಗಳಲ್ಲಿ ಅಷ್ಟಾಗಿ ಬದಲಾವಣೆಗಳು ಕಂಡುಬಾರದೇ ಇರುವುದು ವಿಶೇಷ.

೧.೧. ದತ್ತು ಸ್ವೀಕಾರ : ಪುತ್ರಸಂತಾನವಿಲ್ಲದ ದಂಪತಿಗಳು ಬೇರೆಯವ ಮಕ್ಕಳನ್ನು ಉತ್ತರಾಧಿಕಾರಿಯಾಗಿ ಸ್ವೀಕರಿಸುವುದಕ್ಕೆ 'ದತ್ತು ಸ್ವೀಕಾರ' ಎಂದು ಕರೆಯಬಹುದು. "ಗಂಡು-ಹೆಣ್ಣಿನ ಮಿಲ ಮನುಕುಲದ ಬೆಳವಣಿಗೆಗೆ ಮೂಲ. ಪ್ರಾಣಿ ಅವಸ್ಥೆಯಿಂದ ಬಿಡುಗಡೆ ಹೊಂದಿದಂದಿನಿಂದ ಮಾನವನು ತನ್ನ ಸಾಮಾಜಿಕ ಬದುಕನ್ನು ವ್ಯವಸ್ಥೆಗೊಳಿಸಲು ಅನೇಕ ನಿಬಂಧನೆಗಳನ್ನು ರೂಪಿಸಿಕೊಂಡಿದ್ದಾನೆ. ಕೌಟುಂಬಿಕ ವ್ಯವಸ್ಥೆ ಸುಗಮಗೊಳ್ಳಲು, ಧಾರ್ಮಿಕ ಆಚರಣೆಗಳನ್ನು ಪೂರ್ಣಗೊಳಿಸಲು, ಕುಲಬಳ್ಳಿಯನ್ನು ಮುಂದುವರಿಸಲು ವಂಶೋದ್ಧಾರಕನಿರಬೇಕೆಂಬ ನಂಬಿಕೆ ಎಲ್ಲಾ ಜನಾಂಗಗಳಲ್ಲಿಯೂ ಗಾಢವಾಗಿದೆ."[೧]

ಬಾಲಕರಿಲ್ಲಾದ ಬಾಲಿದ್ಯಾತರ ಜನ್ಮ
ಬಾಡಿಗೆ ಎತ್ತು ದುಡಿದಂಗ | ಬಾಳೆಲೆಯ
ಹಾಸುಂಡು ಬೀಸಿ ಹೊಗೆದಂಗ

ಎಂದಿರುವ ಜನಪದರು ಮಕ್ಕಳಿಲ್ಲದೆ ನಡೆಸುವ ಜೀವನ ನಿರುಪಯುಕ್ತವಾದುದು ಎಂದಿದ್ದಾರೆ. ಅಷ್ಟೇ ಅಲ್ಲ ಕೆಲವು ಧಾರ್ಮಿಕ ಆಚರಣೆಗಳ ಸಂದರ್ಭದಲ್ಲಿ ಗಂಡು ಮಕ್ಕಳೇ ಮುಖ್ಯವಾಗಿದ್ದು, ಅವರಿಲ್ಲದೆ ಮಾಡುವ ಕಾರ್ಯಗಳು ಫಲಿಸುವುದಿಲ್ಲವೆಂಬ ನಂಬಿಕೆ ಇರುವುದರಿಂದ ಗಂಡು ಸಂತಾನಕ್ಕೆ ಹಂಬಲಿಸುತ್ತಾರೆ. ಒಂದು ವೇಳೆ ದಂಪತಿಗಳಿಗೆ ವಂಶೋತ್ಪತ್ತಿಯು ಸಾಧ್ಯಾವಗದೇ ಇದ್ದಾಗ, ಬೇರೊಂದು ಮಗುವನ್ನು ದತ್ತು ತೆಗೆದುಕೊಳ್ಳುವರು. ಲಂಬಾಣಿ, ದೊಕ್ಕಲು ಮಕ್ಕಳು ಹಾಗೂ ಬುಡ್ಗಜಂಗಾಲ ಇನ್ನಿತರ ಅಲೆಮಾರಿ ಸಮುದಾಯಗಳಲ್ಲಿಯೂ ಸಹ ಈ ಪದ್ಧತಿ ರೂಢಿಯಲ್ಲಿರುವುದು ತಿಳಿದುಬರುತ್ತದೆ.

ಗೋಸಂಗಿಗಳಲ್ಲೂ ಸಹ ದತ್ತು ಸ್ವೀಕರಿಸುವ ಪದ್ಧತಿ ರೂಢಿಯಲ್ಲಿದ್ದು, ಇದಕ್ಕೆ ಅವರ ಬಾಷೆಯಲ್ಲಿ 'ಗೋದಡಿರ್‌ನಾಥ್'[೨] (ಗೋಡ್), ಎಂದು ಕರೆಯುವರು. ಅಲೆಮಾರಿಗಳಾದ ಇವರು ತಮ್ಮ ಸಮುದಾಯದ ಮಕ್ಕಳನ್ನು ದತ್ತು ತೆಗೆದುಕೊಳ್ಳುವುದು ಕಡಿಮೆ. ಕಾರಣ ಹೀಗೆ ತೆಗೆದುಕೊಂಡ ಮಕ್ಕಳು ಅವರು

ದೊಡ್ಡವರಾದ ಮೇಲೆ ಅಥವಾ ಮದುವೆಯಾಗಿ ಮಕ್ಕಳಾದ ಮೇಲೆ ಈತನ ಎಲ್ಲಾ ಆಸ್ತಿ ಮೊದಲಿನ ತಂದೆಗೆ ಸೇರುತ್ತದೆ. ಹಾಗಾಗಿ ತಮಗಿಂತ ಶ್ರೇಷ್ಠ ಎಂದು ಪರಿಗಣಿಸಿರುವ ಹೊರಗಿನ ಸಮುದಾಯದ ಮಕ್ಕಳನ್ನು ಮಾತ್ರ ದತ್ತು ಸ್ವೀಕರಿಸುವರು. ಸ್ವೀಕರಿಸುವಾಗಿನ ವಯಸ್ಸು, ಏಳು ವರ್ಷ ಏಳು ತಿಂಗಳ ಒಳಗಿರಬೇಕು. ಈ ವಯಸ್ಸಿನ ಅನಾಥ ಮಕ್ಕಳು ಯಾವುದೇ ಸಮುದಾಯದವರಾದರೂ ಸರಿ. ತಮ್ಮ ಸಮುದಾಯದ ಸಮಸ್ತರ ಒಪ್ಪಿಗೆ ಪಡೆದು ದತ್ತು ಸ್ವೀಕರಿಸಲು ಯಾವುದೇ ಅಭ್ಯಂತರವಿರುವುದಿಲ್ಲ.

ಮಕ್ಕಳಿಲ್ಲದ ದಂಪತಿಗಳು ದತ್ತು ಸ್ವೀಕಾರ ಮಾಡುವಾಗ ಕುಲದೈವಗಳನ್ನು ಕರೆಸಿ, ಅವರ ಒಪ್ಪಿಗೆ ಪಡೆದು ಸಮಸ್ತರೆದುರು ಆ ಮಗುವಿಗೆ ತಾಯಿಯ ಎದೆಹಾಲು ಕುಡಿಸಿ 'ಆಸ್ತಿ ಆರೋ ಲಾಯಿರೋ ಬೇಟೋ ಮಾರೋ ಹೊಯ್ಯೊ ಗೋದಡಿರ್ ನಾಥ್ ನೇ ಮಾರೆ ಸುಣೇರೋ ಬಾಯಿ ಸುಣೆರೋ' (ಸಮಸ್ತ ದೈವಗಳೇ ಕೇಳಿರಿ ಈ ಮಗುವಿನದೇನು ತಪ್ಪಿಲ್ಲ. ಈತನನ್ನು ನನ್ನ ಮಗನಾಗಿ ಸ್ವೀಕರಿಸುವೆ. ಇನ್ನು ಮುಂದೆ ನನ್ನ ಸಮಸ್ತ ಆಸ್ತಿಗೆ ಈತನೇ ವಾರಸುದಾರನಾಗಿರುತ್ತಾನೆ) ಎಂದು ಹೇಳಿ ಕುಲದಲ್ಲಿ ಸೇರಿಸಿಕೊಳ್ಳುವರು. ಈ ಸಂದರ್ಭದಲ್ಲಿ ಎಲ್ಲರಿಗೂ ಸಿಹಿಹಂಚುವರು.

೧.೨. ಬಾಲ್ಯವಿವಾಹ : ಗೋಸಂಗಿ ಸಮುದಾಯದಲ್ಲಿ ಇಂದೂ ಸಹ ಬಾಲ್ಯವಿವಾಹಗಳು ನಡೆಯುತ್ತಿರುವುದನ್ನು ನನ್ನ ಕ್ಷೇತ್ರಕಾರ್ಯ ಸಂದರ್ಭದಲ್ಲಿ ಗಮನಿಸಿದ್ದೇನೆ. ಬಹುಶಃ ಅಲೆಮಾರಿಗಳಾದ ಇವರಿಗೆ ಸಂಬಂಧಗಳನ್ನು ಹುಡುಕಿಕೊಂಡು ಹೋಗುವುದು ಅತ್ಯಂತ ಪ್ರಯಾಸದ ಕೆಲಸವಾಗಿರಬೇಕು ಹಾಗಾಗಿ ಒಳ್ಳೆಯ ಸಂಬಂಧಗಳು ಸಿಕ್ಕಾಗ ಸಮಯ ಸಂದರ್ಭ ಅವಕಾಶಗಳನ್ನು ನೋಡಿ ಇಂತಹ ವಿವಾಹಗಳನ್ನು ನಡೆಸುತ್ತಾ ಬಂದಿರಬೇಕು. ಇಂದಿನ ವೈಜ್ಞಾನಿಕ ಯುಗದಲ್ಲಿ ಇದೊಂದು ಅನಿಷ್ಟ ಪದ್ಧತಿಯೆನಿಸಿದರೂ ಸಹ ಕೆಲವೊಂದು ಅನಿವಾರ್ಯ ಕಾರಣಗಳಿಂದಾಗಿ ಇಂತಹ ಪದ್ಧತಿಗಳು ರೂಢಿಯಲ್ಲಿವೆ.

ಅಲೆಮಾರಿಗಳಾದ ಗೋಸಂಗಿ ಸಮುದಾಯದಲ್ಲಿ ಮಕ್ಕಳಿಗೆ ದುಡಿಯುವ ಚೈತನ್ಯ ಬಂದರೆ ಸಾಕು. ತಮ್ಮ ಪಾಲಿನ ಜವಾಬ್ದಾರಿಯನ್ನೂ ಬಹುಬೇಗ ಮುಗಿಸಿಬಿಡಬೇಕೆಂಬ ತವಕ ಒಂದು ಕಡೆಗಾದರೆ, ತಮ್ಮ ಕಣ್ಣೆದುರಿಗೆ, ತಾವು ಸಾಯುವದರೊಳಗೆ ಈ ಶುಭ ಕಾರ್ಯವನ್ನು ಮುಗಿಸಿ ಬಿಡಬೇಕೆಂಬ ಆಸೆ ಮತ್ತೊಂದು ಕಡೆ. ಇನ್ನೂ ಕೆಲವು ಸಂದರ್ಭಗಳಲ್ಲಿ ಒಳ್ಳೆಯ ಸಂಬಂಧಗಳು ಎಲ್ಲಿ ಕೈ ತಪ್ಪಿ ಹೋಗುತ್ತವೆಯೋ ಎಂಬ ಕಾರಣಕ್ಕಾಗಿ ಬಾಲ್ಯವಿವಾಹಗಳು ನಡೆದದ್ದುಂಟು. "ಕೆಲವು ಹಿಂದುಳಿದ ಪಂಗಡಗಳಲ್ಲಿ ತೊಟ್ಟಿಲಿನ ಮಕ್ಕಳಿಗೇ ಬಾಸಿಂಗವನ್ನು ಕಟ್ಟುವ ಪದ್ಧತಿಯೂ, ಶಿಶು ಗರ್ಭದಲ್ಲಿರುವಾಗಲೇ ವಿವಾಹಗಳು ನಿಶ್ಚಯವಾಗುವುದೂ ಉಂಟು."[೩] ಹೀಗೆ ಒಂದಲ್ಲ ಒಂದು ಕಾರಣಗಳನ್ನು ಮುಂದೊಡ್ಡಿ ತಮ್ಮ ಆಸೆ, ಆಕಾಂಕ್ಷೆ ಅನುಕೂಲಗಳ ಹಾಗೂ ನಂಬಿಕೆಗಳಿಗೆ ಅನುಗುಣವಾಗಿ ಬಾಲ್ಯವಿವಾಹಗಳು ನಡೆಯುತ್ತಿರುವುದನ್ನು ನಾವಿಂದು ನೋಡಬಹುದು.

೧.೨. ಬಹುಪತ್ನಿತ್ವ : ಪುರುಷ ಒಬ್ಬಳಿಗಿಂತ ಹೆಚ್ಚು ಸ್ತ್ರೀಯರನ್ನು ಮದುವೆಯಾಗುವ 'ಬಹುಪತ್ನಿತ್ವ' ಪದ್ಧತಿಗೆ ಗೋಸಂಗಿ ಸಮುದಾಯದಲ್ಲಿ ಅನುಮತಿ ನೀಡಿದ್ದಾರೆ. ಆದರೆ ಕೆಲವು ವಿಶಿಷ್ಟ ಸಂದರ್ಭ

ಮತ್ತು ಕಾರಣಗಳನ್ನ ಗಣನೆಗೆ ತೆಗೆದುಕೊಂಡು ಸಮಾಜವು ಬಹುಪತ್ನಿತ್ವ ವಿವಾಹ ಪದ್ಧತಿಯನ್ನು ಅಂಗೀಕರಿಸುತ್ತದೆ.

ಪುತ್ರ ಸಂತಾನವಿಲ್ಲದಿದ್ದರೆ ಮೋಕ್ಷ ದೊರೆಯುವುದಿಲ್ಲವೆಂಬ ನಂಬಿಕೆ ಇವರಲ್ಲಿ ಬಲವಾಗಿ ಬೇರೂರಿದೆ. ಹಾಗಾಗಿ, ಪತ್ನಿಯು ಬಂಜೆಯೆಂದು ಕಂಡುಬಂದಲ್ಲಿ, ಅನಾರೋಗ್ಯದಿಂದ ನರಳುತ್ತಿದ್ದು ಸಂಸಾರ ನಿರ್ವಹಣೆ ಆಕೆಯಿಂದ ಸಾಧ್ಯವಾಗದೇ ಇದ್ದ ಪಕ್ಷದಲ್ಲಿ, ಹಾಗೂ ಗಂಡು ಮಗುವಿಗೆ ಜನ್ಮ ನೀಡಲು ವಿಫಲವಾದಲ್ಲಿ, ಪುರುಷ ಒಬ್ಬಳಿಗಿಂತ ಹೆಚ್ಚು ಸ್ತ್ರೀಯರನ್ನ ವಿವಾಹವಾಗಬಹುದು. ಈ ರೀತಿಯ ಎರಡನೇ ವಿವಾಹವೂ ಸಹ ಮೊದಲಿನ ವಿವಾಹದ ಮಾದರಿಯಲ್ಲೆ ನಡೆಯುತ್ತದೆ. ಮದುವೆಯಾಗಬೇಕಾದ ಪುರುಷ ಹೆಣ್ಣಿನ ತಂದೆಗೆ ನಿಗದಿ ಪಡಿಸಿದ ತೆರ ಕೊಟ್ಟು ಹಿರಿಯ ದೈವಗಳ ಸಮ್ಮುಖದಲ್ಲಿ ವಿವಾಹವಾಗಬಹುದು. ಇನ್ನೂ ಕೆಲವು ಸಂದರ್ಭಗಳಲ್ಲಿ ಕನ್ಯೆ ವಿವಾಹಿತ ಪುರುಷನನ್ನೂ ಇಷ್ಟಪಟ್ಟು ಆಕ್ರಮವಾಗಿ ಮನೆ ಪ್ರವೇಶಿಸಿದರೆ ಅಂತಹ ಸಂದರ್ಭದಲ್ಲಿ, ಪುರುಷ ಮೊದಲ ಹೆಂಡತಿಯ ಹಾಗೂ ಸಮುದಾಯದ ಹಿರಿಯ ದೈವಗಳ ಅನುಮತಿಯನ್ನು ಪಡೆದು ವಿವಾಹ ಮಾಡಿಕೊಳ್ಳಬಹುದು. ಈ ರೀತಿಯ ಆಕ್ರಮವಾಗಿ ಪ್ರವೇಶಿಸಿ ವಿವಾಹವಾಗುವ ಪದ್ಧತಿ 'ಸಾಂತಾಲ' ಮತ್ತಿತರ ಬುಡಕಟ್ಟುಗಳಲ್ಲಿರುವುದು ಕಂಡುಬರುತ್ತಿದ್ದರೂ, ತೀರಾ ವಿರಳವೆಂದೇ ಹೇಳಬಹುದು. ಹೀಗೆ ಭಾರತದ ಬುಡಕಟ್ಟುಗಳಲ್ಲಿ ಕಂಡು ಬರುವ ಬಹುಪತ್ನಿತ್ವ ಪದ್ಧತಿ ಆಯಾ ಸಮುದಾಯದ ನೀತಿ ನಿಯಮ, ಆರ್ಥಿಕ ಸ್ಥಿತಿಗತಿ, ಸಾಮಾಜಿಕ ಸ್ಥಾನಮಾನ, ಸಂದರ್ಭಗಳನ್ನಾಧರಿಸಿ ಜಾರಿಯಲ್ಲಿರುವುದು ಕಂಡುಬರುತ್ತದೆ.

೧.೩. **ಅಂತರ್ಜಾತಿ ವಿವಾಹ :** ಭಿನ್ನ ಜಾತಿಗಳ ನಡುವೆ ಏರ್ಪಡುವ ಪರಸ್ಪರ ವಿವಾಹ ಸಂಬಂಧಗಳಿಗೆ ಅಂತರ್ಜಾತಿ ವಿವಾಹವೆನ್ನಬಹುದು. ಗೊಸಂಗಿಗಳಲ್ಲಿ ಅಂತರ್ಜಾತೀಯ ವಿವಾಹಗಳು ನಡೆದಿವೆಯಾದರೂ ತೀರ ಕಡಿಮೆಯೆಂದೇ ಹೇಳಬಹುದು.

ಜಾತಿ, ಮತ, ಧರ್ಮಗಳು ಮುರಿದು ತಾವು ನಂಬಿಕೊಂಡು ಬಂದು ನಡೆಯುತ್ತಿರುವ ಜೀವನ ಮೌಲ್ಯಗಳು ಎಲ್ಲಿ ನಶಿಸಿ ಹೋಗುತ್ತವೆಯೋ ಎಂಬ ಭಯದಿಂದ ಅಂತರ್ಜಾತಿಯ ವಿವಾಹಗಳನ್ನು ಬಹಿಷ್ಕರಿಸುತ್ತಿದ್ದರು. ತಮ್ಮಲ್ಲಿನ ಕಟ್ಟುಪಾಡಗಳನ್ನು ಮೀರಿ ಹೆಣ್ಣು-ಗಂಡು ಕೊಡುವ-ತರುವ, ನಿಯಮಗಳನ್ನು ಉಲ್ಲಂಘಿಸುವ ಗೋಜಿಗೆ ಹೋಗದೆ ತಮ್ಮ ಸಮುದಾಯದ ನೀತಿ ನಿಯಮಗಳನ್ನು ಪಾಲಿಸಿಕೊಂಡು, ಬಂಧು, ಬಳಗ ರಕ್ತ ಸಂಬಂಧಿಗಳಿಗೆ ಕುಂದುಂಟಾಗದಂತೆ ನೋಡಿಕೊಂಡು ಬರುವುದು ಬಹುತೇಕ ಬುಡಕಟ್ಟುಗಳಲ್ಲಿ ಕಾಣಬಹುದು.

ಗೋಸಂಗಿ ಸಮುದಾಯದಲ್ಲಿ ಹುಡುಗ/ಹುಡುಗಿ ಬೇರೆ ಜಾತಿಯ ಹುಡುಗಿ/ಹುಡಗನ ಜೊತೆ ಮದುವೆಯಾದರೆ ಅಂತವರ ತಲೆಯನ್ನು ಬೋಳಿಸಿ ಸೆಗಣಿಯಿಂದ ಹೊಡೆಸಿ ಜಾತಿಯಿಂದ ಹೊರಹಾಕುವರು. ಆದರೆ ಅವರಿಗೆ ಹುಟ್ಟಿದ ಮಕ್ಕಳು ಮಾತ್ರ ಈ ಸಮುದಾಯಕ್ಕೆ ಸೇರಿಕೊಳ್ಳಲು ಅವಕಾಶವಿದೆ.

**೧.೪. ಪ್ರೇಮ ವಿವಾಹ (ಸಿಂದಳ) :** ಧರ್ಮಸೂತ್ರಗಳಲ್ಲಿ, ಗೃಹ್ಯಸೂತ್ರಗಳಲ್ಲಿ ನಿರೂಪಿತವಾಗಿರುವ ಎಂಟು ಬಗೆಯ ವಿವಾಹ ಪದ್ಧಿತಿಗಳಲ್ಲಿ ಗಾಂಧರ್ವ ವಿವಾಹವೂ ಒಂದು. "ನಮ್ಮ ಸ್ಮೃತಿಗಳು ಅಷ್ಟ ವಿಧ ವಿವಾಹಗಳನ್ನು ವಿವರಿಸುತ್ತವೆ. ಪ್ರಾಚೀನ ಭಾರತೀಯರಲ್ಲಿ ಎಂಟು ಬಗೆಯ ವಿವಾಹ ಪದ್ಧತಿಗಳು ರೂಢಿಯಲ್ಲಿದ್ದವು. ಈ ಎಂಟು ಬಗೆಗಳೂ ಧರ್ಮಸೂತ್ರಗಳಲ್ಲಿ, ಗೃಹ್ಯಸೂತ್ರಗಳಲ್ಲಿ ನಿರೂಪಿತವಾಗಿವೆ."[೪] ಅವುಗಳಲ್ಲಿ ಐದನೆಯಾದೇ ಗಾಂಧರ್ವ ವಿವಾಹ ಇಲ್ಲಿ ತಂದೆ-ತಾಯಿಗಳ ಅನುಮತಿಯಿಲ್ಲದೆಯೇ ವಧೂವರರು ಪರಸ್ಪರ ಪ್ರೀತಿಸಿ ವಿವಾಹವಾಗುವುದಕ್ಕೆ ಗಾಂಧರ್ವ ವಿವಾಹವೆಂದು ವಿವರಿಸಿದೆ: ಇಲ್ಲಿ ಪರಸ್ಪರ ಮನಸ್ಸುಗಳೇ ಮುಖ್ಯವಾಗಿರುವುದರಿಂದ ಜಾತಿ, ಅಂತಸ್ತು, ಐಶ್ವರ್ಯಗಳನ್ನೂ ಮೀರಿ ಪ್ರೇಮ ವಿವಾಹಗಳು ನಡೆಯುತ್ತವೆ. ಇಂತಹ ಮದುವೆಗಳಿಗೆ ಸ್ವಜಾತಿ ಬುಡಕಟ್ಟುಗಳಲ್ಲಿಯೂ ಅವಕಾಶವಿದೆ.

ಗೋಸಂಗಿ ಸಮುದಾಯದಲ್ಲಿ ಸಹ ಪ್ರೇಮ ವಿವಾಹಗಳಿಗೆ ಸ್ವಾಗತವಿದೆ. ಆದರೆ, ಪ್ರೀತಿಸಿದವರು ಮಾತ್ರ ಸಮುದಾಯದ ಒಪ್ಪಿಗೆ ಪಡೆದೇ ವಿವಾಹವಾಗುವರು. ಒಬ್ಬ ಕನ್ಯೆ ವಿವಾಹಿತ ಪುರುಷನನ್ನು ಬೇಕಾದರೆ ಪ್ರೀತಿಸಿ ಮದುವೆಯಾಗಬಹುದು. ಇಲ್ಲಿ ಕನ್ಯೆಯೇ ಮುಂದಡಿಯಿಡುತ್ತಾಳೆ. ಈ ರೀತಿಯ ಮದುವೆಗಳು ಸಂತಾಲ ಮತ್ತಿತರ ಪಂಗಡಗಳಲ್ಲಿರುವುದು ಕಂಡುಬರುತ್ತದೆ. ಇಷ್ಟ ಪಟ್ಟು ಬಂದ ಕನ್ಯೆಯ ತಂದೆಗೆ ಅರವತ್ತು ರೂಪಾಯಿಗಳನ್ನು ದೈವಕ್ಕೆ ಎರಡು ರೂಪಾಯಿಗಳನ್ನು ಕೊಟ್ಟು ವಿವಾಹವಾಗಬಹುದು."[೫] ಇದಕ್ಕೆ ತಂದೆ ತಾಯಿಗಳು ಒಪ್ಪದೇ ಇದ್ದಲ್ಲಿ 'ಗಂಗಾ'[೬] ಹಾಗೂ ನಾಲ್ಕು ಜನ ದೈವಗಳನ್ನು ಸೇರಿಸಿ ಹುಡುಗಿಯ ತಂದೆ-ತಾಯಿಗಳಿಗೆ ತಿಳಿ ಹೇಳುವರು. ಅಲ್ಲಿಗೂ ಅವರು ಒಪ್ಪದೇ ಇದ್ದಾಗ ಕನ್ಯಾ ಶುಲ್ಕ (೬೦) ವನ್ನು ಆತನ ಗುಡಾರ ಆಸರೆಯಾಗಿ ನಿಲ್ಲಿಸಿದ ಮುಂದಿನ ಕಂಬಕ್ಕೆ ಕಟ್ಟಿ ಹಿರಿಯರ ಸಮ್ಮುಖದಲ್ಲಿ ವಿವಾಹ ಮಾಡಿಕೊಳ್ಳುತ್ತಾರೆ. ಇಲ್ಲಿ ಹುಡುಗ-ಹುಡುಗಿ, ಹಾಗೂ ದೈವಗಳಿಗೆ ಹೆಚ್ಚು ಬೆಲೆ.

**೧.೫. ವಿಧವಾ ವಿವಾಹ (ಧಾರೂಚ) :** ಗೋಸಂಗಿಗಳಲ್ಲಿ ಇಂದೂ ಸಹ ವಿಧವಾ ವಿವಾಹ ಪದ್ಧತಿ ರೂಢಿಯಲ್ಲಿದೆ. ಚಿಕ್ಕ ವಯಸ್ಸಿನಲ್ಲಿ ಗಂಡ ತೀರಿಕೊಂಡರೆ, ಗಂಡನಾದವನು ಅಕಾಲ ಮರಣಕ್ಕೆ ತುತ್ತಾದರೆ, ಇಂತಹ ಸಂದರ್ಭದಲ್ಲಿ ವಿಧವೆಗೆ ಯಾರ ಆಸರೆಯೂ ಇಲ್ಲದಿದ್ದರೆ ಆಕೆಗೆ ಮರುಮದುವೆ ಮಾಡುವರು. ಇಲ್ಲಿ ವಿಧವೆಯಾದವಳು ಮದುವೆಯಾಗದೆ ಇರುವ ಪುರುಷನನ್ನು, ವಿಧುರನಾದವನು ಕನ್ಯೆಯನ್ನು, ಅಥವಾ ವಿಧವೆ-ವಿಧುರರಲ್ಲಿ ಬೇಕಾದರೂ ವಿವಾಹಗಳು ನಡೆಯಬಹುದು. ತಂದೆತಾಯಿಗಳು ವಿಧವೆಯಾದ ಮಗಳನ್ನು ಮನೆಗೆ ಕರೆದುಕೊಂಡು ಬರಲಿಚ್ಛಿಸಿದರೆ ಗಂಡನ ತಂದೆತಾಯಿಗಳಿಗೆ ಮೂವತ್ತು ರೂಪಾಯಿಗಳನ್ನು, ದೈವಕ್ಕೆ ಎರಡು ರೂಪಾಯಿ ಕೊಟ್ಟು ಕರೆದುಕೊಂಡು ಬಂದು ಮರುವಿವಾಹ ಮಾಡಬಹುದು.

ವಿಧವೆಯನ್ನು ಮದುವೆಯಾಗಲು ಒಪ್ಪಿಕೊಂಡ ವ್ಯಕ್ತಿ ದೈವಗಳ ಸಮ್ಮುಖದಲ್ಲಿ ಆಕೆಯ ತಂದೆತಾಯಿಗಳಿಗೆ ಐವತ್ತೈದು ರೂಪಾಯಿ, ದೈವಕ್ಕೆ ಎರಡು ರೂಪಾಯಿಗಳನ್ನು ಕೊಟ್ಟು ಕೈಹಿಡಿದು ಕರೆದುಕೊಂಡು ಹೋಗಬಹುದು. ಈ ರೀತಿಯ ಎರಡನೇ ಮದುವೆಗೆ ತಾಳಿಕಟ್ಟುವುದಾಗಲಿ, ಸಂಪ್ರದಾಯ ಬದ್ಧ ಶಾಸ್ತ್ರವಾಗಲಿ ಇರುವುದಿಲ್ಲ. "ರಾಂಚಿ ಜಿಲ್ಲೆಯಲ್ಲಿರುವ ಓರ್‌ಯಾನ್ ಜನಾಂಗದಲ್ಲಿ ವಿಧವಾ ವಿವಾಹ

ಮಾಡುವ ವಿಶಿಷ್ಟ ಸಂಪ್ರದಾಯವೊಂದಿದೆ. ವಿಧುರ ಮತ್ತೆ ವಿವಾಹವಾಗುವುದಾದರೆ ವಿಧವೆಯನ್ನೇ ವಿವಾಹವಾಗಬೇಕು. ಇಲ್ಲದಿದ್ದರೆ ವಿಚ್ಛೇದನ ಪಡೆದ ಸ್ತ್ರೀಯನ್ನೇ ವಿವಾಹವಾಗಬೇಕು. ವಿಧುರನು ಕನ್ಯೆಯನ್ನೇ ಲಗ್ನವಾಗುವ ಪಕ್ಷದಲ್ಲಿ ಅವಳನ್ನು ಮೊದಲು ಒಂದು ಮರಕ್ಕೆ ಮದುವೆಮಾಡಿ ನಂತರ ಅವನಿಗೆ ಮದುವೆ ಮಾಡುತ್ತಾರೆ."[೬] ಭಾರತದ ಬುಡಕಟ್ಟುಗಳಲ್ಲಿ 'ವಿವಾಹ' ಒಂದು ಸಾಮಾಜಿಕ ಸಂಸ್ಥೆಯಾಗಿರುವುದರಿಂದ ವಿಧವೆ, ವಿಧುರರಿಗೆ ಸಾಮಾಜಿಕ ಭದ್ರತೆಯನ್ನು ಒದಗಿಸುವ ಹಿನ್ನೆಲೆಯಲ್ಲಿ ವಿವಿಧ ಬುಡಕಟ್ಟು ಸಮುದಾಯಗಳು ತಮ್ಮದೇ ಆದ ನೀತಿ-ನಿಯಮಗಳನ್ನು ರೂಪಿಸಿಕೊಂಡು ವಿಧವಾ ವಿವಾಹಗಳನ್ನು ಪ್ರೋತ್ಸಾಹಿಸುತ್ತಾ ಬರುತ್ತಿರುವುದು ಅವರ ಮಾನವೀಯತೆಯನ್ನು ಎತ್ತಿ ತೋರಿಸುತ್ತದೆ. ಬುಡಕಟ್ಟುಗಳ ಅಧ್ಯಯನ ಮಾಡಿದ ಬಹುತೇಕ ವಿದ್ವಾಂಸರು ವಿಧವಾ ವಿವಾಹಕ್ಕೆ ಹೆಣ್ಣುಗಳ ಕೊರತೆಯೇ ಮುಖ್ಯ ಕಾರಣವೆಂದು ಅಭಿಪ್ರಾಯಪಟ್ಟಿದ್ದಾರೆ. ಅದೇನೇ ಇದ್ದರೂ ನಾಗರಿಕ ಸಮಾಜದಿಂದ ದೂರವಿರುವ ಅಲೆಮಾರಿ ಸಮುದಾಯಗಳು ಹೆಣ್ಣಿನ ಅಂತರಾಳದ ನೋವನ್ನು ಅರಿತು ಅತ್ಯಂತ ಮಾನವೀಯತೆಯಿಂದ ನೋಡಿಕೊಳ್ಳುತ್ತಿರುವುದು ಇಂತಹ ಘಟನೆಗಳಿಂದ ತಿಳಿದು ಬರುತ್ತದೆ. ಹಾಗಾಗಿ ಗೋಸಂಗಿ ಸಮುದಾಯವು ಆಧುನಿಕ ಸಮಾಜ ಎದುರಿಸುತ್ತಿರುವ ವಿಧವಾ ಸಮಸ್ಯೆ, ವೇಶ್ಯಾ ಸಮಸ್ಯೆ, ಬಾಲಾಪರಾಧದಂತಹ ಸಮಸ್ಯೆಗಳಿಂದ ಮುಕ್ತವಾಗಿ ಜೀವನ ಸಾಗಿಸುತ್ತಿರುವುದು ಕಂಡುಬರುತ್ತದೆ.

೧.೬. ವಿವಾಹ ವಿಚ್ಛೇದನ : ಇತರ ಬುಡಕಟ್ಟು ಸಮುದಾಯಗಳಂತೆ ಗೋಸಂಗಿಗಳೂ ಸಹ ತಮ್ಮ ಸಮುದಾಯದಲ್ಲಿ ಶಾಂತತೆಯನ್ನು ಕಾಪಾಡಿಕೊಂಡು ಹೋಗಲು ಹಾಗೂ ಅದನ್ನು ವ್ಯವಸ್ಥಿತವಾಗಿ ಮುಂದುವರಿಸಿಕೊಂಡು ಹೋಗಲು ಅವರದೇ ಆದ ನೀತಿ-ನಿಯಮಗಳನ್ನು ರೂಪಿಸಿಕೊಂಡಿದ್ದಾರೆ. ಈ ನೀತಿ-ನಿಯಮಗಳು ತಮ್ಮ ಸಮುದಾಯದ ಒಳಿತಿನ ಕಡೆಗೆ ಹೆಚ್ಚು ಗಮನ ಕೊಟ್ಟಿರುವುದನ್ನು ನೋಡಬಹುದು. ಸರ್ವರಿಗೆ ಸಮಬಾಳು ಸರ್ವರಿಗೆ ಸಮಪಾಲು ಎಂಬ ನೀತಿಯಡಿಯಲ್ಲಿ ಇವರ ಸಾಮಾಜಿಕ ಸಂಘಟನೆ ರೂಪಿತವಾಗಿದೆ.

ಗಂಡ-ಹೆಂಡಿರ ನಡುವಿನ ಹೊಂದಾಣಿಕೆ ಸರಿಯಿಲ್ಲದಾಗ 'ವಿಚ್ಛೇದನ' ಅನಿವಾರ್ಯವಾಗುತ್ತದೆ. ಅಂತಹ ಅನಿವಾರ್ಯವನ್ನು ತಪ್ಪಿಸಲು ಪ್ರತಿಯೊಂದು ಸಮುದಾಯಗಳು ಕೆಲವು ನಿಯಮಗಳನ್ನು ಅನುಸರಿಸುತ್ತಾರೆ. ಇದಕ್ಕೆ ಗೋಸಂಗಿಗಳು ಹೊರತಲ್ಲ. ಇವರು ಎರಡು ಕಾರಣಗಳಿಗಾಗಿ 'ವಿಚ್ಛೇದನೆ'ಯನ್ನು ಬಯಸುವರು.

೧. ಗಂಡನ ನಡವಳಿಕೆಗಳು ಹೆಂಡತಿಗೆ ಅಹಿತಕರವಾಗಿದ್ದಾಗ

೨. ಹೆಂಡತಿಯ ನಡವಳಿಕೆಗಳು ಗಂಡನಿಗೆ ಅಹಿತಕರವಾಗಿ ಕಂಡು ಬಂದಾಗ

ಗಂಡ ಹೆಂಡತಿಯನ್ನು ಸರಿಯಾಗಿ ಸಂಬಾಳಿಸಲು ಸಾಧ್ಯವಾಗದೇ, ದೈಹಿಕವಾಗಿ ಸುಖವನ್ನು ಕೊಡದೇ ಇದ್ದಪಕ್ಷದಲ್ಲಿ, ಕುಡಿದು ಹೆಂಡತಿಯನ್ನು ಹಿಂಸಿಸುತ್ತಿದ್ದಲ್ಲಿ, ಹೆಂಡತಿಯಾದವಳು ತಮ್ಮ ಸಮುದಾಯದ ದೈವದವರನ್ನು ಕರೆಸಿ, ತನ್ನ ಸಮಸ್ಯೆಗಳನ್ನು ಹೇಳಿಕೊಂಡು ಆತನ ಜೊತೆ ಸಂಸಾರ ಮಾಡಲು ಸಾಧ್ಯವೇ

ಇಲ್ಲ ಎಂಬ ನಿರ್ಧಾರಕ್ಕೆ ಬಂದು ವಿಚ್ಛೇದನ ಪಡೆಯಬಹುದು. ಪಡೆಯುವಾಗ ಕನ್ಯಾಶುಲ್ಕ, ಹಾಗೂ ಮದುವೆ ಸಂದರ್ಭದಲ್ಲಿ ಕೊಟ್ಟ ವಸ್ತುವಡವೆಗಳನ್ನು ಗಂಡನಿಗೆ ಹಿಂತಿರುಗಿಸಿ, ಸಮಸ್ತ ದೈವಗಳ ಎದುರು ತನ್ನ ಸೀರೆ ಸೆರಗಿನ ಅಂಚನ್ನು ಸ್ವಲ್ಪ ಹರಿದು ವಿಚ್ಛೇದನ ಪಡೆದು ತವರು ಮನೆಗೆ ಹೋಗಬಹುದು. ಆಕೆ ಮತ್ತೊಬ್ಬರನ್ನು ಮದುವೆಯಾಗಲು ಇಚ್ಛಿಸಿದರೆ ಕೂಡಿಕೆ ಮದುವೆಗೂ ಸಹ ಅವಕಾಶ ಉಂಟು.

ಹೆಂಡತಿಯಾದವಳು ಗಂಡನಿಗೆ ಸರಿಯಾಗಿ ಹೊಂದಿಕೊಳ್ಳದೇ ಇದ್ದು, ಪರಪುರಷನ ಜೊತೆ ಲೈಂಗಿಕ ಸಂಪರ್ಕವನ್ನು ಹೊಂದಿದ್ದರೆ. ಕುಟುಂಬ ನಿರ್ವಹಣೆಯಲ್ಲಿ ಅಲಕ್ಷತನವನ್ನು ತೋರಿಸಿದ್ದರೆ ಗಂಡನಾದವನು ತನ್ನ ಸಮಸ್ಯೆಗಳನ್ನು ದೈವಗಳ ಹತ್ತಿರ ಹೇಳಿಕೊಂಡು ವಿಚ್ಛೇದನ ಬಯಸಬಹುದು. ಇಂತಹ ಸಂದರ್ಭದಲ್ಲಿ ದೈವಗಳಿಗೆ ಮೂರು ರೂಪಾಯಿಗಳನ್ನು ಕೊಟ್ಟು ದೈವಗಳು ಹೇಳಿದಂತೆ ಆತ ತಲೆಗೆ ಟವಲ್ ಸುತ್ತಿಕೊಂಡು (ಮಾತಾನೆ ಲುಗುಡೋ ಬಾಂದ್- ತಲೆಗೆ ಬಟ್ಟೆಯನ್ನು ಕಟ್ಟು) 'ಜಾತ್ ಜಮಾತೊ ಆಜ್‌ಮೇ ಜೋಗುಣ್ ತೀನ್ ದಿನ್ ಜೋಗಣ ಚೋಡೋವಗಿಯೋ. ಆಸ್ತಿನ್ ಆಯಿಬೇನ್ ಕೀನ್ ಚೋಡೋವಗಿಯೋ' (ನೆರೆದಂತೆ ಸಭೀಕರೆ ಇವತ್ತಿನ ದಿನ ಹೆಂಡತಿಗೆ ಮೂರು ರೂಪಾಯಿಗಳನ್ನು ಕೊಟ್ಟು ಬಿಡುಗಡೆಗೊಳಸ್ತಾ ಇದೀನಿ. ಇವತ್ತಿನಿಂದ ಈಕೆಯನ್ನು ತಾಯಿ, ಅಕ್ಕ ಎಂಬ ಭಾವನೆಯಿಂದ ನೋಡುತ್ತೇನೆ) ಎಂದು ಹೇಳಿ ಸಂಬಂಧವನ್ನು ಕಡಿದುಕೊಳ್ಳುವನು.

ಈ ರೀತಿಯಾಗಿ ಗೊಸಂಗಿಗಳಲ್ಲಿ 'ವಿಚ್ಛೇದನ' ಕ್ರಿಯೆ ನಡೆಯುತ್ತಿದ್ದರೂ ಅದಕ್ಕೆ ಹೆಚ್ಚಿನ ಅವಕಾಶ ಕೊಡುವುದಿಲ್ಲ. ಪ್ರತಿಯೊಂದು ಸಮುದಾಯದಲ್ಲಿ ವಿವಾಹಕ್ಕೆ ಹೆಚ್ಚಿನ ಪ್ರಾಶಸ್ತ್ಯವಿದೆಯೇ ವಿನಹ ವಿಚ್ಛೇದನಕ್ಕಲ್ಲ. ಹಾಗಾಗಿ ಗಂಡ-ಹೆಂಡಿರ ನಡುವೆ ಎಷ್ಟೇ ಜಗಳಗಳಾದರೂ, ಆ ಸಮುದಾಯದ ಹಿರಿಯರು, ದೈವಗಳು ಸಭೆ ಸೇರಿ ಸಮಸ್ಯೆಗಳನ್ನು ತಿಳಿಮಾಡಿ ದಂಪತಿಗಳನ್ನು ಮತ್ತೆ ಒಂದುಗೂಡಿಸಿ ಸಂಸಾರ ಮುಂದುವರಿಸಿಕೊಂಡೋಗಲು ಪ್ರಯತ್ನಿಸುತ್ತಾರೆ. (ಇಲ್ಲಿ ವಿಚ್ಛೇದನ ಪಡೆಯಲು ಹೆಂಡತಿಗೆ ಹೆಚ್ಚಿನ ಸ್ವತಂತ್ರವಿರುವುದಿಲ್ಲ) ಹಾಗಾಗದೇ ಇದ್ದ ಪಕ್ಷದಲ್ಲಿ ವಿಚ್ಛೇದನ ಪಡೆಯಲು ಇಬ್ಬರಿಗೂ ದೈವಗಳು ಅನುಮತಿಯನ್ನು ನೀಡುತ್ತಾರೆ. ವಿಚ್ಛೇದಿತ ಗಂಡ ಹೆಂಡಿರನ್ನೂ ಸಮಾಜ ಕೀಳಾಗಿ ನೋಡುತ್ತದೆ. ಮುಂದೆ ಅಂತವರಿಗೆ ಸಾಮಾಜಿಕ ಸ್ಥಾನಮಾನಗಳು ಸಿಗದೇ ಇರುವುದರಿಂದ ಇಂತಹ ಘಟನೆಗಳು ವಿರಳವೆಂದೇ ಹೇಳಬಹುದು. ಇದು ಪ್ರತಿಯೊಂದು ಬುಡಕಟ್ಟುಗಳಲ್ಲಿ ಕಂಡುಬರುವ ಸಾಮಾನ್ಯ ವಿಷಯವಾಗಿದೆ.

## ೨. ಬಳಿಗಳು

ಕೆಲವು ಸಮುದಾಯಗಳು 'ಗೋತ್ರ', 'ಬೆಡಗು' ಎಂದು ಕರೆಯುವುದನ್ನೇ ಗೋಸಂಗಿಗಳು 'ಬಳಿ' ಎಂದು ಕರೆದುಕೊಳ್ಳುತ್ತಾರೆ. ಗೋಸಂಗಿಗಳು 'ಬಳಿ' ಎಂಬ ಸಾಮಾನ್ಯ ಪದದೊಡನೆ ಕುಲವನ್ನು ಸೇರಿಸಿ ಹೇಳುವುದು ರೂಢಿಯಲ್ಲಿದೆ. ಉದಾ: 'ಖಾಗಳ್'ನವರು ಖಾಗಳ್ ಬಳಿ ಎಂದು, 'ಪಡಿಯಾರ್'ರವರು 'ಪಡಿಯಾರ್ ಬಳಿ' ಎಂದು ಕರೆದುಕೊಳ್ಳುವುದು ಚಾಲ್ತಿಯಲ್ಲಿದೆ.

ಅಲೆಮಾರಿ ಗೋಸಂಗಿಗಳು ವೈವಾಹಿಕ ಸಂಬಂಧವನ್ನು ಬೆಳೆಸುವ ಸಂದರ್ಭದಲ್ಲಿ ಬಳಿಗಳಿಗೆ ಹೆಚ್ಚಿನ ಮಹತ್ವವನ್ನು ನೀಡುತ್ತಾರೆ. ಸಮಬಳಿಗಳಲ್ಲಿ ವಿವಾಹ ನಿಷೇಧವಿದ್ದು, ಬೆಸ ಬಳಿಗಳಲ್ಲಿ ವಿವಾಹ ಸಂಬಂಧ ಬೆಳೆಸಬಹುದಾಗಿದೆ. ಈ ನಿಯಮ ಬಹುತೇಕ ಎಲ್ಲಾ ಬಡುಕಟ್ಟುಗಳಲ್ಲಿ ಕಂಡುಬರುವ ಸಾಮಾನ್ಯ ಸಂಗತಿಯಾಗಿದೆ. "ಆದಿಯಲ್ಲಿ ಒಳ ಬಾಂಧವ್ಯದಿಂದ ತೀರ ಹತ್ತಿರದ ಬಂಧುಗಳ ನಡುವೆ ವಿವಾಹ ಸಂಬಂಧ ಏರ್ಪಟ್ಟ ಜನಾಂಗದ ಆರೋಗ್ಯದ ಮೇಲೆ ಕೆಟ್ಟಪರಿಣಾಮವಾಗಿರಬೇಕು. ಜೊತೆಗೆ ಜೀವಶಾಸ್ತ್ರಜ್ಞರು ಅನೇಕ ವರ್ಷಗಳ ಕಾಲ ಸಂಶೋಧನೆ ನಡೆಸಿ ತೀರ ಹತ್ತಿರದ ಬಂಧುಗಳ ನಡುವೆ ವಿವಾಹ ಸಂಬಂಧ ಏರ್ಪಡುವುದರಿಂದ, ಅವರಿಂದ ಜನಿಸುವ ಶಿಶುಗಳ ಆರೋಗ್ಯ ಕೆಟ್ಟು, ಆ ಶಿಶುಗಳು ಅಲ್ಪಾಯುಗಳಾಗಿರುವುದಲ್ಲದೆ ತಾಯಿಗೆ ಗರ್ಭಸ್ರಾವವಾಗಿ ಮುಂದಿನ ಜನಾಂಗದ ಆರೋಗ್ಯದ ಮೇಲೆ ದುಷ್ಪರಿಣಾಮವುಂಟಾಗುತ್ತದೆ ಎಂದು ಅಭಿಪ್ರಾಯ ಪಟ್ಟಿದ್ದಾರೆ. ಆದ್ದರಿಂದ ಈ ಅನೇಕ ಸಮಸ್ಯೆಗಳನ್ನು ನಿವಾರಿಸಲು ಹೊರಬಾಂಧವ್ಯವು ಸುಧಾರಿತ ಪದ್ಧತಿಯಾಗಿ ಬೆಳೆದು ಬಂದು ಕುಲಗಳು ಹುಟ್ಟಿರಬೇಕು."[೮] ಎಂದು ವಿದ್ವಾಂಸರು ಅಭಿಪ್ರಾಯಪಟ್ಟಿರುವುದು ಇತ್ತೀಚಿನ ವೈಜ್ಞಾನಿಕ ಅಧ್ಯಯನದಿಂದ ಎಂಬುದು ಸ್ಪಷ್ಟ. ಆದಿಯಲ್ಲಿ ಒಳ-ಹೊರ ಬಾಂಧವ್ಯಗಳ ಬಗ್ಗೆ ಇವರಿಗಿರುವ ಕಲ್ಪನೆಯೇ ಬೇರೆಯದಾಗಿತ್ತು. ಒಳ ಬಾಂಧವ್ಯಗಳು ಸೋದರ ಸಂಬಂಧ, ಹೊರ ಬಾಂಧವ್ಯಗಳು ನೆಂಟರ ಸಂಬಂಧ ಎಂಬ ಕಾರಣಕ್ಕಾಗಿ ಒಳ ಬಾಂಧವ್ಯದಲ್ಲಿ ವಿವಾಹ ನಿಷಿದ್ಧವಿದ್ದು, ಹೊರಬಾಂಧವ್ಯದಲ್ಲಿ ವಿವಾಹ ನಡೆಸುತ್ತಾ ಬಂದಿರುವುದನ್ನು ನಾವು ಕಾಣಬಹುದಾಗಿದೆ.

ಕರ್ನಾಟಕದ ಕೆಲವು ಭಾಗದಲ್ಲಿನ ಗೋಸಂಗಿಗಳನ್ನು ನಾನು ಸಂದರ್ಶಿಸಿದಾಗ ಸುಮಾರು ಹತ್ತೊಂಬತ್ತು 'ಬಳಿ'ಗಳಿರುವುದಾಗಿ ತಿಳಿದುಬಂದಿತು. ಆದರೆ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ನನಗೆ ದೊರೆತದ್ದು ಒಂಬತ್ತು ಬಳಿಗಳು ಮಾತ್ರ. 'ಮಹಾರಾಷ್ಟ್ರದಲ್ಲಿ ಹತ್ತೊಂಬತ್ತಕ್ಕೂ ಹೆಚ್ಚಿನ ಬಳಿಗಳಿವೆ, ಅವುಗಳ ಹೆಸರು ನಮಗೆ ತಿಳಿಯದು ಎನ್ನುತ್ತಾರೆ ವಕ್ತೃಗಳು'. ಅದೇನೇ ಇದ್ದರೂ ಸದ್ಯ ಇವರಲ್ಲಿ ಬಳಕೆಯಲ್ಲಿರುವ ಬಹುಮುಖ್ಯ ಬಳಿಗಳೆಂದರೆ ಬಾರ ಬಳಿಗಳು. 'ಬಾರ' ಅಂದರೆ ಹನ್ನೆರಡು ಎಂದರ್ಥ. ಹನ್ನೆರಡು ಬಳಿಗಳಿಂದ ಕೂಡಿದ ಒಂದು ಗುಂಪು ಇವರದ್ದಾಗಿದ್ದು, ಈ ಗುಂಪಿಗೆ 'ಚೌವ್ಹಾಣ್' ಬಳಿಯವರು ಮುಖ್ಯಸ್ಥರಾಗಿರುತ್ತಾರೆ. ಹಾಗಾಗಿ 'ಚೌವ್ಹಾಣ್' ಬಳಿಯವರಿಗೆ 'ಬಾರಾಪಾಟಿ ಚಾವ್ಹಾಣ್'[೯] ಎಂದೇ ಕರೆಯುತ್ತಾರೆ. ಅಂದರೆ ಹನ್ನೆರಡು ಕುಲಗಳಿಗೆ (ಬಳಿಗಳಿಗೆ) ಯಜಮಾನ. ಈತನೇ ಮುಖ್ಯಸ್ಥ ಅಲೆಮಾರಿ ಗೋಸಂಗಿಗಳು ಎಲ್ಲೇ ಇರಲಿ, ಮದುವೆ-ಮುಂಜಿ, ಹಬ್ಬ-ಹರಿದಿನ ನ್ಯಾಯ ನಿರ್ಣಯ ಹೀಗೆ ಯಾವುದೇ ಕಾರ್ಯ ಮಾಡಿದರೂ ಚೌಹಾಣ್ ಬಳಿಯವರಿಗೆ ಮುಡುಪು ಕಟ್ಟಿ ಕಾರ್ಯವನ್ನು ಪ್ರಾರಂಭಿಸಬೇಕು. ಆ ಮೂಲಕ ಉಳಿದ ಹನ್ನೊಂದು ಬಳಿಯವರು. 'ಬಾರಾಪಾಟಿ ಚೌಹಾಣ್'ಗೆ ಗೌರವವನ್ನು ಸೂಚಿಸುವರು. ಸಮುದಾಯದ ನಿಯಮಗಳನ್ನು ಉಲ್ಲಂಘಿಸಿದವರಿಗೆ ಕೊಡೊ ಶಿಕ್ಷೆ ತುಂಬಾ ಕಠಿಣವಾಗಿರುವುದರಿಂದ ನಿಯಮಗಳಿಗೆ ಬದ್ಧರಾಗಿ ಬದುಕನ್ನು ಸಾಗಿಸುತ್ತಾರೆ.

## ಗೋಸಂಗಿ ಸಮುದಾಯದ ಬಳಿಗಳ ವಿವರ

ಕ್ರ.ಸಂ. ಬಳಿಗಳು

೧



೨



೩



೪



೫



| ಕ್ರ.ಸಂ. | ಬಳಿಗಳು |
|---|---|
| ೬ | ಮುಣ್ಕ್ಯಾಣಿ |
| ೭ | ಮೊಂಗ್ಲಿಯಾ |
| ೮ | ಘುಟಾಡ್ |
| ೯ | ರಾಠೋಡ್ |
| ೧೦ | ಚೌವಾಣ್ |
| ೧೧ | ತೆವಾರಿಯಾ |
| ೧೨ | ಬಾಮ್ಣ್ಯಾ |
| ೧೩ | ಬೋಡ್ಕ್ಯಾ |
| ೧೪ | ಉಮ್ಮಟ್ |
| ೧೫ | ಗೋಡ್ |
| ೧೬ | ಇಸಳವಾತ್ |
| ೧೭ | ಭಾಟ್ |
| ೧೮ | ವಾಮನ್ |
| ೧೯ | ಸಾಳಂಕಿ (ಸೌಳಂಕಿ) |

(ಇವು ಕರ್ನಾಟಕದಲ್ಲಿ ವಾಸಿಸುತ್ತಿರುವ ಗೋಸಂಗಿ ಸಮುದಾಯದ ಬಳಿಗಳು)

ಗೋಸಂಗಿಗಳಲ್ಲಿ ಕಾಣಬರುವ ಚೌವ್ಹಾಣ್, ರಾಠೋಡ್, ಪಮ್ಮಾರ್, ಬಳಿಗಳು ಲಂಬಾಣಿ, ಮಾರವಾಡಿಗಳಲ್ಲೂ ಸಹ ಕಂಡುಬರುತ್ತಿವೆ. ಅಷ್ಟೇ ಅಲ್ಲ ರಜಪೂತರಲ್ಲೂ ಸಹ ಈ ಬಳಿಗಳಿರುವುದು ಕಂಡುಬರುತ್ತಿದೆ. ಹಾಗಾಗಿ ಬೇರೆ ಸಮುದಾಯದ ಬಳಿಗಳು ನಿಮ್ಮ ಸಮುದಾಯದಲ್ಲೂ ಬರಲು ಕಾರಣವೇನು ಎಂಬ ಪ್ರಶ್ನೆಗೆ, 'ನಾವು ಲಂಬಾಣಿ, ಮಾರವಾಡಿ ವಾಗರಿ (ಹಕ್ಕಿಪಿಕ್ಕಿ)ಗಳು ಒಂದೆ ತಂದೆಯ ಮಕ್ಕಳು ಎಂದ್ಹೇಳುತ್ತಾರೆಯೇ ವಿನಃ ಇದಕ್ಕೆ ಪೂರಕವಾದ ಸಾಹಿತ್ಯವಾಗಲಿ, ಐತಿಹ್ಯಗಳಾಗಲಿ ಅಥವಾ ವಕ್ತೃಗಳಿಂದ ಸ್ಪಷ್ಟವಾದ ಕಥೆಗಳಾಗಲಿ ಸಿಗದೇ ಇರುವುದೇ ದೌರ್ಭಾಗ್ಯ. ಮರಾಠಿ ಭಾಷೆಯನ್ನಾಡುವ ಅಲೆಮಾರಿ ಗೋಸಂಗಿಗಳ ಮೂಲ ಮಹಾರಾಷ್ಟ್ರವಾಗಿದ್ದು, ಸುಮಾರು ೬೦-೭೦ ವರ್ಷಗಳ ಹಿಂದೆಯೇ ಕರ್ನಾಟಕಕ್ಕೆ ಬಂದು ಅಲೆಮಾರಿ ಬದುಕನ್ನು ಸಾಗಿಸುತ್ತಿರುವುದರಿಂದ ಇತ್ತೀಚೆಗೆ ಮಹಾರಾಷ್ಟ್ರ ರಾಜ್ಯದಲ್ಲಿನ ಗೋಸಂಗಿಗಳೊಂದಿಗೆ ಸಂಬಂಧಗಳು ಕಡಿಮೆಯಾಗುತ್ತಿದ್ದರೂ, ಕೆಲವೊಬ್ಬರು ಇನ್ನೂ ವೈವಾಹಿಕ ಸಂಬಂಧಗಳನ್ನು ಬೆಳೆಸುತ್ತಿರುವುದು ಕಂಡುಬರುತ್ತದೆ. ಬಹುಶಃ ಮಹಾರಾಷ್ಟ್ರ ರಾಜ್ಯದಲ್ಲಿ ವ್ಯಾಪಕ ಕ್ಷೇತ್ರ ಕಾರ್ಯ ಕೈಗೊಂಡರೆ ಗೋಸಂಗಿಗಳ ಬಗ್ಗೆ ಖಚಿತ ಮಾಹಿತಿ ಲಭ್ಯವಾಗಬಹುದು.

ಕೆಲವು ಜಾತಿ, ಬಳಿಗಳೊಳಗೆ ಒಳಪ್ರಭೇದಗಳಿರುವಂತೆ ಗೋಸಂಗಿಗಳ ಬಳಿಗಳಲ್ಲೂ ಒಳಪ್ರಭೇದಗಳಿರುವುದು ಕಂಡುಬಂದಿದೆ. ಇವರ ಕೆಲವು ಬಳಿಗಳಲ್ಲಿ 'ಆಡ್ರಾ', 'ಕಾಡ್ರಾ', (ಆಡ್ರಾ ಖಾಗಳ್, ಕಾಡ್ರಾ ಖಾಗಳ್) ಎಂದು ಮತ್ತೆ ಕೆಲವು ಬಳಿಗಳಲ್ಲಿ 'ಧಾರ್', 'ಲಿಂಡಿ' (ಧಾರ್ ಪಂವಾರ್, ಲಿಂಡಿ ಪಂವಾರ್) ಎಂಬ ಪ್ರಭೇದಗಳಿರುವುದನ್ನು ನೋಡಬಹುದು. ತಮ್ಮ ಸಮುದಾಯದೊಳಗೆ ಜನಿಸಿದವರಿಗೆ 'ಆಡ್ರಾ' ಎಂದು ಕರೆದರೆ, ಹೊರಗಿನಿಂದ (ದತ್ತು) ಪಡೆದ ಮಕ್ಕಳನ್ನು ತಮ್ಮ ಸಮಾಜಕ್ಕೆ ಸೇರಿಸಿಕೊಂಡವರನ್ನು 'ಕಾಡ್ರಾ' ಎಂದು ಕರೆಯುವರು. ಆದರೆ 'ಧಾರ್' ಮತ್ತು 'ಲಿಂಡ್' ಪ್ರಭೇದಗಳ ಬಗ್ಗೆ ಸರಿಯಾದ ಮಾಹಿತಿ ಲಭ್ಯವಿಲ್ಲ.

ಗೋಸಂಗಿಗಳಲ್ಲಿ ಈಗಲೂ ಸಹ ಬೇರೆ ಜಾತಿಯ ಮಕ್ಕಳನ್ನು (ಏಳು ವರ್ಷದೊಳಗಿನ) ದತ್ತು ತೆಗೆದುಕೊಳ್ಳುವ ಪದ್ಧತಿಯಿದೆ. ಹೀಗೆ ದತ್ತು ಸ್ವೀಕರಿಸುವ ಮೂಲಕ ತಮ್ಮ ಸಮಾಜಕ್ಕೆ ಸೇರಿಸಿಕೊಂಡವರನ್ನ 'ಕಾಡ್ರಾ' (ಹೊರಗಿನವ) ಎಂದು ಕರೆಯುವುದರ ಜೊತೆಗೆ 'ಮಾಡ್ರೋದಗಡೊ' (ಅಡವಿಕಲ್ಲು) ಎಂತಲೂ ಕರೆಯುವರು. ಹೀಗೆ ಗೋಸಂಗಿ ಸಮುದಾಯದ ಬಳಿಗಳಲ್ಲಿ ಒಳ ಪ್ರಭೇದಗಳಿದ್ದರೂ ಸಹ ವೈವಾಹಿಕ ಸಂಬಂಧ ಬೆಳೆಸಲು ಯಾವುದೇ ಅಭ್ಯಂತರವಿರುವುದಿಲ್ಲ. ಉದಾ






ಕರ್ನಾಟಕದಲ್ಲಿ ಸುಮಾರು ಹತ್ತೊಂಬತ್ತಕ್ಕೂ ಹೆಚ್ಚು ಪ್ರದೇಶಗಳಲ್ಲಿ ಗೋಸಂಗಿಗಳು ವಾಸಿಸುತ್ತಿದ್ದು, ಈ ಪ್ರದೇಶದಲ್ಲಿ ಖಾಗಳ್, ಪಡಿಯಾರ್, ಪಂವಾರ್, ಜ್ಞಿಂವಾ, ಉಮ್ಮಟ್, ಮುಣ್ಯಾಣೆ, ಮಕ್ವಾಣೆ, 'ಬಳಿ'ಯವರೇ ಹೆಚ್ಚಾಗಿದ್ದಾರೆ. ಉಳಿದ 'ಬಳಿ'ಯವರು ಕಡಿಮೆ ಸಂಖ್ಯೆಯಲ್ಲಿರುವುದು ತಿಳಿದುಬರುತ್ತಿದೆ. ಮಹಾರಾಷ್ಟ್ರ ಮೂಲದವರಾದ ಗೋಸಂಗಿಗಳ ಭಾಷೆ ಮರಾಠಿಯಾಗಿದ್ದು, ಜೀವನೋಪಾಯಕ್ಕಾಗಿ ಸಣ್ಣ ಪುಟ್ಟ ಕಸುಬುಗಳನ್ನು ಮಾಡುತ್ತಾ, ಆಂಧ್ರ, ತಮಿಳುನಾಡು ರಾಜ್ಯಗಳ ಪ್ರಮುಖ ನಗರಗಳನ್ನು ಸುತ್ತಿ ಕರ್ನಾಟಕಕ್ಕೆ ಬಂದಿರುವ ಇವರು ಆಯಾ ಪ್ರದೇಶದ ಪ್ರಾದೇಶಿಕ ಭಾಷೆಯನ್ನು ಚೆನ್ನಾಗಿ ಮಾತನಾಡಬಲ್ಲವರಾಗಿದ್ದಾರೆ. ಜೊತೆಗೆ ಮರಾಠಿ, ಕನ್ನಡ, ತೆಲುಗು, ತಮಿಳು ಭಾಷೆಗಳನ್ನು ಬಳಸಿಕೊಂಡು ಬೇರೆ ಸಮುದಾಯಗಳಿಗೆ ತಮ್ಮ ವ್ಯವಹಾರಗಳು ಅರ್ಥವಾಗದಂತೆ ಮುರುಗಾ ಭಾಷೆಯನ್ನು ಸಹ ಮಾತನಾಡುತ್ತಾರೆ. ಈ ರೀತಿ ಮುರಗಾ ಭಾಷೆಯನ್ನು ದೊಕ್ಕಲರು, ಹಕ್ಕಿಪಿಕ್ಕಿ, ಬುಡ್ಗಜಂಗಾಲ, ದುರಗಮುರಗಿ, ಸಿಂದ್‌ಮಾದಿಗರು, ಮಾಸ್ಟೀಕರ ಸಮುದಾಯಗಳಲ್ಲೂ ಸಹ ಕಾಣಬಹುದಾಗಿದೆ. ಆದರೆ ಈ ಎಲ್ಲಾ ಸಮುದಾಯಗಳಾಡುವ ಮುರುಗಾ ಭಾಷೆ ಒಂದೇ ತೆರನಾಗಿರುವುದಿಲ್ಲ, (ಕೆಲವೊಂದರಲ್ಲಿ ಮಾತ್ರ ಸಾಮ್ಯ ಇರುತ್ತದೆ) ಹೀಗೆ ಅಲೆಮಾರಿ ಸಮುದಾಯಗಳು ಇಂದೂ ಸಹ ತಮ್ಮಲ್ಲಿ ಮುರುಗಾ ಭಾಷೆಯನ್ನು ಉಳಿಸಿ ಬೆಳಸಿಕೊಂಡು ಬರುತ್ತಿರುವುದು ವಿಶೇಷವಾಗಿದೆ.

### ೩. ನ್ಯಾಯಪಂಚಾಯಿತಿ

ಭಾರತದಲ್ಲಿನ ಪ್ರತಿಯೊಂದು ಬುಡಕಟ್ಟುಗಳು ತಮ್ಮಲ್ಲಿನ ಒಳಜಗಳಗಳನ್ನು ಬಗೆಹರಿಸಿಕೊಳ್ಳಲು ತಮ್ಮಲ್ಲೇ ಒಂದು ಪಂಚಾಯ್ತಿಯನ್ನು ರಚಿಸಿಕೊಂಡಿರುತ್ತವೆ. ಇದಕ್ಕೆ ಕೆಲವರು ಕುಲಪಂಚಾಯ್ತಿ, ಜಾತಿಪಂಚಾಯ್ತಿ, ನ್ಯಾಯಪಂಚಾಯ್ತಿ ಎಂತಲೂ ಕರೆಯುವರು. ಮಾಡಿದ ತಪ್ಪನ್ನು ತಿದ್ದಿಕೊಳ್ಳುವುದು ಮಾನವರಿಗೆ ಮಾತ್ರ ಸಾಧ್ಯ. ಇದು ಸರಿ-ಇದು ತಪ್ಪು, ಇದು ಒಳ್ಳೆಯದು-ಇದು ಕೆಟ್ಟದ್ದು, ಇದು ನ್ಯಾಯ-ಇದು ಅನ್ಯಾಯ, ಇದು ಪಾಪ-ಇದು ಪುಣ್ಯ ಹೀಗೆ ಸಮಾಜದಲ್ಲಿ ತಾನು ರೂಪಿಸಿಕೊಡ ಮೌಲ್ಯಗಳಿಗೆ ಸರಿತಪ್ಪುಗಳ ಕಲ್ಪನೆಯಡಿಯಲ್ಲಿ ನ್ಯಾಯವನ್ನು ಒದಗಿಸಲು ಒಂದು ವೇದಿಕೆಯನ್ನು ನಿರ್ಮಿಸಿಕೊಂಡ ಇಂತಹ ವೇದಿಕೆ ಸಮಾಜದಲ್ಲಿನ ಈರ್ಷೆ, ದ್ವೇಷ, ಕ್ರೋಧ ಮುಂತಾದ ಸಂಕೀರ್ಣ ಭಾವನೆಗಳನ್ನು ನಿಯಂತ್ರಣದಲ್ಲಿಡಲು ಸಹಕಾರಿಯಾಗಿದೆ. ಹಾಗಾಗಿ ಪ್ರತಿಯೊಂದು ಸಮುದಾಯವು

ಪರಂಪರೆಯಿಂದ ನಂಬಿಕೊಂಡು ಬಂದ ಜೀವನ ಮೌಲ್ಯಗಳನ್ನು ಉಳಿಸಿಕೊಳ್ಳಲು ಮತ್ತು ಸಮುದಾಯವು ಹರಿದು ಹಂಚಿಹೋಗದಂತೆ ನೋಡಿಕೊಳ್ಳಲು ಸಾಮಾಜಿಕ ನ್ಯಾಯಪದ್ಧತಿ ಅತ್ಯಾವಶ್ಯಕವಾಯಿತು.

ಭಾರತದಲ್ಲಿ ಸ್ಥಿರವಾಗಿ, ಅಲೆಮಾರಿಗಳಾಗಿ ಜೀವನ ಸಾಗಿಸುತ್ತಿರುವ ಬಹುತೇಕ ಬುಡಕಟ್ಟುಗಳಲ್ಲಿ ನ್ಯಾಯ ಪಂಚಾಯ್ತಿ ವ್ಯವಸ್ಥೆ ಕಂಡುಬರುತ್ತಿದ್ದು, ಅವು ಪ್ರದೇಶದಿಂದ ಪ್ರದೇಶಕ್ಕೆ, ಸಮುದಾಯದಿಂದ ಸಮುದಾಯಕ್ಕೆ ವ್ಯತ್ಯಾಸವನ್ನು ಹೊಂದಿರುತ್ತವೆ. ಅಷ್ಟೇ ಅಲ್ಲ, ನ್ಯಾಯವನ್ನು ನಿರ್ಣಯಿಸುವ ವಿಧಾನದಲ್ಲಿ ಮತ್ತು ಶಿಕ್ಷೆ ಕೊಡುವ ವಿಧಾನದಲ್ಲಿ ಕೆಲವೊಂದು ವ್ಯತ್ಯಾಸಗಳು ಕಂಡುಬರುತ್ತಿದ್ದರೂ ಸಹ ಪಂಚಾಯ್ತಿಯ ಮೂಲ ಉದ್ದೇಶ ಸಾಮಾಜಿಕ ನ್ಯಾಯ ಒದಗಿಸುವುದಾಗಿದೆ.

ಪ್ರತಿಯೊಂದು ಬುಡಕಟ್ಟಿನ ನ್ಯಾಯಪಂಚಾಯ್ತಿಯಲ್ಲಿ ಅನುಭವಸ್ತ ಹಿರಿಯ ನ್ಯಾಯಾಧೀಶನಾಗಿರುತ್ತಾನೆ. ಕೆಲವೊಂದು ಸಮುದಾಯಗಳಲ್ಲಿ ನ್ಯಾಯಾಧೀಶನ ಆಯ್ಕೆ ವಂಶಪಾರಂಪರೆಯಿಂದ ಕೂಡಿದ್ದರೆ ಇನ್ನೂ ಕೆಲವು ಸಮುದಾಯಗಳಲ್ಲಿ ಅರ್ಹತೆಯ ಆಧಾರದ ಮೇಲೆ ಆಯ್ಕೆ ನಡೆಯುತ್ತದೆ. 'ಕಲಿತವರಿಗಿಂತ ನುರಿತವರು ಮೇಲು' ಎಂಬಂತೆ ಅನಕ್ಷರ ಅನುಭವಸ್ಥ ಹಿರಿಯರ ನ್ಯಾಯ ನಿರ್ಣಯಗಳು ಪದವಿ ಪಡೆದ ಕಾನೂನು ತಜ್ಞರ ನ್ಯಾಯ ನಿರ್ಣಯಗಳಿಗಿಂತ ಹೆಚ್ಚು ಪ್ರಭಾವಶಾಲಿಯಾಗಿರುತ್ತವೆ. ಇದಕ್ಕೆ ಕಾರಣ ಬುಡಕಟ್ಟು ಸಮುದಾಯವು ಒಂದು ಚಿಕ್ಕ ಘಟಕವಾಗಿದ್ದು, ಈ ಘಟಕದಲ್ಲಿನ ನ್ಯಾಯಧೀಶನಿಗೆ ವಾದಿ ಪ್ರತಿವಾದಿಯ ಚಟುವಟಿಕೆಗಳ ಬಗ್ಗೆ ಸಂಪೂರ್ಣ ಅರಿವಿರುತ್ತದೆ. ಅಪರಾಧಿಗಳ ಅಪರಾಧಗಳನ್ನು ಕಣ್ಣೆದುರಿಗೆ ನೋಡುವ ಅವಕಾಶ ಅವನಿಗಿರುತ್ತದೆ. ಹಾಗಾಗಿ ಇಲ್ಲಿನ ನ್ಯಾಯಾಧೀಶ ನಿರಪರಾಧಿಗೆ ಅನ್ಯಾಯವಾಗದಂತೆ ನೋಡಿಕೊಳ್ಳುತ್ತಾನೆ. ಅಪರಾಧಿಗೆ ದಂಡರೂಪದ ಅಥವಾ ಬಹಿಷ್ಕಾರ ರೂಪದ ಶಿಕ್ಷೆಗಳನ್ನು ವಿಧಿಸುತ್ತಾರೆ. ಒಂದು ವೇಳೆ ಅಪರಾಧಿ ತನ್ನ ತಪ್ಪನ್ನು ಒಪ್ಪಿಕೊಂಡರೆ ಮತ್ತೆ ಸಮುದಾಯದಲ್ಲಿ ಉತ್ತಮ ಪ್ರಜೆಯಾಗಿ ಬದುಕಲು ಅವಕಾಶಮಾಡಿಕೊಡುತ್ತಾರೆ.

ಬುಡಕಟ್ಟು ಸಮುದಾಯಗಳ ನ್ಯಾಯಾಲಯಗಳಲ್ಲಿನ ನ್ಯಾಯವು ಆದಷ್ಟು ಮಟ್ಟಿಗೆ ವಾದ-ಪ್ರತಿವಾದಿಗಳನ್ನು ಸಂಘಟಿಸಲು ಪ್ರಯತ್ನಿಸುತ್ತಾವೆಯೇ ವಿನಃ ವಿಘಟನೆ ಮಾಡಲು ಇಷ್ಟಪಡುವುದಿಲ್ಲ. ಹಾಗಾಗಿ ಬುಡಕಟ್ಟು ಸಮುದಾಯಗಳ ನ್ಯಾಯಾಲಯಗಳಲ್ಲಿನ ನ್ಯಾಯ ಇಂದಿನ ಕೋರ್ಟುಗಳಲ್ಲಿನ ನ್ಯಾಯಕ್ಕಿಂತ ಹೆಚ್ಚುಮಹತ್ವದ್ದಾಗಿರುತ್ತದೆ. ಬುಡಕಟ್ಟುಗಳಲ್ಲಿ ಕೈಗೊಂಡ ನ್ಯಾಯ ನಿರ್ಣಯಗಳಿಗೆ ಯಾವ ಲಿಖಿತ ಧಾಖಲೆಗಳು ಸಿಗುತ್ತಿಲ್ಲ. ಪರಂಪರೆಯಿಂದ ನಂಬಿಕೊಂಡು ಬಂದ ಜೀವನ ಮೌಲ್ಯಗಳಾದ, ಮಾನವೀಯತೆ, ಸಹಕಾರ, ನಡುವಳಿ, ಸ್ವಭಾವ, ಗುಣ ಮತ್ತು ಸಂಪ್ರದಾಯ, ಆಚರಣೆ ಪದ್ಧತಿ, ರೀತಿ ರಿವಾಜುಗಳನ್ನು ಗಮನದಲ್ಲಿಟ್ಟುಕೊಂಡು ನ್ಯಾಯ ತೀರ್ಮಾನ ಮಾಡುವರು. ಪಂಚರ ಸಮ್ಮುಖದಲ್ಲಿ ನಡೆಯುವ ನ್ಯಾಯ ಅತ್ಯಂತ ಮಹತ್ವದ್ದಾಗಿರುತ್ತದೆ. ಸಮಾಜದಲ್ಲಿ ಪಂಚರಿಗೆ ವಿಶಿಷ್ಟ ಸ್ಥಾನವಿದೆ. ಪಂಚಾಯ್ತಿ ಮಾಡುವುದು ಪವಿತ್ರ ಹಾಗೂ ಪುಣ್ಯದ ಕೆಲಸವಾಗಿದೆಯೇ ವಿನಃ ಇದೊಂದು ವೃತ್ತಿಯಲ್ಲ

ಪ್ರವೃತ್ತಿ 'ಪಂಚರಿಗೆ ಪಗಾರಿಲ್ಲ ಕತ್ತಿಗೆ ಲಗಾಮಿಲ್ಲ' ಎಂಬ ಗಾದೆಯನ್ನು ಗಮನಸಿದಾಗ ಇದರಿಂದ ಪಂಚರಿಗೆ ಯಾವುದೇ ರೀತಿಯ ಲಾಭವಿಲ್ಲ ಎಂಬುದು ದೃಢಪಡುತ್ತದೆ. ಇಲ್ಲಿ ಇವರು ರೂಪಿಸಿಕೊಂಡ ನಿಯಮಗಳು ವ್ಯಕ್ತಿ ವ್ಯಕ್ತಿಗಳ ನಡುವೆ ಸೇಡು ತೀರಿಸಿಕೊಳ್ಳುವುದಕ್ಕಲ್ಲ, ಇದು ಸುವ್ಯವಸ್ಥಿತ ಸಮಾಜದ ನಡಿಗೆಗೆ ಹಾಕಿದ ಲಗಾಮು. ಈರೀತಿಯ ಲಗಾಮಿರುವುದರಿಂದಲೇ ನಮ್ಮ ಅಕ್ಕಪಕ್ಕ ವಾಸಿಸುವ ಬುಡಕಟ್ಟುಗಳ ಮೂಲ ಬೇರುಗಳು ಉಳಿದುಕೊಳ್ಳಲು ಸಾಧ್ಯವಾಗಿರುವುದು.

**ಗೋಸಂಗಿಗಳ ನ್ಯಾಯಪಂಚಾಯಿತಿ ವ್ಯವಸ್ಥೆ :** ಪ್ರತಿಯೊಂದು ಬುಡಕಟ್ಟು ಸಮುದಾಯಗಳು ನ್ಯಾಯಪಂಚಾಯ್ತಿ ವ್ಯವಸ್ಥೆಯನ್ನು ಹೊಂದಿದ್ದು, ಅದು ಸಮುದಾಯದಲ್ಲಿ ಶಾಂತಿ ಹಾಗೂ ಸುವ್ಯವಸ್ಥೆಯನ್ನು ಕಾಯ್ದುಕೊಂಡು ಹೋಗಲು ಸಹಕಾರಿಯಾಗುತ್ತದೆ. ಹೀಗೆ ಪ್ರತಿಯೊಂದು ಬುಡಕಟ್ಟುಗಳು ಪ್ರತ್ಯೇಕವಾದ ನ್ಯಾಯ ಪಂಚಾಯಿತಿಯನ್ನು ಹೊಂದಿದ್ದು ಅದಕ್ಕೆ 'ಕುಲಪಂಚಾಯಿತಿ', 'ಜಾತಿಪಂಚಾಯಿತಿ' ಎಂದೂ ಸಹ ಕರೆಯುವರು. ಇಂಥ ಕುಲ ಹಾಗೂ ಜಾತಿಪಂಚಾಯಿತಿಗಳ ಸದಸ್ಯರನ್ನು, ನಾಯದಾರ್, ಹಿರಿಯರು ದೈವದವರು, ಪಂಚರು ಎಂದು ಕರೆಯುವುದು ರೂಢಿಯಲ್ಲಿದೆ. ಗೋಸಂಗಿ ಸಮುದಾಯದಲ್ಲಿ ನ್ಯಾಯಪಂಚಾಯಿತಿ ಸದಸ್ಯರನ್ನು ಅನುಭವದ ಆಧಾರದ ಮೇಲೆ ಆಯ್ಕೆ ಮಾಡುತ್ತಾರೆಯೇ ವಿನಃ ಪರಂಪರೆಯಿಂದಲ್ಲ ಎಂಬುದು ಸ್ಪಷ್ಟ. ತಮ್ಮ ಸಮುದಾಯದ ಸಂಘಟನೆ ವಿಘಟನೆಯಾಗದಂತೆ ನೋಡಿಕೊಳ್ಳುವುದು, ತಮ್ಮಲ್ಲಿನ ಒಳ ಜಗಳಗಳನ್ನು ತಾವೇ ಬಗೆಹರಿಸಿಕೊಳ್ಳುವುದು, ನಿರಪರಾಧಿಗಳಿಗೆ ಸರಿಯಾದ ನ್ಯಾಯ ಒದಗಿಸುವುದು ಹೀಗೆ ಸಮಾಜದಲ್ಲಿನ ಒಳಿತು ಕೆಡಕುಗಳನ್ನು ಪರಿಶೀಲಿಸಿ ಸಮಯೋಚಿತ ನಿರ್ಣಯವನ್ನು ಕೈಗೊಂಡು ಸಾಮಾಜಿಕ ನ್ಯಾಯವನ್ನು ಒದಗಿಸಿಕೊಡುವುದರ ಮೂಲಕ ಸಮಾಜದಲ್ಲಿ ಐಕ್ಯತೆಯನ್ನು ಕಾಪಾಡಿಕೊಂಡು ಬರುವುದೇ ಈ ಪಂಚಾಯ್ತಿಯ ಮೂಲ ಉದ್ದೇಶವಾಗಿರುತ್ತದೆ. ಸಮಾಜದ ಸುಗಮ ಬೆಳವಣಿಗೆಯಲ್ಲಿ ಪಂಚಾಯಿತಿ ಸದಸ್ಯರ ಪಾತ್ರವು ಸಹ ಬಹುಮುಖ್ಯವಾದದ್ದು. ಇವರ ಯಾವ ನಿರ್ಣಯಗಳನ್ನು ಉಲ್ಲಂಘಿಸುವಂತಿಲ್ಲ. ಸಮುದಾಯದ ನೀತಿನಿಯಮಗಳನ್ನು, ಕಟ್ಟುಕಟ್ಟಳೆಗಳನ್ನು ಉಲ್ಲಂಘನೆ ಮಾಡಿದ್ದೇ ಆದರೆ ಅಂಥ ವ್ಯಕ್ತಿಗಳನ್ನ, ಕುಟುಂಬವನ್ನ ಜಾತಿಯಿಂದ ಬಹಿಷ್ಕರಿಸುವ (ಹೊರಹಾಕುವ) ಸಂಪೂರ್ಣ ಹಕ್ಕು ಪಂಚಾಯಿತಿಯ ಸದಸ್ಯರಿಗಿರುತ್ತದೆ. ಸಮಾಜದಲ್ಲಿ ಇವರಿಗೆ ವಿಶೇಷ ಸ್ಥಾನಮಾನವಿದೆ. ಸತ್ಯದ ಮಾರ್ಗ ಇವರದ್ದಾಗಿರುವುದರಿಂದ 'ಪಂಚರಲ್ಲಿ ಪರಮಾತ್ಮನಿದ್ದಾನೆ' ಎಂಬ ಭಾವನೆ ಜನಸಾಮಾನ್ಯರಲ್ಲಿದೆ. ಹೀಗೆ ತಮ್ಮದೇ ಆದ ನೀತಿ ನಿಯಮಗಳ ಚೌಕಟ್ಟಿನೊಳಗೆ ನ್ಯಾಯ ಪಂಚಾಯಿತಿಯನ್ನು ರೂಪಿಸಿಕೊಳ್ಳುತ್ತಾರೆ. ಎಂತಹ ಅಪರಾದಗಳಿದ್ದರೂ ತಮ್ಮ ಪಂಚಾಯಿತಿಯಲ್ಲೇ ಬಗೆಹರಿಸಿಕೊಳ್ಳುತ್ತಾರೆಯೆ ವಿನಃ ಹೊರಗಿನ ಕೋರ್ಟ್ ಕಛೇರಿಗಳಿಗೆ ಹೋಗುವುದಿಲ್ಲ. ನಾಗರಿಕತೆಯ ಪ್ರಭಾವಕ್ಕೊಳಗಾದ ಕೆಲವೊಬ್ಬರು ಇತ್ತೀಚೆಗೆ ತಮ್ಮ ಜಾತಿ ಪಂಚಾಯಿತಿಯನ್ನು ಬಿಟ್ಟು ಕೋರ್ಟ್‌ಗಳಿಗೆ ಅಲೆದಾಡಿ ಹಣ ಹಾಗೂ ದುಡಿಮೆಯ ಸಮಯವನ್ನು ಹಾಳುಮಾಡಿಕೊಂಡು ಪಶ್ಚಾತಾಪಕ್ಕೆ ಒಳಗಾದವರೂ ಇದ್ದಾರೆ. ಅಷ್ಟೇ ಅಲ್ಲ ಜಾತಿ ಪಂಚಾಯಿತಿಯನ್ನು ಮೀರಿ ಹೊರಗಿನ ಕೋರ್ಟ್‌ಗೆ ಹೋದವರು

ಸಮಾಜದಲ್ಲಿ ಇನ್ನೊಂದು ಬಗೆಯ (ಬಹಿಷ್ಕಾರ) ಶಿಕ್ಷೆಗೆ ಒಳಗಾಗುತ್ತಾರೆ. ಹಾಗಾಗಿ ಎಂತಹ ಪ್ರಸಂಗದಲ್ಲೂ ಜಾತಿ ಪಂಚಾಯಿತಿಯನ್ನು ಮೀರುವ ಸಾಹಸ ಮಾಡದೆ, ತಮ್ಮ ಸಮುದಾಯದ ಪಂಚಾಯಿತಿಯ ನೀತಿನಿಯಮ ತೀರ್ಮಾನಗಳಿಗೆ ಬದ್ಧರಾಗಿ ಪರಸ್ಪರ ಸಹಕಾರ ಮನೋಭಾವದಿಂದ ಇಂದಿಗೂ ಸಹ ಉಳಿಸಿ ಬೆಳೆಸಿಕೊಂಡು ಬಂದಿರುವುದು ಕಂಡುಬರುತ್ತದೆ.

**ನ್ಯಾಯ ನಿರ್ಣಯ :** ಅಲೆಮಾರಿಗಳಾದ ಗೋಸಂಗಿಗಳು ತಮ್ಮಲ್ಲಿನ ಒಳಜಗಳಗಳನ್ನು ಬಗೆಹರಿಸಿಕೊಳ್ಳಲು ತಮ್ಮದೇ ಆದ ನ್ಯಾಯ ಪಂಚಾಯಿತಿಯನ್ನು ರೂಪಿಸಿಕೊಂಡಿದ್ದಾರೆ. ಇದು ಸಮುದಾಯದ ಗೌರವವನ್ನು, ಐಕ್ಯತೆಯನ್ನು ಕಾಪಾಡುವಲ್ಲಿ ಮುಖ್ಯ ಪಾತ್ರವಹಿಸುತ್ತದೆ.

ಗೋಸಂಗಿಗಳು ತಮ್ಮ ಸಮುದಾಯದಲ್ಲೆ ಬೇರೆ ಬೇರೆ ಬಳಿಯ ಐದು ಜನ ಪಂಚರನ್ನ, ಅನುಭವಸ್ಥ ಹಿರಿಯರನ್ನ, ನ್ಯಾಯ ಪಂಚಾಯಿತಿಯ ಮುಖಂಡರನ್ನಾಗಿ ನೇಮಿಸಿಕೊಳ್ಳುತ್ತಾರೆ. ಹೀಗೆ ನೇಮಕಗೊಂಡ ವ್ಯಕ್ತಿಗಳಿಗೆ 'ನಾಯದಾರ್' ಎಂದು ಕರೆಯುವರು. ಯಾವುದೇ ಅಡೆತಡೆಗಳನ್ನು ಬಗೆಹರಿಸುವಾಗ ಈ ಐದು ಜನ ಪಂಚರು ಸಮುದಾಯದ ಹಿರಿಯರ ಸಹಾಯವನ್ನು ಪಡೆಯುತ್ತಾರೆ. ಅಷ್ಟೇ ಅಲ್ಲ ಪಂಚಾಯಿತಿಗೆ ನೆರೆದಂತಹ ಸಭೀಕರ ಸಲಹೆಗಳನ್ನೂ ಸಹ ಸ್ವೀಕರಿಸಿ, ಅಂತಿಮವಾಗಿ ನ್ಯಾಯ ತೀರ್ಪನ್ನು ನೀಡುವರು. ಪಂಚಾಯಿತಿಗೆ ಬೇರೆ ಬೇರೆ ಬಳಿಯ ಐದು ಜನ ವ್ಯಕ್ತಿಗಳು ದೊರೆಯದಿದ್ದ ಪಕ್ಷದಲ್ಲಿ ಕನಿಷ್ಟ ಎರಡು ಬಳಿಗಳ ಮಧ್ಯ ಮೂರನೇ 'ಬಳಿ' ವ್ಯಕ್ತಿಯಾದರೂ ಇರಲೇ ಬೇಕಾಗುತ್ತದೆ. ಉದಾಹರಣೆಗೆ ಖಾಗಳ್ ಮತ್ತು ಪಡಿಯಾರ ಎಂಬೆರಡು 'ಬಳಿ'ಗೆ ಸೇರಿದ ವ್ಯಕ್ತಿಗಳ ಮಧ್ಯ ಜ್ಹಿಂವಾ, ರಾಠೊಡ್, ಮುಣ್ಯಾಣಿ, ಇನ್ನಿತರೆ ಯಾವುದಾದರು ಬೇರೊಂದು 'ಬಳಿ'ಗೆ ಸೇರಿದ ವ್ಯಕ್ತಿ ಇರಲೇ ಬೇಕಾಗುತ್ತದೆ. ಹೀಗೆ ಯಾವುದೇ ಅಡೆತಡೆಗಳನ್ನು ಬಗೆಹರಿಸುವಾಗ ಎರಡು 'ಬಳಿ'ಗೆ ಸೇರಿದ ವ್ಯಕ್ತಿಗಳ ಮಧ್ಯೆ ಬೇರೊಂದು 'ಬಳಿ'ಗೆ ಸೇರಿದ ವ್ಯಕ್ತಿ ಇರಲೇಬೇಕು. ಇಂತಹ ವ್ಯಕ್ತಿಯನ್ನು 'ಗಂಗಾ' ಎಂದು ಕರೆಯುತ್ತಾರೆ. ಗೋಸಂಗಿ ಸಮಾಜದಲ್ಲಿ ಈತನಿಗೆ ವಿಶೇಷ ಗೌರವವಿರುತ್ತದೆ. ಈತನನ್ನು ಸಾಕ್ಷಿದಾರನೆಂದು ಪರಿಗಣಿಸುವರು.

ಇಂದು ಹೆಚ್ಚಾಗಿ ನಗರ ಪ್ರದೇಶಗಳ ಹತ್ತಿರ ವಾಸಿಸುತ್ತಿರುವ ಗೋಸಂಗಿಗಳು ತಮ್ಮ ಸಮುದಾಯದಲ್ಲಿ ಘಟಿಸಿದ ಜಗಳಗಳನ್ನು ಪರಿಹರಿಸಿಕೊಳ್ಳುವುದಕ್ಕೆ ಕೋರ್ಟು ಕಛೇರಿಗಳಿಗೆ ಹೋಗದೆ ತಮ್ಮ ಕುಲಪಂಚಾಯಿತಿಯನ್ನೇ ಆಶ್ರಯಿಸುತ್ತಾರೆ. ಒಂದು ವೇಳೆ ತಕರಾರುಗಳನ್ನು ಬಗೆಹರಿಸಿಕೊಳ್ಳಲು ಕುಲ ಪಂಚಾಯಿತಿ ನಿಯಮಗಳನ್ನು ಮೀರಿ ಕೋರ್ಟಿಗೆ ಹೋದದ್ದೇ ಆದರೆ ಅಂತಹವರನ್ನು ಜಾತಿಯಿಂದ ಬಹಿಷ್ಕರಿಸುತ್ತಾರೆ. ಹಾಗಾಗಿ ತಮ್ಮಲ್ಲಿನ ನ್ಯಾಯಪಂಚಾಯಿತಿಗೆ ವಿರುದ್ಧವಾಗಿ ಯಾರೂ ನಡೆದುಕೊಳ್ಳುವುದಿಲ್ಲ. ಕೋರ್ಟಿನ ತೀರ್ಪಿಗಿಂತ ಪಂಚರು ನೀಡುವ ತೀರ್ಪಿನಲ್ಲಿ ಹೆಚ್ಚು ನಂಬಿಕೆಯಿದೆ. ನ್ಯಾಯ ತೀರ್ಮಾನ ಮಾಡುವ ಪಂಚರು ತಮ್ಮವರೇ ಆಗಿರುವುದರಿಂದ ವಾದಿ-ಪ್ರತಿವಾದಿಗಳ ಚಲನ ವಲನಗಳನ್ನು ಚೆನ್ನಾಗಿ ಅರಿತವರಾಗಿರುತ್ತಾರೆ. ಪಂಚರು ಸಮುದಾಯದ ಒಂದು ಭಾಗವೇ ಆಗಿರುವುದರಿಂದ ಸಮುದಾಯದಲ್ಲಿನ ತಂಟೆ ತಕರಾರುಗಳನ್ನು ಅತ್ಯಂತ ಸೂಕ್ಷ್ಮವಾಗಿ ಪರಿಶೀಲಿಸಿ ತೀರ್ಪುಗಳನ್ನು ನೀಡುತ್ತಾರೆ.

ಸಾಮಾನ್ಯವಾಗಿ ಕುಲಪಂಚಾಯಿತಿಗೆ ದೇವಸ್ಥಾನದ ಹತ್ತಿರ ಅಥವಾ ಬೇವು, ಬನ್ನಿ ಅಥವಾ ಆಲದ ಮರದ ಕೆಳಗಡೆ ಸೇರುತ್ತಾರೆ. ಭಾರತೀಯರಿಗೆ ಬೇವು, ಬನ್ನಿ ಹಾಗೂ ಆಲದ ಮರಗಳು ಪವಿತ್ರ ಹಾಗೂ ಫಲವಂತಿಕೆಯ ಸಂಕೇತವಾಗಿರುವುದರಿಂದ ನ್ಯಾಯಪಂಚಾಯಿತಿ ಮಾಡಲು ಇಂತಹ ಸ್ಥಳಗಳನ್ನು ಆಯ್ಕೆಮಾಡುತ್ತಾರೆ. ನಿರಪರಾದಿಯಾದ ವ್ಯಕ್ತಿ ನ್ಯಾಯವನ್ನು ಅಪೇಕ್ಷಿಸಿ ಪಂಚರಿಗೆ ನ್ಯಾಯ ನೀಡುವ ಸ್ಥಳಕ್ಕೆ ಬರಲೇಳಿ ತಾನು ಮುಂಚಿತವಾಗಿ ಪಂಚಾಯಿತಿ ನಡೆಯುವ ಸ್ಥಳಕ್ಕೆ ಹೋಗುವನು. ಪಂಚರು ಬಂದ ನಂತರ ವಾದಿ ಪಂಚಾಯಿತಿ ವೆಚ್ಚ ೧೨ ರೂಪಾಯಿಗಳನ್ನು ಕೊಟ್ಟು ತನಗೆ ನ್ಯಾಯವನ್ನು ನೀಡಬೇಕೆಂದು ಕೇಳುವನು. ನಂತರ ಪ್ರತಿವಾದಿಯೂ ಸಹ ಪಂಚಾಯಿತಿ ವೆಚ್ಚ ೧೨ ರೂಪಾಯಿಗಳನ್ನು ಕೊಟ್ಟು, ತನಗಾದ ಅನ್ಯಾಯದ ವಿವರವನ್ನು ಪಂಚರ ಮುಂದೆ ವಿವರಿಸುವನು. ಪಂಚರು ವಾದಿಪ್ರತಿವಾದಿಗಳ ಸರಿತಪ್ಪುಗಳನ್ನು ಸರಿಯಾದ ಸಾಕ್ಷ್ಯಾಧಾರಗಳೊಂದಿಗೆ ಪರಿಶೀಲಿಸಿ ಅಂತಿಮ ತೀರ್ಮಾನಕ್ಕೆ ಬರುವರು. ವಾದಿ ಪ್ರತಿವಾದಿಗಳ ನಡುವೆ ನಡೆಯುವ ಚರ್ಚೆಯನ್ನು ಸಾರ್ವಜನಿಕರೂ ಕೇಳಬಹುದು. ಅವಶ್ಯವಿದ್ದಲ್ಲಿ ಸಮಯೋಚಿತ ಸಲಹೆಗಳನ್ನು ಕೊಡಬಹುದು. ಆದರೆ ಅಂತಿಮ ತೀರ್ಮಾನ ಮಾತ್ರ ನ್ಯಾಯದಾರಿದೇ (ಪಂಚರಲ್ಲಿ ಒಬ್ಬ) ಆಗಿರುತ್ತದೆ. ತೀರ್ಪು ಕೊಡುವುದಕ್ಕಿಂತ ಮುಂಚೆ ಪ್ರಶ್ನಿಸಲು ಅವಕಾಶ ಉಂಟು. ಆದರೆ ತೀರ್ಪುಕೊಟ್ಟ ನಂತರ ಪ್ರಶ್ನಿಸುವಂತಿಲ್ಲ. ಅಷ್ಟೆ ಅಲ್ಲ ಒಮ್ಮೆ ನ್ಯಾಯ ನಿರ್ಣಯವಾದ ಬಳಿಕ ಅದನ್ನು ಯಾವುದೇ ಕಾರಣಕ್ಕೆ ಉಲ್ಲಂಘಿಸಲು ಬರುವುದಿಲ್ಲ. ಅದಕ್ಕೆ ಬದಲಾಗಿ ಇಲ್ಲಿ ನೀಡಿದ ತೀರ್ಪು ತೃಪ್ತಿಕರವಾಗಿಲ್ಲದಿದ್ದರೆ ಮತ್ತೊಮ್ಮೆ ಪಂಚರಲ್ಲಿ ಪಿರ್ಯಾದೆ ಸಲ್ಲಿಸಿ, ನ್ಯಾಯ ದೊರಕಿಸಿಕೊಡುವಂತೆ ಕೇಳಿಕೊಳ್ಳಬಹುದು. ಆಗ 'ನ್ಯಾಯದಾರಿ'ಗಳೆಲ್ಲ ಸೇರಿ ಚರ್ಚಿಸಿ ಬೇರೆ ಪ್ರದೇಶದಲ್ಲಿ ವಾಸಿಸುವ ತಮ್ಮ ಸಮುದಾಯದವರೇ ಆದ ನ್ಯಾಯದಾರಿಗಳಲ್ಲಿ ಈ ಸಮಸ್ಯೆಯನ್ನು ಬಗೆಹರಿಸಿಕೊಂಡು ಬರಲು ವಾದಿ ಪ್ರತಿವಾದಿಗಳಿಗೆ ಶಿಪಾರಸ್ಸು ಮಾಡುವರು. ಅದೇ ರೀತಿ ವಾದಿ-ಪ್ರತಿವಾದಿಗಳಿಬ್ಬರೂ ತಮ್ಮ ಸಮಸ್ಯೆಯನ್ನು ಬಗೆಹರಿಸಿಕೊಳ್ಳಲು ಸರಿಯಾದ ಸಾಕ್ಷಾಧಾರಗಳೊಂದಿಗೆ ಮುಂದಿನ ಊರಿನ ನ್ಯಾಯ ಪಂಚಾಯಿತಿಗೆ ಹೋಗುವರು. ಅಲ್ಲಿನ ನ್ಯಾಯದಾರಿಗಳು ಹಿಂದಿನ ಪಂಚಾಯಿತಿಯಲ್ಲಿ ನೀಡಿದ ತೀರ್ಮಾನಗಳನ್ನಿಟ್ಟುಕೊಂಡೆ ವಾದಿ-ಪ್ರತಿವಾದಿಗಳ ಸಮಸ್ಯೆಗಳನ್ನು ಬಗೆಹರಿಸಲು ಪ್ರಯತ್ನಿಸುವರೇ ವಿನಃ ಹಿಂದಿನ ಪಂಚಾಯಿತಿಯಲ್ಲಿ ನೀಡಿದ ತೀರ್ಪುಗಳನ್ನು ತಿರಸ್ಕರಿಸುವಂತಿಲ್ಲ. ಹಾಗೇನಾದರೂ ತಿರಸ್ಕರಿಸಿದರೆ ಪಂಚಾಯಿತಿಗೆ ಅವಮಾನ ಮಾಡಿದಂತಾಗುತ್ತದೆ. ಹಾಗಾಗಿ ಹಿಂದೆ ನೀಡಿದ ತೀರ್ಪುಗಳನ್ನು ಪರಿಶೀಲಿಸಿ ಅದಕ್ಕೆ ಪೂರಕವಾದ ನ್ಯಾಯವನ್ನು ಒದಗಿಸುವರು. ಇವರಲ್ಲಿನ ನ್ಯಾಯಪಂಚಾಯಿತಿ ಸಮಾಜಮುಖಿಯಾಗಿ, ಸತ್ಯದ ಪರವಾಗಿ ಕೆಲಸಮಾಡುತ್ತದೆ. ಮಾಡಿದಂತಹ ತಪ್ಪುಗಳನ್ನು ಅತ್ಯಂತ ಸೂಕ್ಷ್ಮವಾಗಿ ಪರಿಶೀಲಿಸಿ, ಸೌಹಾರ್ದಯುತವಾಗಿ ಬಗೆಹರಿಸಲು ಪ್ರಯತ್ನಿಸುತ್ತಾರೆ. ತಪ್ಪಿಗೆ ಶಿಕ್ಷೆ ಕೊಡುವುದು ಮುಖ್ಯ ಉದ್ದೇಶವಲ್ಲ. ಇನ್ನು ಮುಂದಾದರೂ ತಪ್ಪುಗಳನ್ನು ಮಾಡದಿರಲಿ ಎಂಬ ಅಭಿಲಾಷೆಯಿಂದ ತೀರ್ಪುಗಳನ್ನು ನೀಡುತ್ತಾರೆ.

ಇಂದು ತಾಲ್ಲೂಕು, ಜಿಲ್ಲಾ, ರಾಜ್ಯ, ರಾಷ್ಟ್ರಮಟ್ಟದ ನ್ಯಾಯಾಲಯಗಳನ್ನು ಕಾಣುತ್ತಿದ್ದು, ತಾಲ್ಲೂಕುಮಟ್ಟದಲ್ಲಿ ಬಗೆಹರಿಯದ ಸಮಸ್ಯೆಗಳನ್ನು ಜಿಲ್ಲಾಮಟ್ಟದಲ್ಲಿ, ಜಿಲ್ಲಾಮಟ್ಟದಲ್ಲಿ ಬಗೆಹರಿಯದ

ಸಮಸ್ಯೆಗಳನ್ನು ರಾಜ್ಯಮಟ್ಟದಲ್ಲಿ, ರಾಜ್ಯಮಟ್ಟದಲ್ಲಿ ಬಗೆಹರಿಯದ ಸಮಸ್ಯೆಗಳನ್ನು ರಾಷ್ಟ್ರಮಟ್ಟದಲ್ಲಿ ಬಗೆಹರಿಸಿಕೊಳ್ಳಲು ಅವಕಾಶವಿದೆ. ಅದೇ ರೀತಿ ಗೋಸಂಗಿಗಳಲ್ಲೂ ಸಹ ಯಾವುದೇ ಒಂದು ಸಮಸ್ಯೆ ಒಂದು ಪ್ರದೇಶದಲ್ಲಿ ಬಗೆಹರಿಯದಿದ್ದರೆ ಮತ್ತೊಂದು ಪ್ರದೇಶಕ್ಕೆ ಹೋಗುವರು. ಅಲ್ಲಿಯೂ ಬಗೆಹರಿಯದಿದ್ದರೆ ಮತ್ತೊಂದು, ಹೀಗೆ ಒಟ್ಟು ಏಳುಪ್ರದೇಶಗಳಲ್ಲಿ ತಮ್ಮ ಸಮಸ್ಯೆಯನ್ನು ಇತ್ಯರ್ಥ ಮಾಡಿಕೊಳ್ಳಲು ಅವಕಾಶವಿದೆ. ಇದಕ್ಕೆ ಅವರು 'ಸಾತ್‌ತಳ್ ಪಂಚಾಯ್ತಿಕರೋ' ಎಂದು ಕರೆಯುವರು. ಅಂದರೆ ಏಳು ಸ್ಥಳಗಳಲ್ಲಿ ಪಂಚಾಯಿತಿ ಬಗೆಹರಿಸಿಕೋ ಎಂದರ್ಥ. ಏಳನೇ ಸ್ಥಾನದ ನ್ಯಾಯಪಂಚಾಯಿತಿಯೇ ಅಂತಿಮ ಹಾಗೂ ಶ್ರೇಷ್ಠವಾದದ್ದು. ಅಲ್ಲಿ ಎಂತಹ ಸಮಸ್ಯೆಗಳಿದ್ದರೂ ಬಗೆಹರಿಯಲೇಬೇಕು. ಕೊನೆ ಪಂಚಾಯ್ತಿಯಲ್ಲಿ 'ಚೌಹಾಣ್' ಬಳಿಯವನು ಮುಖಂಡನಾಗಿರುತ್ತಾನೆ. ಈತ ಹನ್ನೆರಡು ಬಳಿಗಳಿಗೆ ಒಡೆಯ ಹಾಗಾಗಿ ಈತನನ್ನು 'ಬಾರಾಪಾಟಿ ಚೌಹಾಣ್'[೧೦] ಎಂದು ಕರೆಯುವರು.

ಅಲೆಮಾರಿಗಳಾದ ಗೋಸಂಗಿಗಳು ತಮ್ಮ ತಂಟೆತಕರಾರುಗಳನ್ನು ಬೇರೆ ಬೇರೆ ಸ್ಥಳದಲ್ಲಿರುವ ಏಳು ಪಂಚಾಯಿತಿ ಕಟ್ಟೆಗಳಲ್ಲಿ ಬಗೆಹರಿಸಿಕೊಳ್ಳಲು ಅವಕಾಶವುಂಟು. ಆದರೆ ಆರ್ಥಿಕವಾಗಿ ತುಂಬಾ ದುರ್ಬಲರಾಗಿರುವ ಇವರು ಈ ಏಳು ಸ್ಥಳಗಳಲ್ಲಿನ ಪಂಚಾಯಿತಿ ಕಟ್ಟೆಗಳಿಗೆ ಹೋಗಿ ತಮ್ಮ ತಂಟೆತಕರಾರುಗಳನ್ನು ಬಗೆಹರಿಸಿಕೊಳ್ಳುವುದು ಸಾಧ್ಯವಾಗದ ಕೆಲಸ, ಹಾಗಾಗಿ ಸಾಧ್ಯವಾದಷ್ಟು ಮೊದಲ ಅಥವಾ ಎರಡನೇ ಸ್ಥಳದಲ್ಲಿನ ನ್ಯಾಯ ಪಂಚಾಯಿತಿಯಲ್ಲೇ ಬಗಹರಿಸಿಕೊಳ್ಳಲು ಪ್ರಯತ್ನಿಸುತ್ತಾರೆ. ಪ್ರತಿಪಂಚಾಯಿತಿಯ ಸ್ಥಳಗಳಿಗೆ ಹೋಗುವಾಗ ಸಾಕ್ಷಿಗಳ, ದೈವಗಳ ಹಾಗೂ ಪಂಚರ ಖರ್ಚು ವೆಚ್ಚವನ್ನೆಲ್ಲ ವಾದಿ-ಪ್ರತಿವಾದಿಗಳೇ ಭರಿಸಬೇಕು. ಅಷ್ಟೇ ಅಲ್ಲ ಪಂಚಾಯಿತಿ ನಡೆಸುವ ಸ್ಥಳದಲ್ಲಿ ತಗಲುವ ವೆಚ್ಚವನ್ನು ಸಹ ಇವರು ಭರಿಸಬೇಕು. ಹಾಗಾಗಿ ಎಷ್ಟೇ ಕ್ಲಿಷ್ಟವಾದ ಸಮಸ್ಯೆಗಳಿದ್ದರೂ ಅವುಗಳನ್ನು ಮೊದಲು ಅಥವಾ ಎರಡನೇ ಸ್ಥಳದಲ್ಲಿ ಬಗೆಹರಿಸಿಕೊಳ್ಳಲು ಪ್ರಯತ್ನಿಸುತ್ತಾರೆ. ಏಳು ಕಡೆ ಪಂಚಾಯಿತಿ ಬಗೆಹರಿಸಿಕೊಳ್ಳಬೇಕಾದರೆ ಆರ್ಥಿಕವಾಗಿ ತುಂಬಾ ಸಬಲನಾಗಿರಬೇಕಾಗುತ್ತದೆ. ಹಾಗಾಗಿ ಏಳು ಕಡೆ ಪಂಚಾಯಿತಿ ನಡೆಯುವುದು ತುಂಬಾ ಅಪರೂಪ. ಇಂತಹ ಅಪರೂಪದ ಘಟನೆಯೊಂದು ಹೊಸಪೇಟೆ ಪ್ರದೇಶದಲ್ಲಿ ನಡೆದಿರುವುದು ನನ್ನ ಕ್ಷೇತ್ರಕಾರ್ಯ ಸಂದರ್ಭದಲ್ಲಿ ಬೆಳಕಿಗೆ ಬಂದಿತು.[೧೧]

ಗೋಸಂಗಿ ಸಮುದಾಯದಲ್ಲಿ ನ್ಯಾಯಪಂಚಾಯಿತಿಗೆ ಸಂಬಂದಪಟ್ಟ ಯಾವುದೇ ದಂಡ (ನಿಗಧಿಪಡಿಸಿದ ದಂಡದ ಮೊತ್ತ ಬಿಟ್ಟು) ವಾದಿ-ಪ್ರತಿವಾದಿಯ ಆರ್ಥಿಕ ಸ್ಥಿತಿಗತಿಯನ್ನು ಅವಲಂಬಿಸಿರುತ್ತದೆ. ಆದರೆ ನ್ಯಾಯಪಂಚಾಯಿತಿ ಪ್ರಾರಂಭದಲ್ಲಿ ಮಾತ್ರ ಹನ್ನೆರಡು ರೂಪಾಯಿ ನಿಗಧಿತ ಶುಲ್ಕವನ್ನು ತೆರಲೇಬೇಕು. ನಂತರ ಬೇಕಾದರೆ ಪಂಚರು ಎಷ್ಟು ದಂಡ ಬೇಕಾದರೂ ವಿಧಿಸಬಹುದು. ವಾದಿ-ಪ್ರತಿವಾದಿಗಳಿಬ್ಬರು ಸೌಹಾರ್ದಯುತವಾಗಿ ನ್ಯಾಯವನ್ನು ಸ್ವೀಕರಿಸಿದರೆ ಕೊಡುವ ಶಿಕ್ಷೆಯು ಸಹ ಕಡಿಮೆ ಮಟ್ಟದ್ದಿರುತ್ತದೆ. ಒಂದು ವೇಳೆ ಜಿದ್ದಿಗೆ ಬಿದ್ದು ಪಂಚರು ತೀರ್ಮಾನವನ್ನು ಒಪ್ಪದೇ ಇದ್ದರೆ, ತುಂಬಾ ಕಠಿಣವಾದ ಶಿಕ್ಷೆಯನ್ನು ಅನುಭವಿಸಬೇಕಾಗುತ್ತದೆ. ಅದರಲ್ಲೂ ಆರ್ಥಿಕವಾಗಿ ತುಂಬಾ ದುರ್ಬಲನನ್ನಾಗಿ ಮಾಡಿಬಿಡುತ್ತಾರೆ.

ಆದ್ದರಿಂದ ಪಂಚರು ನೀಡಿದ ತೀರ್ಪುಗಳನ್ನು ವಾದಿ-ಪ್ರತಿವಾದಿಗಳಿಬ್ಬರು ಸರ್ವಾನುಮತದಿಂದ ಸ್ವೀಕರಿಸಿ ಮುಂದೆ ತಪ್ಪು ಮಾಡದಂತೆ ಎಚ್ಚರವಹಿಸುತ್ತಾರೆ. ಹೀಗೆ ವಾದಿ-ಪ್ರತಿವಾದಿಗಳಿಬ್ಬರು ತಪ್ಪುಒಪ್ಪುಗಳನ್ನು ಅಂಗೀಕರಿಸಿದ ನಂತರ ತಪ್ಪಿತಸ್ತನಾದವನು ಪಂಚಾಯಿತಿ ನಿರ್ಧರಿಸಿದಷ್ಟು ಹಣವನ್ನು ತುಂಬಬೇಕು. ತಪ್ಪಿತಸ್ತನಿಂದ ಬಂದ ಹಣದಲ್ಲಿ ಖರ್ಚು ವೆಚ್ಚಗಳೆನ್ನಲ್ಲ ತೆಗೆದಿರಿಸಿ ಉಳಿದ ಹಣವನ್ನು ಮಾಂಸದೂಟ ಹಾಗೂ ಮದ್ಯಸೇವನೆಗೆ ಪಂಚರು ಹಾಗೂ ದೈವಗಳು ಬಳಸುತ್ತಾರೆ.

ಇನ್ನೂ ಬುಡಕಟ್ಟು ಲಕ್ಷಣಗಳನ್ನು ಉಳಿಸಿಕೊಂಡಿರುವ ಇಂತಹ ಎಷ್ಟೋ ಸಮುದಾಯಗಳಲ್ಲಿನ ಮೌಖಿಕ ಒಪ್ಪಂದಗಳು ಆಧುನಿಕರ ಲಿಖಿತ ಒಪ್ಪಂದಗಳಿಗಿಂತ ಮೌಲ್ಯಯುತವಾಗಿರುವುದನ್ನು ನೋಡಬಹುದು. ಮದುವೆ-ಮುಂಜಿ, ನ್ಯಾಯ-ಅನ್ಯಾಯ ಕೊಡು-ಕೊಳ್ಳುವಿಕೆ ಸಂದರ್ಭಗಳಲ್ಲಿ ಮಾತಿಗೆ ಹೆಚ್ಚಿನ ಬೆಲೆಯುಂಟು. 'ಮಾತೆಂಬುದು ಜ್ಯೋತಿರ್ಲಿಂಗ' ಎಂಬ ಉಕ್ತಿಯ ಆಶಯವು ಸಹ ಮಾತಿಗಿರುವ ಶಕ್ತಿಯನ್ನು ಧ್ವನಿಸುತ್ತದೆ. ಹೀಗೆ ಬುಡಕಟ್ಟುಗಳೆನಿಸಿಕೊಂಡ ಎಷ್ಟೋ ಅನಕ್ಷರಸ್ಥ ಸಮುದಾಯಗಳಲ್ಲಿ ಇಂದೂ ಸಹ ಮಾತಿಗೆ ಹೆಚ್ಚಿನ ಮನ್ನಣೆಯಿದೆ. ಮಾತಿಗೆ ತಪ್ಪಿದವರಿಗೆ ಕೊಡುವ ಶಿಕ್ಷೆಗಳು ಕಠಿಣವಾಗಿರುವುದರಿಂದ ಮಾತಿಗೆ ತಪ್ಪುವ ಘಟನೆಗಳು ಕಡಿಮೆಯೆಂದೇ ಹೇಳಬಹುದು.

ಗೋಸಂಗಿಗಳಲ್ಲಿ ಸಾಮಾಜಿಕ ಸಂಘಟನೆ ಬಿಗಿಯಾಗಿದ್ದು ಅದನ್ನು ಉಳಿಸಿ ಬೆಳೆಸಿಕೊಂಡು ಹೋಗಲು ಒಟ್ಟು ಸಮುದಾಯ ಶ್ರಮಿಸುತ್ತದೆ. ಹೀಗಿದ್ದಾಗ್ಯೂ ಕೆಲವೊಂದು ಮಾನವ ಸಹಜ ತಪ್ಪುಗಳು ನಡೆಯುತ್ತವೆ. ಅಂತವುಗಳಿಗೆ ಅವರದೇ ಆದ ಶಿಕ್ಷಾ ವಿಧಾನಗಳೂ ಉಂಟು.



### ತಪ್ಪಿಗೆ ಸಂಬಂಧಿಸಿದ ದಂಡಗಳು

**೧. 'ಮಾತು' ತಪ್ಪಿದರೆ (ವಾತ್ ಚುತೇಲೋ) :** ಗೋಸಂಗಿಗಳಲ್ಲಿ ಮದುವೆ ನಿಶ್ಚಯವಾದ ಮೇಲೆ ಕಾರಣವಿಲ್ಲದೆ, ದೈವಗಳಿಗೆ ತಿಳಿಸದೆ ಒಪ್ಪಂದವನ್ನು ಮುರಿದಿದ್ದೇಯಾದಲ್ಲಿ ಅಥವಾ ಪರಸ್ಪರ ಇಬ್ಬರೂ ಒಬ್ಬರಿಗೊಬ್ಬರು ತಿಳಿಸದೆ ಬೇರೆ ಬೇರೆ ಕಡೆ ಮದುವೆಮಾಡಿದ್ದೇಯಾದಲ್ಲಿ ಅಂತವರಿಗೆ ಜಾತಿಪಂಚಾಯಿತಿಯ ದೈವಗಳು ಮೂರನ್ನೆರಡು (೩ x ೧೨ = ೩೬) ರಿಂದ ಹಿಡಿದು ನೂರನ್ನೆರಡು (೧೦೦ x ೧೨=೧೨೦೦) ರವರೆಗೆ ದಂಡ ವಿಧಿಸುವರು. ಅಷ್ಟೇ ಅಲ್ಲ ಪಂಚಾಯಿತಿ ಕೂಡಿದಾಗಿನಿಂದ ಮುಗಿಯುವವರೆಗೆ. ದೈವಗಳ ಹಾಗೂ ಸಾಕ್ಷಿಗಳ ಖರ್ಚು ವೆಚ್ಚಗಳನ್ನು ಮಾತಿಗೆ ತಪ್ಪಿದವರೇ (ತಪ್ಪು ಮಾಡಿದವರೇ) ಭರಿಸಬೇಕು. ಹಾಗಾಗಿ ಯಾವುದೇ ಕಾರಣಕ್ಕೂ ಒಮ್ಮೆ ಮದುವೆ ನಿಶ್ಚಯವಾಯಿತೆಂದರೆ ಅದನ್ನು ಮುರಿಯಲು ಹಿಂಜರಿಯುತ್ತಾರೆ. ಒಂದು ವೇಳೆ ನಿಶ್ಚಯ ಮಾಡಿದ ಮದುವೆಯನ್ನು ರದ್ದುಪಡಿಸುವುದಾದರೆ ಸಮುದಾಯದ ದೈವದೆದಿರು ಸರಿಯಾದ ಕಾರಣಗಳನ್ನು ನೀಡಿ. ಹನ್ನೆರಡು ರೂಪಾಯಿ ದಂಡ ಕೊಟ್ಟು ಬೇರೆ ಕಡೆ ನಿಶ್ಚಯಕಾರ್ಯ ಮಾಡಿಕೊಳ್ಳಲು ಅವಕಾಶ ನೀಡುವರು.

**ಚಲಂ (ಬಹಿಷ್ಕಾರ) :** ಮಾವನಾದವನು ಸೊಸೆಯ ಮೇಲೆ ಕೆಟ್ಟ ದೃಷ್ಟಿ ಬೀರಿದರೆ ಆತನನ್ನು ಕುಲದಿಂದ ಬಹಿಷ್ಕರಿಸುವರು, ಇದಕ್ಕೆ ಅವರು 'ಚಲಂ' ಎಂದು ಕರೆಯುವರು. ಮಾಡಿದ ತಪ್ಪನ್ನು ದೈವದೆದುರಿಗೆ ಒಪ್ಪಿಕೊಂಡರೆ ಆಗ ದೈವದವರ ತಪ್ಪು ಮಾಡಿದ ವ್ಯಕ್ತಿಗೆ ಮುನ್ನೂರ ಅರವತ್ತು ರೂಪಾಯಿ ದಂಡ ವಿಧಿಸಿ, ಮುಂದೆ ಇಂತಹ ತಪ್ಪುಗಳು ಮಾಡದಿರಲು ಎಚ್ಚರಿಸುವರು.

ವ್ಯಕ್ತಿ ಮತ್ತೆ ಮತ್ತೆ ತಪ್ಪುಮಾಡಿದರೆ ಆತನ ತಲೆ ಬೋಳಿಸಿ, ಮೈಯಲ್ಲಾ ಸುಣ್ಣ ಬಳಿದು, ಬರೀ ಲಂಗೋಟಿಯಲ್ಲಿ ಕತ್ತೆಯ ಮೇಲೆ ಕೂಡಿಸಿ ಓಡಿಸುವರು (ಕೆಲವು ಕಡೆ ಚಪ್ಪಲಿ ಹಾರವನ್ನು ಸಹ ಹಾಕುವರಂತೆ.) ಹೀಗೆ ಹೋಗುವಾಗ ಜನ ಸಗಣಿ, ಕಲ್ಲುಗಳಿಂದ ಹೊಡೆದು ಹಿಂಸಿಸುವರು ನಂತರ ಆತ ನೀರಲ್ಲಿ ಮಿಂದು ಬಂದು ಕುಲಕ್ಕೆ ಸೇರಿಕೊಳ್ಳಬಹುದು. ಆದರೆ ಮತ್ತೊಮ್ಮೆ ತಪ್ಪುಮಾಡವುದಿಲ್ಲವೆಂದು ದೈವದೆದುರಿ ಒಪ್ಪಿಕೊಳ್ಳಬೇಕು. ಇಂತಹ ವ್ಯಕ್ತಿಯನ್ನು 'ಪಾಪಿ ಯಾರೋ ಮೋರೆ' (ಪಾಪಿ ನೀನು ಹತ್ತಿರ ಕೂಡಬೇಡ) ಎಂದು ನಿಂಧಿಸುವರು. ಇಲ್ಲಿಂದ ಸಾಮಾಜಿಕ ಸ್ಥಾನಮಾನ ಕಳೆದುಕೊಳ್ಳುವನು ಬದಲಾಗಿ ಹರಿಯುವ ನೀರನ್ನು ಕುಡಿಯುವಾಗ ಕೆಳಗಡೆಯಿಂದ ನೀರನ್ನು ಕುಡಿಯಬೇಕು, ಪ್ರತ್ಯೇಕವಾದ ಗುಡಾರದಲ್ಲಿ ವಾಸಿಸಬೇಕು. ತಮ್ಮ ಸಮುದಾಯದಲ್ಲಿ ನಡೆಯುವ ಯಾವುದೇ ಶುಭಕಾರ್ಯಗಳಲ್ಲಿ ಭಾಗವಹಿಸುವಂತಿಲ್ಲ. ಈ ರೀತಿಯಾಗಿ ಶಿಕ್ಷೆ ವಿಧಿಸುವರು. ಇಷ್ಟಾದರೂ ವ್ಯಕ್ತಿ ಮತ್ತೆ ಮತ್ತೆ ತಪ್ಪು ಮಾಡಿದರೆ. ತಪ್ಪಿಗೆ ಕಾರಣವಾದ ಅಂಗವನ್ನು ಕತ್ತರಿಸುತ್ತಾರಂತೆ ಹಾಗಾಗಿ ಒಮ್ಮೆ ತಪ್ಪು ಮಾಡಿದ ವ್ಯಕ್ತಿ ಮತ್ತೆ ತಪ್ಪು ಮಾಡಲು ಹಿಂಜರಿಯುತ್ತಾನೆ. ಇವರಲ್ಲಿ ಸಾಮಾಜಿಕ ಸಂಘಟನೆ ತುಂಬಾ ಬಿಗಿಯಾಗಿರುವುದರಿಂದ ಇಂದೂ ಸಹ ಇಂತಹ ತಪ್ಪುಗಳನ್ನು ಮಾಡುವುದು ಕಡಿಮೆಯೆಂದೇ ಹೇಳಬಹುದು.

**ವಿಚ್ಛೇದಿತ ಗಂಡ ಹೆಂಡಿರು ಹೊಂದಾಗಲು**

೧. ಹೆಂಡತಿಯನ್ನು ಬಿಟ್ಟ ವ್ಯಕ್ತಿ ಮತ್ತೆ ಆಕೆಯ ಜೊತೆ ಸಂಸಾರ ಮಾಡಲು ಇಷ್ಟ ಪಟ್ಟರೆ, ದೈವಗಳೆಲ್ಲ ಸೇರಿ ಆತನಿಗೆ ಮೂರನ್ನೆರಡು (೩ x ೧೨ = ೩೬) ಅಂದರೆ ಮೂವತ್ತಾರು ರೂಪಾಯಿ ದಂಡ ವಿಧಿಸಿ ಒಂದು ಗೂಡಿಸುವರು. ಇಲ್ಲಿ ಹೆಂಡತಿಯ ಒಪ್ಪಿಗೆಗಿಂತ ಗಂಡನ ಒಪ್ಪಿಗೆಯೇ ಬಹಳ ಮುಖ್ಯ. ಒಂದು ವೇಳೆ ಹುಡುಗಿಯ ತಂದೆತಾಯಿ ಮಗಳನ್ನು ಕಳಿಸಲು ಒಪ್ಪದೇ ಇದ್ದರೆ ದೈವಗಳು ಅವರಿಗೂ ದಂಡ ವಿಧಿಸುವರು. ಇಂತಹ ನಿರ್ಣಯಗಳಲ್ಲಿ ದೈವಗಳಿಗೆ ಹೆಚ್ಚು ಬೆಲೆ, ದೈವದ ಮಾತನ್ನು ಯಾರೂ ಮೀರುವಂತಿಲ್ಲ.

೨. ವಿಧುವೆಯ ಜೊತೆ ಪುರುಷ ಲೈಂಗಿಕ ಸಂಪರ್ಕ ಹೊಂದಿರುವುದು ತಿಳಿದು ಬಂದರೆ ಅಂತವರಿಗೆ ಹನ್ನೆರಡು ರೂಪಾಯಿ ದಂಡ ವಿಧಿಸುವರು.

೩. ಗಂಡುಳ್ಳ ಹೆಂಡತಿ (ಮಾತರಿ ಜೋಗಣ) ಜೊತೆ ಪರಪುರುಷ ಲೈಂಗಿಕ ಸಂಪರ್ಕವನ್ನೇನಾದರು ಹೊಂದಿದ್ದರೆ ಅದನ್ನು 'ಮಸ್ತಿ' ಎಂದು ಕರೆಯುವರು. ಆತನಿಗೆ ಮೂರನ್ನೆರಡು (೩ x ೧೨ = ೩೬) ರೂಪಾಯಿ ದಂಡ ವಿಧಿಸುವರು.

೫. ವ್ಯವಹಾರದಲ್ಲಾಗಲಿ, ಹೆಣ್ಣಿನ ವಿಷಯದಲ್ಲಾಗಲಿ, ಮೋಸ ಮಾಡಿದರೆ ಅದಕ್ಕೆ 'ಕಸಬೀರಾ' ಎನ್ನುವರು. ಹಾಗೂ ಮೋಸ ಮಾಡಿದ ವ್ಯಕ್ತಿಗೆ ತೀನ್ ಬಾರಾ ಮೂರನ್ನೆರಡು (೩ x ೧೨=೩೬) ದಂಡ ವಿಧಿಸುವರು.

೬. ಅಣ್ಣನ ಹೆಂಡತಿಯ ಜೊತೆ ತಮ್ಮ ಅಥವಾ ತಮ್ಮನ ಹೆಂಡತಿಯ ಜೊತೆ ಅಣ್ಣನೇನಾದರೂ ಲೈಂಗಿಕ ಸಂಪರ್ಕ ಹೊಂದಿದ್ದೆಯಾದರೆ ಅಂತಹ ವ್ಯಕ್ತಿಯಿಂದ ಮದುವೆಗೆ ತಗುಲಿದ ಖರ್ಚನ್ನು ವಸೂಲಿಮಾಡಿ, ತಲೆಯನ್ನು ಬೋಳಿಸಿ ಸಾರ್ವಜನಿಕರ ಎದುರು ನಿಲ್ಲಿಸಿ ಸಗಣಿಯಿಂದ ಹೊಡಿಸಿ ಉಚ್ಚೆಯನ್ನು (ಇತ್ತೀಚಿಗೆ ಉಚ್ಚಗೆ ಬದಲಾಗಿ ನೀರನ್ನು ಕುಡಿಸುವರು) ಕುಡಿಸಿ ಜಾತಿಯಿಂದ ಹೊರಹಾಕುವರು.

**ಬೈಗುಳಿಗೆ ಸಂಬಂಧಿಸಿದ ದಂಡ**

೧. 'ನಿನ್ನೆಂಡತೀನಡಾ' ಎಂದರೆ ಒಂದು ರೂಪಾಯಿ ನಾಲ್ಕಾಣೆ ದಂಡ ವಿಧಿಸುವರು.

೨. ಮಗ ತಂದೆಗೆ 'ನಿನ್ನೆಂಡತೀನಡಾ' (ಥರಿಬಾಯಿ ತೋಲಿ ಗಾಂಡ್ ಮಾರು) ಎಂದರೆ ಒಂದು ರೂಪಾಯಿ ನಾಲ್ಕಾಣೆ ದಂಡ

೩. 'ಥರಮೋಡಾಮ್‌ದಿ' (ನಿನ್ನ ಬಾಯಾಗಿಡ್ತೀನಿ) ಎಂದು ಬೈದರೆ ಒಂದು ರೂಪಾಯಿ ನಾಲ್ಕಾಣೆ ದಂಡ.

೪. ಸುಲಿರೋಪೇಟೊ (ಸೂಳಿಮಗನೆ) ಎಂದು ಬೈದರೆ ಒಂದು ರೂಪಾಯಿ ನಾಲ್ಕಾಣೆ

೫. ಥರಿ ಜಂತೀರ ಚೋರ್ದು, ಥರಿ ಕಂದಾನ್ತಾರಾ ಚೋದು (ನಿನ್ನ ಜಾತಿನೇ ಹಡತೀನಿ) (ನಿನ್ನ ವಂಶಾನೇ ಹಡತೀನಿ) ಎಂದು ಬೈದರೆ ಒಂದು ರೂಪಾಯಿ ನಾಲ್ಕಾಣೆ

೬. ಥರಿ ಸತ್ತಾಸ್‌ಪಡಿರೇ ಚೋದು (ನಿನ್ನ ಜನನೆಲ್ಲಾ ಹಡತೀನಿ) ಎಂದು ಬೈದರೆ ಒಂದು ರೂಪಾಯಿ ನಾಲ್ಕಾಣೆ.

೭. ನಿಮ್ಮಾಟರಾ ಪೇಟು (ಕಳ್ಳನಿಗೆ ಹುಟ್ಟಿದವನು) ಎಂದು ಬೈದರೆ ಒಂದು ರೂಪಾಯಿ ನಾಲ್ಕಾಣೆ.

೮. ಮಾರಿ ಮರೀರಿ ಸೌತೀ. (ನನ್ನ ಗಂಡನ ಸವತಿ) ಎಂದು ಬೈದರೆ ಒಂದು ರೂಪಾಯಿ ನಾಲ್ಕಾಣೆ.

೯. ಥರಿ ಜೋಗುಮ ರಂಡೆ ಹೋಯಿಜಾಯಿ (ನಿನ್ನ ಹೆಂಡತಿ ರಂಡೆಯಾಗ್ಲಿ) ಎಂದು ಬೈದರೆ ಒಂದು ರೂಪಾಯಿ ನಾಲ್ಕಾಣೆ.

೧೦. ಥರ ಮೇಡಾಮ ಪೋಡು ಪಾಡೆ ಸೊನ್ನಾರಿಮರಿ (ನಿನ್ನ ಬಾಯಾಗ ಹುಣ್ಣು ಬೀಳಿಸ್ಲಿ ಮಾರಿಕಾಂಬ) ಎಂದು ಬೈದರೆ ಒಂದು ರೂಪಾಯಿ ನಾಲ್ಕಾಣೆ.

## ೪. ವಸತಿ ವ್ಯವಸ್ಥೆ

ಮನುಷ್ಯ ಬದುಕಲಿಕ್ಕೆ ಮೂಲಭೂತ ಅವಶ್ಯಕತೆಗಳಾದ ಅನ್ನ, ನೀರು, ವಸತಿ ಸೌಕರ್ಯ ಈ ಮೂರರಿಂದಲೂ ವಂಚಿತರಾದ ಗೋಸಂಗಿಗಳು ಇಂದೂ ಸಹ ಅಲೆಮಾರಿಗಳಾಗಿ ಜೀವನ ಸಾಗಿಸುತ್ತಿದ್ದಾರೆ. ಆದಿಯಲ್ಲಿ ಮಾನವ ಕಾಡುಮೇಡುಗಳಲ್ಲಿ ಅಲೆಯುತ್ತಾ ಅಲ್ಲಿ ಸಿಗುವ ಆಹಾರ ಉತ್ಪನ್ನಗಳನ್ನು ಬಳಸಿ ಪೊದೆ ಪೊಟರೆಗಳಲ್ಲಿ ಆಶ್ರಯವನ್ನು ಪಡೆದು ಕಾಲಾಂತರದಲ್ಲಿ ಹೊಸ ಹೊಸ ಅವಿಷ್ಕಾರಗಳನ್ನು ಪಡೆದು ಅನ್ನ, ನೀರು, ವಸತಿಗೆ ಬೇರೊಂದು ರೀತಿಯ ವ್ಯವಸ್ಥೆಯನ್ನು ರೂಪಿಸಿಕೊಂಡು ಕಾಡಿಗನಾಗಿದ್ದ ಮಾನವ

ನಾಡಿಗನ ಹಂತವನ್ನು ತಲುಪುತ್ತಿದ್ದಾನೆ. ಹೀಗೆ ಮಾನವನ ಚರಿತ್ರೆಯನ್ನು ಅವಲೋಕಿಸಿದಾಗ ಹಿಂದಿನಿಂದ ಇಂದಿನವರೆಗೂ ವಿವಿಧ ಹಂತಗಳನ್ನು ತಲುಪಿರುವುದು ಕಂಡುಬರುತ್ತದೆ. ಇಷ್ಟಾದರೂ ನಾಡಿನ ಸಂಪರ್ಕವಿದ್ದು ಇಲ್ಲದಂತೆ ಅಥವಾ ನಾಡಿನೊಂದಿಗೆ ಸಂಪರ್ಕ ಬೆಳೆಸಲು ಇಚ್ಛಿಸದೆ ಇರುವ ಎಷ್ಟೋ ಸಮುದಾಯಗಳು ನಮ್ಮ ಕಣ್ಣ ಮುಂದಿವೆ. ಅಂತವುಗಳಲ್ಲಿ ಗೋಸಂಗಿ ಸಮುದಾಯವು ಒಂದು. ಅಲೆಮಾರಿಗಳಾದ ಇವರು ಜೀವನ ನಿರ್ವಹಣೆಗಾಗಿ ಸಣ್ಣಪುಟ್ಟ ಕಸುಬು, ವ್ಯಾಪಾರಗಳನ್ನು ಮಾಡುತ್ತಾ ನಗರ ಸಂಪರ್ಕವನ್ನು ಹೊಂದಿದ್ದರೂ ಸಹ ಕನಿಷ್ಠ ನಾಗರಿಕ ಸೌಲಭ್ಯಗಳಿಲ್ಲದೆ ಇನ್ನು ಡೇರಾವಾಸಿಗಳಾಗಿರುವುದು ದುರ್ದೈವದ ಸಂಗತಿ. ಯಾವುದೇ ಸ್ಥಿರಾಸ್ತಿ ಹೊಂದಿರದ ಇವರು ಇಂದು 'ವಸತಿ' ಸೌಲಭ್ಯವಿಲ್ಲದೆ ಅತಂತ್ರ ಸ್ಥಿತಿಯಲ್ಲಿದ್ದಾರೆ.

ಅಲೆಮಾರಿ ಗೋಸಂಗಿಗಳು ಊರು ಬಿಟ್ಟು ಸ್ವಲ್ಪ ದೂರದಲ್ಲಿ ತಮ್ಮ ವಸತಿಯನ್ನು ಹೂಡುತ್ತಾರೆ. ಯಾವುದೇ ಸ್ಥಿರಾಸ್ಥಿ ಇಲ್ಲದ ಇವರು ಊರಿಂದ ಊರಿಗೆ ಅಲೆಯುವುದರಿಂದ ತಮ್ಮ ತಾತ್ಕಾಲಿಕ ವಸತಿಗೆ ಅನುಕೂಳವಾಗುವಂತೆ ಡೇರಾಗಳನ್ನು ನಿರ್ಮಿಸಿಕೊಳ್ಳುವರು. ಹಿಂದೆ ಹಳೆಬಟ್ಟೆಗಳನ್ನು ಸಂಗ್ರಹಿಸಿ ತಾವೇ ಕೌದಿಯನ್ನು ಹೊಲಿದು ಡೇರಾದ ಹೊದಿಕೆಗೆ ಬಳಸುತ್ತಿದ್ದರು. ಇವರಿಗೆ ಇದನ್ನು ಹೊತ್ತೊಯ್ಯಲು ಹೆಚ್ಚು ಅನುಕೂಲವಾಗಿರುತ್ತದೆ.

ಗೋಸಂಗಿಗಳು ಯಾವುದೇ ಪ್ರದೇಶದಲ್ಲಿ ಡೇರಾಗಳನ್ನು ಹಾಕುವಾಗ ಹೆಚ್ಚು ಸುರಕ್ಷಿತ ಹಾಗೂ ನೀರಿನ ಅನುಕೂಲವಿರುವ ಪ್ರದೇಶವನ್ನೇ ಆಯ್ಕೆಮಾಡಿಕೊಳ್ಳುತ್ತಾರೆ. ಹೀಗೆ ಆಯ್ಕೆ ಮಾಡಿಕೊಂಡ ಸ್ಥಳದಲ್ಲಿ ಕಾಲುಗಳನ್ನು ಅನುಸರಿಸಿ ಡೇರಾಗಳನ್ನು ನಿರ್ಮಿಸಿಕೊಳ್ಳುತ್ತಾರೆ. ಡೇರಾಗಳನ್ನು ನಿರ್ಮಿಸುವಾಗ ಅದರ ಉದ್ದ ಅಗಲಗಳ ಬಗ್ಗೆ ಅವರಿಗೆ ಕೆಲವೊಂದು ನಂಬಿಕೆಗಳಿವೆ. ಎಂಟು ಮಳ ಉದ್ದದ ಡೇರಾ ನಿರ್ಮಿಸಿದರೆ ಒಳ್ಳೆಯದಲ್ಲ ಎಂಬ ನಂಬಿಕೆ ಅವರಲ್ಲಿದೆ. ಹಾಗಾಗಿ ಹನ್ನೆರಡು, ಹದಿನೈದು, ಹದಿನಾರು ಮಳ ಉದ್ದದ ಡೇರಾಗಳನ್ನೇ ನಿರ್ಮಿಸುತ್ತಾರೆ. ಅಗಲ ಸಾಮಾನ್ಯವಾಗಿ ಆರರಿಂದ ಒಂಬತ್ತು ಮಳ ಇರುತ್ತದೆ. ಡೇರಾ ನಿರ್ಮಾಣಕ್ಕೆ ಬೇಕಾದ ಮುಖ್ಯ ಪರಿಕರಗಳೆಂದರೆ ಮೂರು ಬಿದಿರುಗಳ, ಒಂದು ಕೌದಿ ಹಾಗೂ ಹಗ್ಗದ ಉಂಡುಗಳು. ಡೇರಾವನ್ನು ನಿರ್ಮಿಸುವಾಗ ಅದಕ್ಕೆ ಆಸರೆಯಾಗಿ ಮುಂದೆ ಒಂದು ಹಿಂದೆ ಒಂದು ಬಿದಿರುಗಳನ್ನು ಹೂತು ಎರಡು ಬಿದಿರುಗಳ ಮೇಲೆ ಅಡ್ಡಲಾಗಿ ಮತ್ತೊಂದು ಬಿದಿರುಗಳನ್ನಿಟ್ಟು ಕಟ್ಟುವರು. ನಂತರ ಒಂದೊಂದು ಪಕ್ಕೆಗೆ ಮೂರರಂತೆ ಎರಡೂ ಪಕ್ಕೆಗಳಿಗೆ ಆರು ಗೂಟಗಳನ್ನು ಬಡಿಯುವರು. ನಂತರ ಅಡ್ಡಲಾಗಿರುವ ಬಿದಿರು ಗಳದ ಮೇಲೆ ಕೌದಿ ಅಥವಾ ತುಂಡು ತಾಡಪಾಲಿನಿಂದ ಹೊದಿಸುವರು. ಹೀಗೆ ನಿರ್ಮಿಸಿದ ಡೇರಾದಲ್ಲಿ ತಮ್ಮ ದಿನಬಳಕೆಯ ವಸ್ತುಗಳನ್ನು ಶಿಸ್ತಾಗಿ ಒಂದು ಕಡೆ ಪೇರಿಸಿಟ್ಟು, ಮಲಗಲು ಸ್ಥಳಾವಕಾಶ ಮಾಡಿಕೊಳ್ಳುವರು. ಸಾಮಾನ್ಯವಾಗಿ ಡೇರಾಗಳನ್ನು ಪೂರ್ವಕ್ಕೆ ಮುಖಮಾಡಿ ನಿರ್ಮಿಸುತ್ತಾರೆ.

ಗುಂಪುಗಳು ಬಹಳವಿದ್ದರೆ ಒಬ್ಬರ ಹಿಂದೆ ಒಬ್ಬರು ಡೇರಾಗಳನ್ನು ನಿರ್ಮಿಸಿಕೊಳ್ಳುತ್ತಾರೆ. ಎಲ್ಲಾ ಡೇರಾಗಳ ಮುಖ ಪೂರ್ವಕ್ಕೆ ಇರುತ್ತವೆ. ಹೀಗೆ ನಿರ್ಮಿಸಿಕೊಂಡನಂತರ ಎರಡೂ ಕಡೆಯವರ ತಲೆಗಳು ಒಂದೇ ಕಡೆ ಬರುವಂತೆ ಮಾಡಿಕೊಂಡು ಮಲಗುವರು. ಒಂದು ವೇಳೆ ಯಾರಾದರೂ ಒಬ್ಬವ್ಯಕ್ತಿ ಇನ್ನೊಬ್ಬ ವ್ಯಕ್ತಿಯ ತಲೆ ಕಡೆ ಕಾಲು ಮಾಡಿ ಮಲಗಿದರೆ ಅಂತಹ ವ್ಯಕ್ತಿಗೆ ದಂಡವಿಧಿಸುವರು. ಕಾರಣ ಕಾಲ್ ಕೆಳಗೆ ಮಲಗಿದ ವ್ಯಕ್ತಿ ಆತನಿಗಿಂತ ಕೀಳೆಂಬ ಭಾವನೆ ಇವರಲ್ಲಿದೆ ಹಾಗಾಗಿ ಒಬ್ಬರ ಕಾಲ್ ಕೆಳಗೆ ಇನ್ನೊಬ್ಬರು ಮಲಗುವಂತಿಲ್ಲ. ಇವರ ಅಲೆಮಾರಿತನದ ಸಾಮಾನು ಸಂಜಾಮುಗಳನ್ನು ಹೊತ್ತೊಯ್ಯುವ ಕುದುರೆ, ಕತ್ತೆ, ಹಸುಗಳನ್ನು ಸಹ ಒಂದು ಪ್ರತ್ಯೇಕವಾದ ಸ್ಥಳದಲ್ಲಿ ಕಟ್ಟಲು ವ್ಯವಸ್ಥೆ ಮಾಡಿರುತ್ತಾರೆ. ಅವುಗಳನ್ನು ಸಹ ಕಾಲ್ ಕೆಳಗಡೆಗೆ ಬರುವಂತೆ ಕಟ್ಟುವುದಿಲ್ಲ. ಗೋಸಂಗಿಗಳಲ್ಲಿ ಕುದುರೆ, ಆಕಳುಗಳಿಗೆ ಪೂಜ್ಯನೀಯ ಸ್ಥಾನವಿರುವುದೇ ಇದಕ್ಕೆ ಕಾರಣವಾಗಿದೆ. ಹಾಗೆಯೇ ಅವರು ಬೀಡುಬಿಟ್ಟ ಪ್ರದೇಶದ ಸ್ವಲ್ಪ ಮೇಲ್ಭಾಗಕ್ಕೆ ಪ್ರತ್ಯೇಕವಾದ ಸ್ಥಳದಲ್ಲಿ ಒಂದು ಡೇರಾವನ್ನು ನಿರ್ಮಿಸಿ ವಿವಿಧ ದೇವರುಗಳನ್ನು ಸಾಂಕೇತಿಸುವ ಬಣ್ಣದ ಬಟ್ಟೆಗಳನ್ನು ಕಟ್ಟಿದ ಬಿದಿರುಗಳನ್ನು ಸ್ಥಾಪಿಸಿ ಪೂಜೆಮಾಡುವರು. ದೇವರ ಬಾವುಟಗಳ ನೆರಳನ್ನು ಸಹ ತುಳಿಯಬಾರದೆಂಬ ನಂಬಿಕೆ ಇರುವುದರಿಂದ ಪ್ರತ್ಯೇಕವಾದ ಸ್ಥಳದಲ್ಲಿ ಪೂಜೆಗೆ ವ್ಯವಸ್ಥೆ ಮಾಡಿರುತ್ತಾರೆ.

ಒಂದೂರಿನಿಂದ ಇನ್ನೊಂದೂರಿಗೆ ಪ್ರಯಾಣ ಬೆಳೆಸುವಾಗ ಮೊದಲು ದೇವರ ಬಾವುಟಗಳನ್ನು ಕಿತ್ತು ಒಂದೆಡೆ ಸೇರಿಸಿ, ನಂತರ ಡೇರಾಗಳನ್ನು ಕೀಳುವರು. ದೇವರ ಭಾವುಟಗಳನ್ನು ಕುದುರೆಗಳ ಮೇಲಿಟ್ಟು ಕುದುರೆಯ ಲಗಾಮನ್ನು ಹಿಡಿದು ಮುಂದೆ ಮುಂದೆ ಹೊರಟರೆ ಹಿಂದುಗಡೆಯಿಂದ ಉಳಿದ ಡೇರಾ ಹಾಗೂ ಜನರು ಹೋಗುವರು. ಯಾವುದೇ ಕಾರಣಕ್ಕೆ ದೇವರ ಬಾವುಟಗಳನ್ನು ಹೊತ್ತ ಕುದುರೆಯನ್ನು ಹಿಂದಕ್ಕೆ ಬಿಡುವುದಿಲ್ಲ. ಹೀಗೆ ಹೊರಟು ಮುಂದಿನ ಊರಿಗೆ ಹೋಗಿ ಬಿಡಾರ ಹೂಡುವಾಗಲೂ ಸಹ ಮೊದಲು ದೇವರುಗಳಿಗೆ ಡೇರಾ ಹೊಡೆದು ನಂತರ ತಮ್ಮ ವಾಸದ ಡೇರಾಗಳನ್ನು ನಿರ್ಮಿಸಿಕೊಳ್ಳುವುದು ಗೋಸಂಗಿಗಳಲ್ಲಿ ರೂಢಿಯಲ್ಲಿದೆ.

ಕೆಲವೊಮ್ಮೆ ತಮ್ಮ ಸಮುದಾಯದಲ್ಲಿ ಯಾರಾದರೂ ವ್ಯಕ್ತಿ ಸತ್ತರೆ, ಆತನ ತಿಥಿಕಾರ್ಯಗಳನ್ನು ಅಲ್ಲೇ ಮುಗಿಸಿಕೊಂಡು ಮುಂದಿನ ಊರಿಗೆ ಹೊರಡುವರು. ಹೀಗೆ ಹೊರಡುವಾಗ ಸತ್ತ ವ್ಯಕ್ತಿಯ ಮನೆಯವರು ಮೊದಲು ಡೇರಾವನ್ನು ಕೀಳಬೇಕು. ಹಾಗೂ ಮುಂದಿನ ಊರಿನಲ್ಲಿ ಅವರೇ ಮೊದಲು ಡೇರಾವನ್ನು ನಿರ್ಮಿಸಬೇಕೆಂಬ ನಿಯಮ ಗೋಸಂಗಿಗಳಲ್ಲಿದ್ದು ಇಂದೂ ಸಹ ಅದನ್ನು ಪಾಲಿಸಿಕೊಂಡು ಬರುತ್ತಿದ್ದಾರೆ. ಹೀಗೆ ಗೋಸಂಗಿಗಳು ಡೇರಾಗಳನ್ನು ನಿರ್ಮಿಸುವಾಗ ಮತ್ತು ಡೇರಾಗಳನ್ನು ಕೀಳುವಾಗ ಕೆಲವೊಂದು ನಿಯಮಗಳನ್ನು ಅನುಸರಿಸುತ್ತಿರುವ ಕಂಡುಬರುತ್ತಿದೆ.

ಇತ್ತೀಚಿಗೆ ಬದಲಾಗುತ್ತಿರುವ ನಿಯಮಗಳಿಗೆ ಹೊಂದಿಕೊಂಡು ಬದುಕಲು ಪ್ರಯತ್ನಿಸುತ್ತಿರುವ ಗೋಸಂಗಿಗಳು ಅಲೆಮಾರಿ ಜೀವನವನ್ನು ನಿಲ್ಲಿಸಿ ಒಂದೆಡೆ ನೆಲೆಯೂರಲು ಪ್ರಯತ್ನಿಸುತ್ತಿದ್ದಾರೆ.

ಆರ್ಥಿಕವಾಗಿ ಸಬಲರಿರುವ ಗೋಸಂಗಿಗಳು ಮಾತ್ರ ಒಂದು ಪ್ರದೇಶದಲ್ಲಿ ನೆಲೆಯನ್ನು ಕಂಡುಕೊಂಡಿದ್ದರೆ ಮತ್ತೆ ಕೆಲವರು ಒಂದು ಪ್ರದೇಶದಲ್ಲಿ ತಾತ್ಕಾಲ ಬಿಡಾರ ಹೂಡಿ ಅಲೆಮಾರಿ ಜೀವನವನ್ನು ಮುಂದುವರಿಸುತ್ತಿರುವ ಕಂಡುಬರುತ್ತಿದೆ. ಹೀಗೆ ಅಲೆಮಾರಿಗಳಾಗಿ ದುಡಿದುಣ್ಣುವ ಗೋಸಂಗಿಗಳು ಹಬ್ಬ-ಹರಿದಿನಗಳಿಗೆ ಮತ್ತೆ ಒಂದು ಪ್ರದೇಶದಲ್ಲಿ ಸೇರಿಕೊಳ್ಳುವರು. ಹೀಗೆ ಒಂದು ಪ್ರದೇಶದಲ್ಲಿ ತಮ್ಮ ಕುಟುಂಬವನ್ನು ತತ್ಕಾಲ ಉಳಿಸಿ, ಬೇರೊಂದು ಪ್ರದೇಶಕ್ಕೆ ವ್ಯಾಪಾರಕ್ಕೆ ಹೊರಟು ಮತ್ತೆ ಸೇರುವುದಕ್ಕೆ ಅರೆ ಅಲೆಮಾರಿಗಳೆಂದು ಕರೆಯಬಹುದಾಗಿದೆ. ಇತ್ತೀಚೆಗೆ ಕೆಲವು ಸ್ಥಿತಿವಂತರು ಸ್ವಂತ ಮನೆಗಳನ್ನು ಕಟ್ಟಿಕೊಂಡರೆ ಇನ್ನು ಕೆಲವರು ಸರ್ಕಾರದ ಸಹಾಯದಿಂದ ಆಶ್ರಯ ಮನೆಗಳನ್ನು ಪಡೆದುಕೊಂಡಿದ್ದಾರೆ. ಆದರೂ ಸಹ ಬಹುಪಾಲು ಗೋಸಂಗಿ ಕುಟುಂಬಗಳು ಇನ್ನು ಡೇರಾ ವಾಸಿಗಳಾಗಿದ್ದು ತುಂಬಾ ಕಷ್ಟದ ಜೀವನ ನಡೆಸುತ್ತಿದ್ದಾರೆ.

## ೫. ಆಹಾರ ಪದ್ಧತಿ

ಅಲೆಮಾರಿಗಳಾದ ಗೋಸಂಗಿಗಳು ಮಾಂಸ ಮತ್ತು ಸಸ್ಯಹಾರಗಳೆರಡನ್ನು ಬಳಸುತ್ತಾರೆ. ಉತ್ತಮ ಬೇಟೆಗಾರರಾದ ಇವರು, ಮಾಂಸಹಾರವನ್ನೇ ಹೆಚ್ಚಾಗಿ ಬಳಸುತ್ತಾರೆ. ದಿನನಿತ್ಯದ ಆಹಾರದಲ್ಲಿ ಶೇಕಡ ಎಪ್ಪತ್ತರಷ್ಟು ಭಾಗ ಮಾಂಸವನ್ನೇ ಬಳಸುತ್ತಾರೆ. ಅದರಲ್ಲೂ ಬೇಟೆ ಮಾಂಸ ಇವರಿಗೆ ಹೆಚ್ಚು ಪ್ರಿಯವಾದದು. ಇಂದೂ ಸಹ ಅಡವಿ ಜೀವದಾನಗಳನ್ನೇ ಹೆಚ್ಚಾಗಿ ಸೇವಿಸುವ ಗೋಸಂಗಿಗಳು ದಷ್ಟಪುಷ್ಟರಾಗಿದ್ದು ಹೆಚ್ಚು ಆರೋಗ್ಯವಂತರಾಗಿದ್ದಾರೆ. ಯಾವ ಪ್ರಾಣಿಯ ಮಾಂಸ ತಿಂದರೆ ಯಾವ ರೋಗ ನಿವಾರಣೆಯಾಗುತ್ತದೆ ಎಂಬ ವೈದ್ಯಜ್ಞಾನ ಗೋಸಂಗಿಗಳಿಗಿದೆ. ಹಾಗಾಗಿ 'ಗೇಂದರ್ ತೋ ಬಾರಾಸೌ ರೋಗನೆ ಮಾರೆ' (ನರಿಮಾಂಸ ಹನ್ನೆರಡು ನೂರು ರೋಗಗಳನ್ನು ಗುಣಪಡಿಸುತ್ತದೆ) ಎಂಬ ಗಾದೆ ರೂಢಿಯಲ್ಲಿರುವುದನ್ನು ನೋಡಬಹುದು. ಅಷ್ಟೆ ಅಲ್ಲ 'ಕುಕಡಾತ್ತೀನ್, ಬಕರಾತ್ತೀನ್ ತಾಕತ್‌ರೀಬೋಟಿ ಕಿದೋತೋ ಸಿಕಾರಿ ಬೋಟೀಚ್' (ಕೋಳಿಮಾಂಸಕ್ಕಿಂತ, ಕುರಿಮಾಂಸಕ್ಕಿಂತ, ಶಕ್ತಿಯುತವಾದ ಮಾಂಸವೆಂದರೆ ಬೇಟೆಮಾಂಸ) ಎಂಬ ಗಾದೆಯು ಸಹ ಅವರ ಅನುಭವದಿಂದ ಬಂದ ಮಾತಾಗಿದೆ. ಯಾವುದೇ ರೀತಿಯ ಸ್ಥಿರಾಸ್ಥಿಗಳಿಲ್ಲದ ಗೋಸಂಗಿಗಳಿಗೆ 'ಮಳೆತೋ ಸಿಕಾರಿ ನಹಿ ಮಳೆತೋ ಬಿಕಾರಿ' (ಸಿಕ್ಕಿದರೆ ಸಿಕಾರಿ ಇಲ್ಲದಿದ್ದರೆ ಬಿಕಾರಿ) ಎಂಬಂತಾಗಿದೆ ಅವರ ಬದುಕು. ಹಾಗಾಗಿ, ಅವರ ಅಲೆಮಾರಿ ಬದುಕಿನಲ್ಲಿ ಬೇಟೆ ಮತ್ತು ಭಿಕ್ಷೆ ಅನಿವಾರ್ಯವಾಗಿದೆ.

ಗೋಸಂಗಿಗಳು ಕರ್ನಾಟಕದ ಸುಮಾರು ನಲವತ್ತೆರಡು ಊರುಗಳಲ್ಲಿ ವಾಸಿಸುತ್ತಿದ್ದು, ಆಯಾ ಪ್ರದೇಶಕ್ಕೆ ಸಂಬಂಧಿಸಿದಂತೆ ಆಹಾರದಲ್ಲಿ ಕೆಲವೊಂದು ವ್ಯತ್ಯಾಸಗಳನ್ನು ಕಾಣಬಹುದಾಗಿದೆ. ಗೋದಿ, ಜೋಳ, ರಾಗಿ, ಸಜ್ಜೆ, ಹೆಸರು, ಬೇಳೆ ಇನ್ನಿತರೆ ಧಾನ್ಯಗಳನ್ನು ಆಹಾರವಾಗಿ ಬಳಸುತ್ತಾರೆ. ಗೋದಿ ಮತ್ತು ಸಜ್ಜೆ ಅವರ ಆಚರಣೆಗಳಲ್ಲಿ ದೇವರಕಾರ್ಯಕ್ಕೆ ಅತಿಮುಖ್ಯವಾಗಿ ಬೇಕಾಗಿರುವ ಧಾನ್ಯವಾಗಿರುವುದರಿಂದ

ಎಲ್ಲಾ ಪ್ರದೇಶದ ಗೋಸಂಗಿಗಳು ತಪ್ಪದೇ ಬಳಸುತ್ತಾರೆ. ಜೊತೆಗೆ ಆಯಾ ಪ್ರದೇಶದಲ್ಲಿ ಸಿಗುವ ಸೊಪ್ಪು ತರಕಾರಿಗಳನ್ನು ಬಳಸುತ್ತಿರುವುದು ಸಹ ಕಂಡುಬರುತ್ತಿದೆ. ಇವರ ಆಹಾರ ಪದ್ಧತಿಯು ಸಹ ತುಂಬಾ ಸರಳವಾದುದು. ಅದ್ದೂರಿಯಾದ ಅಡುಗೆಗಳು ಇವರಲ್ಲಿ ಕಂಡುಬರುವುದಿಲ್ಲ. ಮಾಂಸ ಮತ್ತು ಸಸ್ಯಹಾರಗಳೆರಡರಲ್ಲೂ ಸರಳತೆ ಎದ್ದುಕಾಣುತ್ತದೆ. ಇದಕ್ಕೆ ಕಾರಣ ಬಡತನ 'ಹಾಸಿಗೆಯಿದ್ದಷ್ಟು ಕಾಲುಚಾಚು' ಎಂಬಂತೆ ತಮ್ಮ ಇತಿಮಿತಿಯೊಳಗೆ ಜೀವನವನ್ನು ಅಚ್ಚುಕಟ್ಟಾಗಿ ಸಾಗಿಸುತ್ತಿದ್ದಾರೆ. ಶ್ರಮವನ್ನೇ ನಂಬಿ ಬದುಕುವ ಇವರಲ್ಲಿ ಎಷ್ಟೋ ಜನ ಒಂದ್ಹೊತ್ತಿನ ಕೂಳಿನಲ್ಲಿ ಜೀವನ ಸಾಗಿಸುತ್ತಿದ್ದಾರೆ. ಪರಂಪರೆಯಿಂದ ನಂಬಿಕೊಂಡು ಬಂದ 'ಬೇಟೆ ಮತ್ತು ಭಿಕ್ಷೆ'ಗೆ ಇಂದು ಸಂಚಕಾರ ಬಂದಿದೆ. ಹೊಸ ಹೊಸ ಅವಿಷ್ಕಾರಗಳಿಂದ ಜೀವನಕ್ರಮದಲ್ಲಿ ಬದಲಾವಣೆಗಳನ್ನು ಪಡೆಯುತ್ತಾ ಸಾಗಿರುವ ಇಂದಿನ ಸಂದರ್ಭದಲ್ಲಿ ಗೋಸಂಗಿಗಳು ಹಲ್ಲು ಕಟ್ಟುವುದು, ಗಂಧದೆಣ್ಣೆ ಮಾರುವುದು, ಪ್ಲಾಸ್ಟಿಕ್ ಬಕೇಟ್, ಕೊಡ ರಿಪೇರಿ, ಸ್ಟೌವ್ ರಿಪೇರಿಯಂತಹ ಅಸ್ಥಿರ ಕಸುಬುಗಳನ್ನು ಅವಲಂಬಿಸಿರುವುದರಿಂದ ಹೊಟ್ಟೆ ಹೊರೆಯುವುದೇ ತುಂಬಾ ಕಷ್ಟವಾಗುತ್ತಿದೆ.

'ಬೇಟೆ' ತಮ್ಮ ಬದುಕಿನ ಅವಿಭಾಜ್ಯ ಅಂಗವಾಗಿಸಿಕೊಂಡಿದ್ದಾರೆ ಗೋಸಂಗಿಗಳು. ಇವರಲ್ಲಿ ಎಷ್ಟೋ ಜನರ ಬದುಕು ಬೇಟೆಯಿಂದಲೇ ಸಾಗುತ್ತಿದೆ. ವ್ಯಾಪಾರಕ್ಕೆ ಬೇಟೆಯನ್ನು ಬಳಸುವುದಕ್ಕಿಂತಲೂ ಹೆಚ್ಚಾಗಿ ಆಹಾರಕ್ಕಾಗಿ ಬೇಟೆಯಾಡುವುದೇ ಹೆಚ್ಚು. ದಿನನಿತ್ಯದ ಆಹಾರದಲ್ಲಿ ಮಾಂಸ ಹೆಚ್ಚಿನ ಪಾಲನ್ನು ಪಡೆದಿರುತ್ತದೆ. ಅದರಲ್ಲೂ ಬೇಟೆಮಾಂಸ. ಹಾಗಾಗಿಯೇ ಇಂದೂ ಸಹ ಗೋಸಂಗಿಗಳು ದಷ್ಟಪುಷ್ಟರಾಗಿ ಹೆಚ್ಚು ಆರೋಗ್ಯವಂತರಾಗಿದ್ದು, ಆಸ್ಪತ್ರೆಯ ಕಟ್ಟೆಯನ್ನು ಸಹ ಹತ್ತಿಲ್ಲ. ತಮ್ಮ ಅಲೆಮಾರಿತನದ ಸಂದರ್ಭದಲ್ಲಿ ವಿವಿಧ ಪ್ರದೇಶಗಳಲ್ಲಿ ಸಿಗುವ ಬಗೆಬಗೆಯ ಆಹಾರ ಪದಾರ್ಥಗಳು ಅವರ ಆರೋಗ್ಯವನ್ನು ಕಾಪಾಡುವಲ್ಲಿ ಸಹಕಾರಿಯಾಗಿವೆ. ಹಾಗೆಯೇ ಇವರು ಬಳಸಿದಷ್ಟು ವಿವಿಧ ಬಗೆಯ ಪದಾರ್ಥಗಳನ್ನು ಬೇರಾವ ಸಮುದಾಯಗಳು ಬಳಸಿರಲಿಕ್ಕಿಲ್ಲ. ವೈದ್ಯಗುಣಗಳಿರುವ ಪದಾರ್ಥಗಳನ್ನೇ ಹೆಚ್ಚಾಗಿ ಬಳಸುತ್ತಿದ್ದು, ಅದು ಅವರ ವೈದ್ಯಜ್ಞಾನಕ್ಕೆ ಹಿಡಿದ ಕನ್ನಡಿಯಾಗಿದೆ. ಇವರು ಬೇಟೆಯಾಡಿ ತಿನ್ನುವ ವಿವಿಧ ಬಗೆಯ ಪ್ರಾಣಿಗಳ ಹೆಸರನ್ನು ಕೇಳಿದರೆ ಆಶ್ಚರ್ಯವಾಗಬಹುದು. ಈ ರೀತಿಯ ಆಹಾರಕ್ರಮ ಅವರ ಆರ್ಥಿಕಸ್ಥಿತಿಯನ್ನು ಅವಲಂಬಿಸಿರುತ್ತದೆ ಎಂಬುದನ್ನು ನಾವು ಮರೆಯುವಂತಿಲ್ಲ.

ಗೋಸಂಗಿಗಳು ಸೇವಿಸುವ ವಿವಿಧ ಬಗೆಯ ಪ್ರಾಣಿಗಳ ಮಾಂಸ ಹಾಗೂ ಮಾಂಸದಿಂದ ಮಾಡಿದ ಸಾರಿಗೆ 'ಬೋಟಿ' ಎಂದು ಕರೆಯುತ್ತಾರೆ. ಇದು ಅವರ ಆಹಾರದ ಬಹುಮುಖ್ಯ ಭಾಗವಾಗಿದೆ. ಹಾಗಾಗಿ ಅವರು ಬಳಸುವ ವಿವಿಧ ಬಗೆಯ ಪ್ರಾಣಿಗಳ ಬೋಟಿಯ ವಿವರಗಳನ್ನಿಲ್ಲಿ ನೀಡಲಾಗಿದೆ.

೧. ಗೇಂದರ್ ಬೋಟಿ — ನರಿ ಮಾಂಸದಸಾರು
೨. ರುದಡ ಬೋಟಿ — ಚೀರುನಾಯಿ ಮಾಂಸದಸಾರು
೩. ಬುಂಗರ್ ಬೋಟಿ — ಮುಂಗಲಿ ಮಾಂಸದಸಾರು

| | | |
|---|---|---|
| ೪. | ಟುಸ್‌ಮುರಗಿ ಬೋಟಿ | ಆಮೆ ಮಾಂಸದಸಾರು |
| ೫. | ಸ್ಲೇವ್‌ರೀ ಬೋಟಿ | ಮುಳ್ಳಂದಿ ಮಾಂಸದಸಾರು |
| ೬. | ಪೋಸಡಿರೀ ಬೋಟಿ | ಪುನಗು ಬೆಕ್ಕಿನ ಮಾಂಸದಸಾರು |
| ೭. | ತಿತ್ತರ್ ಬೋಟಿ | ಕೌಜಿ (ಜ) ಮಾಂಸದ ಸಾರು |
| ೮. | ಬಲಾಡ್ ಬೋಟಿ | ಅಡವಿ ಚಿಕ್ಕುಮಾಂಸದಸಾರು |
| ೯. | ಚಿಪ್ಪಟ್ ಬೋಟಿ | ಉಡ ಮಾಂಸದಸಾರು |
| ೧೦. | ಮಗರ್ ಬೋಟಿ | ಮೊಸಳೆ ಮಾಂಸದಸಾರು |
| ೧೧. | ಬುರಗಂಜಿ ಬೋಟಿ | ಬುರಲಕ್ಕಿ ಮಾಂಸದಸಾರು |
| ೧೨. | ಡುಕ್ಕರ್ ಬೋಟಿ | ಅಡವಿ ಹಂದಿ ಮಾಂಸದಸಾರು |
| ೧೩. | ಸೂರ್ಕ್ಯ ಕಚಬು ಬೋಟಿ | ಅಡವಿ ಆಮೆ ಮಾಂಸದಸಾರು |
| ೧೪. | ಲಾಂಡಗೋ ಬೋಟಿ | ತೋಳ ಮಾಂಸದಸಾರು |
| ೧೫. | ಮೇರ್ ಬೋಟಿ | ನವಿಲು ಮಾಂಸದಸಾರು |
| ೧೬. | ಕೊತ್ತರಿ ಬೋಟಿ | ಹುಲ್ಲು ಬೆಕ್ಕು ಮಾಂಸದಸಾರು |
| ೧೭. | ಕೊಳ್‌ಸಾರಿ ಬೋಟಿ | ಮರಬೆಕ್ಕು ಮಾಂಸದಸಾರು |
| ೧೮. | ಸಸೌ ಬೋಟಿ | ಮೊಲ ಮಾಂಸದಸಾರು |
| ೧೯. | ರಾನ್ ಕುಕಡೋ ಬೋಟಿ | ಅಡವಿಕೋಳಿ ಮಾಂಸದಸಾರು |
| ೨೦. | ಟಿಲೋಡಿ ಬೋಟಿ | ಅಳಿಲು ಮಾಂಸದಸಾರು |
| ೨೧. | ಗಿಲೋರಿ ಬೋಟಿ | ಅಡವಿ ಅಳಿಲು ಮಾಂಸದಸಾರು |
| ೨೨. | ಕುಂಬಾರ್ ಕೋಡಿಯೋ ಬೋಟಿ | ಕುಂಬಾರಕಾಗಿ ಮಾಂಸದಸಾರು |
| ೨೩. | ಚಿಲಪರಿ ಬೋಟಿ | ಮೀನು ಮಾಂಸದಸಾರು |

ಇಷ್ಟಲ್ಲದೆ ಕತ್ತೆಕಿರುಬು, ಜಿಂಕೆ, ಚಿಗರೆ ಇನ್ನಿತರೆ ಪ್ರಾಣಿಗಳ ಹಾಗೂ ನೀರು ಕೊಕ್ಕರೆ, ಗುಂಡು ಮುಳುಗಿನ ಹಕ್ಕಿ, ನೀರುಕೋಳಿ, ಬಾತುಕೋಳಿ, ಮರಕುಟಿಗ ಇನ್ನಿತರೆ ಹಕ್ಕಿಗಳ ಮಾಂಸವನ್ನು ಸಹ ಆಹಾರಕ್ಕಾಗಿ ಬಳಸುತ್ತಿರುವುದು ಕಂಡುಬರುತ್ತದೆ. ನಿತ್ಯ ಮಾಂಸಹಾರಿಗಳಾದ ಗೋಸಂಗಿಗಳಿಗೆ ನರಿಮಾಂಸ ಅತ್ಯಂತ ಪ್ರಿಯವಾದದು. ಗರ್ಭಿಣಿ ಹಾಗೂ ಬಾಣಂತಿಯರಿಗೆ ನರಿಮಾಂಸ ತಪ್ಪದೇ ತಿನ್ನುಸುತ್ತಾರೆ. ಹೀಗೆ ತಿನ್ನಿಸುವುದರಿಂದ ಅವರ ಹತ್ತಿರಕ್ಕೆ ಯಾವುದೇ ಕಾಯಿಲೆಗಳು ಸುಳಿಯುವುದಿಲ್ಲ ಎಂಬ ನಂಬಿಕೆ ಇವರಲ್ಲಿದೆ ಹಾಗಾಗಿ 'ಗೇಂದರ್ ತೋ ಬಾರಾಸೌ ರೋಗ್‌ನೆ ಮಾರೆ' (ನರಿಮಾಂಸ ಹನ್ನೆರಡುನೂರು ರೋಗಗಳನ್ನು ಗುಣಪಡಿಸುತ್ತೆ) ಎಂಬ ಗಾದೆ ರೂಢಿಯಲ್ಲಿದೆ. ಆಮೆ ಮಾಂಸ ಸೇವಿಸುವುದರಿಂದ ದೃಷ್ಟಿ ಚುರುಕುಗೊಳ್ಳುತ್ತದೆ. ಸಂಬಾರ್‌ಕಾಗೆ ಮಾಂಸ ತಿನ್ನುವುದರಿಂದ ವಾಯಿ(ಫಿಟ್ಸ್) ಕಡಿಮೆಯಾಗುತ್ತದೆ. ಹೀಗೆ ಅಲೆಮಾರಿ ಗೋಸಂಗಿಗಳು ತಮ್ಮ ದಿನನಿತ್ಯದ ಆಹಾರಕ್ಕಾಗಿ ಹತ್ತು ಹಲವು ಪ್ರಾಣಿಗಳನ್ನು ಬೇಟೆಯಾಡುತ್ತಿದ್ದು, ಅವುಗಳಲ್ಲಿಯ ಔಷಧಿಯ ಗುಣಗಳನ್ನು ಕಂಡುಕೊಂಡಿದ್ದಾರೆ. ಸಾಮೂಹಿಕವಾಗಿ ಬೇಟೆಯಾಡುವ ಗೋಸಂಗಿಗಳು ಬೇಟೆಯಿಂದ ಬಂದಂತಹ ಮಾಂಸವನ್ನು ಎಲ್ಲರೂ ಸಮಾನವಾಗಿ ಹಂಚಿಕೊಳ್ಳುವರು.

ಅಡವಿಪ್ರಾಣಿಗಳನ್ನು ಬೇಟೆಯಾಡಕೂಡದೆಂದು ಸರ್ಕಾರ ನಿಷೇಧ ಹೇರಿರುವುದರಿಂದ ಗೋಸಂಗಿಗಳು ಅನಿವಾರ್ಯವಾಗಿ ಆಡು, ಕುರಿ, ಕೋಳಿಗಳ ಮಾಂಸಕ್ಕೆ ಮೊರೆಹೋಗಿದ್ದಾರೆ. ಇಂತಹ ಪ್ರಾಣಿಗಳನ್ನು ಕೊಂಡು ತಿನ್ನುವ ಶಕ್ತಿಯಿಲ್ಲದ ಗೋಸಂಗಿಗಳು ಹಬ್ಬಹರಿದಿನಗಳಲ್ಲಿ ಮಾತ್ರ ಇವುಗಳ ಮಾಂಸವನ್ನು ಬಳಸುತ್ತಾರೆ. ಕೆಲವು ಪ್ರದೇಶಗಳಲ್ಲಿ ಅರಣ್ಯ ಕಾವಲುಗಾರರ ಕಣ್ಣುತಪ್ಪಿಸಿ ಊರಿನ ಅಕ್ಕಪಕ್ಕದ ತೋಟಗಳಲ್ಲಿ ಸಿಗುವ ಮೊಲ, ಮುಂಗಲಿ, ಕೌಜುಗಳಂತಹ ಪ್ರಾಣಿಪಕ್ಷಿಗಳನ್ನು ಬೇಟೆಯಾಡಿ ತಿಂದರೆ ಇನ್ನೂ ಕೆಲವು ಪ್ರದೇಶಗಳಲ್ಲಿನ ಜನರು ಕೆರೆ ಕಾಲುವೆಗಳಲ್ಲಿ ಮೀನನ್ನು ಹಿಡಿದು ತಿನ್ನುವರು. ಹೀಗೆ ಗೋಸಂಗಿಗಳು ದಿನನಿತ್ಯದ ಆಹಾರವನ್ನು ವಿವಿಧ ಮೂಲಗಳಿಂದ ಸಂಗ್ರಹಿಸುತ್ತಿದ್ದಾರೆ. ಕೆಲವು ನಗರ ಪ್ರದೇಶಗಳಲ್ಲಿ ವಾಸಿಸುವ ಗೋಸಂಗಿಗಳ ಯುವಕರು ವಿವಿಧ ವ್ಯಾಪಾರಿ ಕೆಲಸಗಳಲ್ಲಿ ತೊಡಗಿರುವುದರಿಂದ ಹೋಟೆಲ್‌ನಲ್ಲಿ ಊಟ, ತಿಂಡಿ ತಿನ್ನುವುದು ಅನಿವಾರ್ಯವಾಗಿದೆ.

ಗೋಸಂಗಿಗಳು ಆಚರಿಸುವ ಪ್ರತಿಯೊಂದು ಹಬ್ಬಗಳಲ್ಲಿ ಗೋದಿ ಮತ್ತು ಸಜ್ಜೆಯನ್ನು ಮುಖ್ಯವಾಗಿ ಬಳಸುತ್ತಿದ್ದು, ಅವುಗಳಿಂದ ತಯಾರಿಸಿದ ಪದಾರ್ಥಗಳೇ ಅಂದಿನ ವಿಶೇಷ ಊಟವಾಗಿರುತ್ತದೆ. ಕೆಲವೊಮ್ಮೆ ಅನ್ನವನ್ನು ಸಹ ಮಾಡುತ್ತಾರೆ. ಇತ್ತೀಚಿಗೆ ಮದುವೆ ಸಂದರ್ಭಗಳಲ್ಲಿ ಇತರರಂತೆ ಲಾಡು, ಹುಗ್ಗಿ, ಚಪಾತಿ, ಚಿತ್ರಾನ್ನ, ಪಲಾವ್ ಇನ್ನಿತರೆ ವಿವಿಧ ರೀತಿಯ ಅಡುಗೆಗಳನ್ನು ಮಾಡಿಸುತ್ತಾರೆ. ಅದು ಅವರವರ ಆರ್ಥಿಕ ಸ್ಥಿತಿಯನ್ನು ಅವಲಂಬಿಸಿರುತ್ತದೆ.

ಮಾಂಸಹಾರದ ಜೊತೆಗೆ ಸಸ್ಯಹಾರವನ್ನು ಬಳಸುತ್ತಿದ್ದು, ಇವರು ಬಳಸುವ ವಿವಿಧ ಬಗೆಯ ಪಲ್ಲೆಗಳೆಂದರೆ: ಅಂಬಡಾರಿಬಾಜಿ (ಮೆಂತೆಪಲ್ಲೆ), ಲಾಂಬಡಾರಿಬಾಹಿಜಿ (ಅಣ್ಣೀಸೊಪ್ಪು), ಸೋಪಳಿಬಾಜಿ (ಸಬ್ಬಾಕ್ಷಿಪಲ್ಲೆ), ಗೋಳ್‌ರೀಬಾಜಿ (ಪಲಕನಪಲ್ಲೆ), ಪುದೀನ, ಕೊತ್ತುಂಬರಿ, ಕರಿಬೇವು ಇತ್ಯಾದಿ.

ತರಕಾರಿಗಳೆಂದರೆ: ಮೂಳಾರಿ (ಮೂಲಂಗಿ), ವಾಂಗ (ಬದನೆಕಾಯಿ), ದೋಡಕಾ (ಈರೇಕಾಯಿ), ಗೌರಾರಿ ಸೇಂಗು (ಜವಳಿಕಾಯಿ), ಪಟಾಟೋ (ಆಲೂಗಡ್ಡೆ), ಕಾಂದ (ಉಳ್ಳಾಗಡ್ಡೆ), ಲಸನ್ (ಬೆಳ್ಳುಳ್ಳಿ) ಹೀಗೆ ಗೋಸಂಗಿಗಳು ದಿನನಿತ್ಯದ ಆಹಾರಕ್ಕೆ ಮಾಂಸವನ್ನು ಬಳಸುವುದರ ಜೊತೆಗೆ ವಿವಿಧ ಬಗೆಯ ಸೊಪ್ಪು ತರಕಾರಿಗಳನ್ನು ಸಹ ಬಳಸುತ್ತಾರೆ.

### ೬. ಉಡುಗೆ ತೊಡುಗೆ

ಕೆಲವು ವಿಶಿಷ್ಟ ಸಮುದಾಯಗಳನ್ನು ಅವರು ಉಡುವ ಉಡುಗೆಗಳಿಂದಲೇ ಗುರುತಿಸಬಹುದು. ಆದರೆ ಗೋಸಂಗಿಗಳನ್ನು ಹಾಗೆ ಗುರುತಿಸುವುದು ಸ್ವಲ್ಪ ಕಷ್ಟದ ಕೆಲಸ. 'ಉದರ ನಿಮಿತ್ತಂ ಬಹುಕೃತ ವೇಷಂ' ಎನ್ನುವಂತೆ ಇಂದು ವಿವಿಧ ವೃತ್ತಿಗಳಲ್ಲಿ ತೊಡಗಿರುವ ಗೋಸಂಗಿಗಳು ವಿವಿಧ ವೇಷಗಳಲ್ಲಿ ಕಾಣಿಸಿಕೊಳ್ಳುತ್ತಾರೆ. ಅದರಲ್ಲೂ ಪಟ್ಟಣ ಪ್ರದೇಶದ ಸಂಪರ್ಕ ಹೆಚ್ಚಾಗಿರುವ ಯುವಕರ ಮೇಲೆ ಆಧುನಿಕ ಉಡುಪುಗಳ ಪ್ರಭಾವ ಬೀರಿರುವುದು ಎದ್ದುಕಾಣುತ್ತದೆ.

**ಪುರುಷರು ಧರಿಸುವ ಉಡುಪುಗಳು :** ಹಿಂದೆ ಪುರುಷರು ಧರಿಸುತ್ತಿದ್ದ ಉಡುಪುಗಳೆಂದರೆ ಒಂದು ಲಂಗೋಟಿ ಅದರ ಮೇಲೆ ಬಿಳಿಪಂಚೆ ಮತ್ತು ಅಂಗಿ ತಲೆಗೆ ಕೆಂಪು ಅಥವಾ ಅರಿಶಿಣ ಬಣ್ಣದ ಪೇಟಾ ಧರಿಸುತ್ತಿದ್ದು, ಸಾಧು ವೇಷ ಹಾಕಿಕೊಳ್ಳುತ್ತಿದ್ದ ಕೆಲವರು ಕೊರಳಲ್ಲಿ ರುದ್ರಾಕ್ಷಿಸರ, ಹಾಗೂ ಹುಲಿ ಉಗುರಿನ ಸರವನ್ನು ಧರಿಸುತ್ತಿದ್ದರಂತೆ. ಯಾರಾದರೂ ಪ್ಯಾಂಟು, ಷರ್ಟ್ ಧರಿಸಿದರೆ ಅಂತವರಿಗೆ ಜಾತಿಪಂಚಾಯ್ತಿಯವರು ತೀನ್‌ಬಾರ್ (ಮೂರನ್ನೆರಡು) ದಂಡ ವಿಧಿಸುತ್ತಿದ್ದರಂತೆ. ಆದರೆ ಈಗ ನಗರ ಪ್ರದೇಶಗಳಲ್ಲಿ ಹೆಚ್ಚಾಗಿ ವಾಸಿಸುವ ಗೋಸಂಗಿಗಳು ವಿವಿಧ ಪ್ರದೇಶಗಳಿಗೆ ವ್ಯಾಪಾರಕ್ಕೆ ಹೋಗುವುದರಿಂದ ಸಹಜವಾಗಿಯೇ ಆಧುನಿಕ ಉಡುಪುಗಳಿಗೆ ಮೊರೆಹೋಗಿದ್ದಾರೆ. ಪ್ಯಾಂಟು, ಷರ್ಟ್, ಕೋಟು, ಟೈ, ಬೆಲ್ಟ್‌ಗಳನ್ನು ಸಹ ಬಳಸುತ್ತಿದ್ದಾರೆ. ಆದರೆ ಮದುವೆ ಸಂದರ್ಭದಲ್ಲಿ ಮಾತ್ರ ಹಳೆ ಉಡುಪಿನ ಪದ್ಧತಿಗಳನ್ನೇ ಅನುಸರಿಸುತ್ತಾರೆ. ಕೆಲವು ಕಡೆ ಕ್ವಚಿತ್ತಾಗಿ ಪ್ಯಾಂಟು, ಷರ್ಟು, ಧರಿಸಿದರೂ ಸಹ ರುಮಾಲು ಧರಿಸುವುದು ಮಾತ್ರ ಬಿಟ್ಟಿಲ್ಲ. ಹಿರಿಯರು ಧರಿಸುತ್ತಿರುವ ವೇಷಭೂಷಣಗಳು ಮಹಾರಾಷ್ಟ್ರ, ರಾಜಾಸ್ಥಾನದ ಮಾರವಾಡಿಗಳು ಧರಿಸುವ ಪೋಷಾಕುಗಳನ್ನು ನೆನಪಿಸುತ್ತವೆ. ಹಾಗಾಗಿ ಮಹರಾಷ್ಟ್ರದ ಮೂಲದವರಾದ ಗೋಸಂಗಿಗಳು ಬಹುಶಃ ಮೊದಲಿನಿಂದಲೂ ಇದೇ ಉಡುಪುಗಳನ್ನು ಧರಿಸುತ್ತಿದಿರಬೇಕು. ನಂತರ ಆಧುನಿಕತೆಯ ಪ್ರಭಾವದಿಂದ ವೇಷ ಭೂಷಣಗಳಲ್ಲಿ ಬದಲಾವಣೆಗಳನ್ನು ಕಂಡಿರಬೇಕು. ನಲವತ್ತು ಐವತ್ತು ವರ್ಷದ ಪುರುಷರೆಲ್ಲರು ದಾಡಿ ಬಿಟ್ಟಿರುತ್ತಾರೆ. ನೋಡಲು ಕೆಂಪಗೆ ದೃಢಕಾಯರಾದ ಇವರ ದೇಹಕ್ಕೆ ಗಡ್ಡ ಇನ್ನಷ್ಟು ಕಳೆಯನ್ನು ಹೆಚ್ಚಿಸಿದೆ, ದೇವರ ಕಾರ್ಯದ ಸಂದರ್ಭದಲ್ಲಿ ಭಗತ ಖಾದಿಬಟ್ಟೆಗಳನ್ನೇ ತೊಡುತ್ತಾನೆ. ಹೀಗೆ ಮದುವೆ ಇನ್ನಿತರೆ ಆಚರಣೆಗಳ ಸಂದರ್ಭದಲ್ಲಿ ಇಂತಹವೇ ಬಟ್ಟೆಗಳನ್ನು ಕೊಡಬೇಕೆಂಬ ನಿಯಮವನ್ನು ಪಾಲಿಸಿಕೊಂಡು ಬರುತ್ತಿದ್ದು, ಉಳಿದ ಸಂದರ್ಭಗಳಲ್ಲಿ ತಮಗಿಷ್ಟ ಬಂದ, ಸುಂದರವಾಗಿ ಕಾಣುವ ಬಟ್ಟೆಗಳನ್ನು ತೊಡುತ್ತಿರುವುದು ಇಂದು ಸಾಮಾನ್ಯಸಂಗತಿ, ಯಾವುದೇ ಪ್ರದೇಶದ ಜನರು ಧರಿಸುವ ಬಟ್ಟೆಗಳು ಆ ಜನರ ಮನೋಭಿಲಾಷೆ ಹಾಗೂ ಪ್ರಾದೇಶಿಕತೆಯನ್ನು ಪ್ರತಿಬಿಂಬಿಸುತ್ತದೆ. ಹೀಗೆ ಮಾನವನ ಇತಿಹಾಸದಲ್ಲಿ ಬೆತ್ತಲೆಯಿಂದ ಬಟ್ಟೆಯವರೆಗೆ ಹಂತಹಂತವಾದ ಬದಲಾವಣೆಯನ್ನು ಪಡೆದಿದ್ದಾನೆ. ಇದು ಮಾನವನಿಗೆ ಮಾತ್ರ ಸಾಧ್ಯವಾಗಿದೆ. ಭಾರತದಲ್ಲಂತೂ ಉಡುಗೆತೊಡುಗೆಗಳಿಗೆ ವಿಶೇಷವಾದ ಸ್ಥಾನ ಲಭಿಸಿದೆ.

**ಸ್ತ್ರೀಯರು ಧರಿಸುವ ಉಡುಪುಗಳು ಮತ್ತು ಆಭರಣಗಳು :** ಲಂಬಾಣಿ ಮಹಿಳೆಯರು ಧರಿಸುವ ಉಡುಪುಗಳು ಇತರೆ ಭಾರತೀಯ ಮಹಿಳೆಯರು ಧರಿಸುವ ಉಡುಪುಗಳಿಗಿಂತ ಭಿನ್ನವಾಗಿದ್ದು ಹೆಚ್ಚು ಆಕರ್ಷಣೆಯವಾಗಿರುತ್ತವೆ. ಅದೇ ರೀತಿ ಹಾಲಕ್ಕಿ ಮಹಿಳೆಯರು ಕೊರಳ ತುಂಬಾ ಧರಿಸುವ ಮಣಿ ಸರಗಳು ಸಹ ಹೆಚ್ಚು ಆಕರ್ಷಣೀಯವಾಗಿದ್ದು, ಅವುಗಳಿಂದಲೇ ಅವರನ್ನು ಗುರುತಿಸಬಹುದು. ಹೀಗೆ ಅವರು ಧರಿಸುವ ಉಡುಪುಗಳಿಂದಲೇ ಇಂತಹ ಸಮುದಾಯದವರೆಂದು ಗುರುತಿಸುವಷ್ಟು ಪ್ರಭಾವಶಾಲಿಯಾಗಿವೆ. ಆದರೆ ಗೋಸಂಗಿ ಸಮುದಾಯದ ಮಹಿಳೆಯರು ಧರಿಸುವ ಉಡುಪುಗಳಿಗೆ ಈ ರೀತಿಯ ಇರುವುದು ಕಂಡುಬರುತ್ತಿಲ್ಲ.

ಹಿಂದೆ ಗೋಸಂಗಿ ಮಹಿಳೆಯರು ಒಂದು ಸೀರೆಯ ಕೊನೆಯ ಸ್ವಲ್ಪ ಭಾಗವನ್ನು ಹರಿದು ಎದೆಗೆ ಕಟ್ಟಿಕೊಂಡು ಉಳಿದ ಭಾಗವನ್ನು ಸೊಂಟಕ್ಕೆ ಸುತ್ತಿ ಕಚ್ಚೆ ಹಾಕಿ ತಲೆ ತುಂಬ ಸೆರಗನ್ನು ಹೊದ್ದುಕೊಳ್ಳುತ್ತಿದ್ದರಂತೆ. ಹಿರಿಯರು ಎದುರಿಗಿದ್ದಾಗ ಅಪ್ಪಿತಪ್ಪಿಯೂ ತಲೆಯ ಮೇಲಿನ ಸೆರಗು ಜಾರಿಸುವಂತಿಲ್ಲ. ಕೆಲವೊಮ್ಮೆ ಗಾಳಿಗೆ ತಲೆಯ ಮೆಲಿನ ಸೆರಗು ಜಾರಿದ್ದಕ್ಕಾಗಿ ದಂಢವಿದಿಸಿದ ಪ್ರಸಂಗಗಳನ್ನು ಹಿರಿಯರು ಇಂದಿಗೂ ನೆನಪಿಸಿಕೊಳ್ಳುತ್ತಾರೆ. ಹೊದ್ದುಕೊಳ್ಳಿತ್ತಿದ್ದರಂತೆ, ಲಂಗ ಕುಪ್ಪಸಗಳನ್ನು ಧರಿಸಕೂಡದೆಂಬ ನಿಯಮವಿದ್ದು ಹಾಗೇನಾದರೂ ಧರಿಸಿದ್ದೇ ಆದಲ್ಲಿ ಅಂಥವರಿಗೆ 'ತೀನ್‌ಬಾರ್' (ಮೂರನ್ನೆರಡು) ದಂಡ ವಿಧಿಸುತ್ತಿತ್ತಾರೆ. ಹಿರಿಯರು ಎದುರಿಗೆ ಬಂದಾಗ ಅರ್ಧ ಕಣ್ಣುಗಳು ಮುಚ್ಚುವಂತೆ ಸೆರಗನ್ನು ಹೊದೆಯಬೇಕು. ಅಷ್ಟೇ ಅಲ್ಲ ಚಪ್ಪಲಿ ಹಾಕಿಕೊಂಡಿದ್ದರೆ ಅವುಗಳನ್ನು ಕೈಯಲ್ಲಿ ಹಿಡಿದುಕೊಂಡು ಹಿರಿಯರು ಹೋದ ಮೇಲೆ ಹಾಕಿ ನಡೆಯಬೇಕಾಗಿತ್ತೆಂದು ವಕ್ತೃಗಳು ಹೇಳುತ್ತಾರೆ. ಆದರೆ ಈಗ ಆಧುನಿಕತೆಯ ಪ್ರಭಾವದಿಂದ ಲಂಗ, ಕುಪ್ಪುಸ, ನೈಟಿ, ಚೂಢಿದಾರ ಇನ್ನಿತರೆ ಉಡುಪುಗಳನ್ನು ಧರಿಸುತ್ತಿರುವುದು ಸಾಮಾನ್ಯ ಸಂಗತಿಯಾಗಿದೆ. ಆದರೆ ಮದುವೆ ಸಂದರ್ಭದಲ್ಲಿ ಮಾತ್ರ ಕೆಂಪು ಸೀರೆಯನ್ನೇ ಉಡಬೇಕು. ಕುಪ್ಪಸದ ಬದಲಿಗೆ ಕೆಂಪು ಬಟ್ಟೆಯನ್ನು ಎದೆಗೆ ಸುತ್ತಿಕೊಳ್ಳಬೇಕು ಎಂಬ ನಿಯಮವನ್ನು ಈಗಲೂ ಸಹ ಪಾಲಿಸಿಕೊಂಡು ಬರುತ್ತಿದ್ದಾರೆ. ಮಾಸ್ತೀಕ, ಮಾರವಾಡಿಗಳಂತೆ ಗೋಸಂಗಿಗಳೂ ಸಹ ಮದುವೆ ಸಂದರ್ಭದಲ್ಲಿ ಮಾತ್ರ ಬಲ ಸೆರಗು ಪದ್ಧತಿಯನ್ನು ಅನುಸರಿಸುತ್ತಿರುವುದು ವಿಶೇಷವಾಗಿದೆ.

ಗೋಸಂಗಿಗಳ ಉಡುಪುಗಳಲ್ಲಿ ಹೇಗೆ ಸರಳತೆಯಿದೆಯೋ ಆಭರಣಗಳಲ್ಲೂ ಅಷ್ಟೇ ಸರಳತೆ ಇದೆ. ವಿವಾಹದ ಗುರುತಾಗಿ ಕರಿಮಣಿ ಸರವನ್ನು ಧರಿಸುವತ್ತಿದ್ದು, ಕೆಲವು ಸ್ಥಿತಿವಂತರು ಕರಿಮಣಿ ಸರದ ಜೊತೆ 'ತಾಳಿ' ಬೊಟ್ಟನ್ನು ಸಹ ಹಾಕಿಕೊಳ್ಳುತ್ತಿದ್ದಾರೆ. ಮೂಗಿಗೆ ದುಂಡನೆಯ ನತ್ತು, ಕಿವಿಗೆ ಬೆಂಡೋಲೆ, ಕೈಗೆ ಹಸಿರು ಗಾಜಿನ ಬಳೆ, ಕಾಲುಂಗುರಗಳನ್ನು ಧರಿಸುತ್ತಾರೆ. ವಿಧವೆಯಾದವಳು, ತಾಳಿ, ಕಾಲುಂಗರ ಇನ್ನಿತರೆ ಯಾವುದೇ ಮುತ್ತೈದೆತನದ ಆಭರಣಗಳನ್ನು ಧರಿಸುವಂತಿಲ್ಲ. ಬೆಳ್ಳಿಯಿಂದ ಮಾಡಿದ ಯಾವುದೇ ಆಭರಣಗಳನ್ನು ಸೊಂಟದ ಕೆಳಗಿನ ಅಂಗಂಗಾಗಳಿಗೆ ಧರಿಸುವಂತಿಲ್ಲ. ಇದಕ್ಕೆ ಕಾರಣ ಅವರು ಪೂಜಿಸುವ ದೇವರಮೂರ್ತಿಗಳನ್ನು ಬೆಳ್ಳಿಯಿಂದ ಸಿದ್ದಪಡಿಸಿದ್ದರು. ಹಾಗಾಗಿ ಬೆಳ್ಳಿಗೆ ಅವರಲ್ಲಿ ಪೂಜ್ಯನೀಯ ಸ್ಥಾನವಿದೆ. ಆದರೆ ಇತ್ತೀಚಿಗೆ ಕೆಲವು ಪ್ರದೇಶಗಳಲ್ಲಿ ಈ ನಿಯಮವನ್ನು ಅಷ್ಟಾಗಿ ಪಾಲಿಸುತ್ತಿಲ್ಲ.

'ಸೊನ್ನಾರಿ ಮರಿ' (ಸಿರ್ಸಿಮಾರಿಕಾಂಬ)ಯನ್ನು ಮನೆದೇವರಾಗಿ ಪೂಜಿಸುವ ಕೆಲವು ಬಳಿಯವರು ಸಹ ಎಷ್ಟೇ ಸ್ಥಿತಿವಂತರಾಗಿದ್ದರೂ ಬಂಗಾರದ ಆಭರಣಗಳನ್ನು ಧರಿಸುವುದಿಲ್ಲ. ಸೊನ್ನಾರಿ ಮರಿ ಎಂದರೆ 'ಬಂಗಾರದ ದೇವರು' ಎಂಬ ಕಲ್ಪನೆ ಅವರಲ್ಲಿದೆ. ಹಾಗಾಗಿ ಬಂಗಾರದ ಆಭರಣಗಳನ್ನು ಧರಿಸಿದರೆ ದೇವರಿಗೆ ಅಪಚಾರವೆಸಗಿದಂತಾಗುತ್ತದೆ ಎಂಬ ನಂಬಿಕೆ ಬಲವಾಗಿ ಬೇರೂರಿದೆ. ದೇವರ ಬಗ್ಗೆ ಅಪಾರ ಭಯ, ಭಕ್ತಿಯನ್ನು ಹೊಂದಿರುವ ಗೋಸಂಗಿಗಳು, ಧಾರ್ಮಿಕ ವಿಧಿನಿಯಮಗಳಿಗೆ ಸಂಬಂಧಪಟ್ಟಂತೆ ಎಲ್ಲವನ್ನು ಚಾಚೂ ತಪ್ಪದೆ ಪಾಲಿಸಿಕೊಂಡು ಬರುತ್ತಿದ್ದಾರೆ. ತಮ್ಮೆಲ್ಲಾ ಕಷ್ಟಗಳನ್ನು ರಕ್ಷಿಸುವ ಏಕೈಕ ಶಕ್ತಿಎಂದರೆ ದೇವರೊಬ್ಬನೆ ಎಂಬ ನಂಬಿಕೆ ಗೋಸಂಗಿಗಳಲ್ಲಿದೆ.

ಒಟ್ಟಾರೆ ಕರ್ನಾಟಕದ ವಿವಿಧ ಪ್ರದೇಶದಲ್ಲಿ ವಾಸಿಸುವ ಗೋಸಂಗಿ ಸಮುದಾಯದ ಪುರುಷ ಸ್ತ್ರೀಯರಲ್ಲಿನ ಉಡುಗೆತೊಡುಗೆಗಳ ಮೇಲೆ ಆಧುನಿಕ ಉಡುಗೆ ತೊಡುಗೆಗಳ ಪ್ರಭಾವ ಬೀರಿದರೂ ಸಹ ವಿವಿಧ ಆಚರಣೆಗಳ ಸಂದರ್ಭದಲ್ಲಿ ಕೆಲವು ಸಂಪ್ರದಾಯಿಕ ಉಡುಗೆ ತೊಡುಗೆಗಳಲ್ಲಿ ಬದಲಾವಣೆಯಾಗಿಲ್ಲ ಎಂಬುದು ಗಮನಾರ್ಹ ಸಂಗತಿ. ಯಾವುದೇ ಒಂದು ಬುಡಕಟ್ಟು ಸಮುದಾಯವು ಎಷ್ಟೇ ಆಧುನಿಕ ಪ್ರಭಾವಕ್ಕೆ ಒಳಗಾಗಿದ್ದರೂ ಸಹ ಸಾಂಪ್ರದಾಯಿಕ ಆಚರಣೆಗಳ ಸಂದರ್ಭಗಳಲ್ಲಿ ಮೂಲ ಆಶಯಕ್ಕೆ ಚ್ಯುತಿ ಬರದ ಹಾಗೆ ನೋಡಿಕೊಳ್ಳುವರು. ಹೀಗೆ ಪರಂಪರೆಯಿಂದ ನಂಬಿಕೊಂಡು ಬಂದ, ಜೀವನಮೌಲ್ಯಗಳನ್ನು ಉಳಿಸಿಕೊಳ್ಳಲು ಗೋಸಂಗಿಗಳು ಇಂದೂ ಸಹ ಹೆಣಗಾಡುತ್ತಿದ್ದಾರೆ.

ಯಾವುದೇ ಒಂದು ಸಮುದಾಯ ತನ್ನ ಮೂಲ ನೆಲೆಯನ್ನು ತ್ಯಜಿಸಿ ಬೇರೊಂದು ಪ್ರದೇಶಕ್ಕೆ ವಲಸೆ ಬಂದು ನೆಲೆ ನಿಲ್ಲುವಾಗ ಆ ಪ್ರದೇಶದ ಸಾಂಸ್ಕೃತಿಕ ಹಾಗೂ ಭಾಷಿಕ ದಾಳಿಗೆ ಸಿಲುಕುವುದು ಸಹಜ. ಹೀಗಾಗಿ ಗೋಸಂಗಿ ಸಮುದಾಯ 'ಆಧುನಿಕವಾಗಿಯೂ' ತನ್ನ ಚಹರೆಗಳನ್ನ ಕಾಪಾಡಿಕೊಂಡು ಬಂದಿದೆ. ಸಾಮಾಜಿಕ ಮತ್ತು ಆರ್ಥಿಕ ಅಧಿಕಾರಗಳಿಲ್ಲದೆಯೇ 'ತನ್ನತನ'ವನ್ನ ಜತನದಿಂದ ರಕ್ಷಿಸಿಕೊಂಡಿದೆ. ಆದರೆ ಆಧುನಿಕ ಜಗತ್ತಿನ ವಿರೂಪಗಳೂ ಕಾಲದ ಅನಿವಾರ್ಯತೆಯಿಂದಾಗಿ ಈ ಸಮುದಾಯಕ್ಕೆ ಮೈಗೂಡಿವೆ. ವರ್ತಮಾನದ ಜಗತ್ತಿನ ವಿಕ್ಷಿಪ್ತ ವೇಗ ಮತ್ತು ಸ್ಪರ್ದೆಗಳು ಮೂರನೇ ಜಗತ್ತಿನ ಸಮುದಾಯಗಳನ್ನ ವಿಕೃತವಾಗಿಯೂ ಕಾಡಿಬಿಡುತ್ತವೆ. ಆಧುನಿಕ ಮೋಹಗಳೇ ಕೆಲವು ವಿಕಾರಗಳನ್ನ ಹುಟ್ಟುಹಾಕುತ್ತವೆ. ಗೋಸಂಗಿಗಳ ಸಾಮಾಜಿಕ ಬದುಕು ಇದಕ್ಕೇನು ಹೊರತಾಗಿಲ್ಲ.

### ಅಡಿಟಿಪ್ಪಣಿಗಳು

೧. ಡಾ. ಸಣ್ಣರಾಮ, ಲಂಬಾಣಿ ಸಂಸ್ಕೃತಿ, ಪುಟ: ೭೪-೭೫, ೧೯೯೯

೨. ಗೌದಡಿರ್ - ಕೌದಿ, ನಾಥ್ - ಸಂಬಂಧ. ಮಕ್ಕಳಿಲ್ಲದ ದಂಪತಿಗಳು ಬೇರೆ ಬೇರೆ ಸಮುದಾಯದ ಮಕ್ಕಳನ್ನು ದತ್ತು ಸ್ವೀಕರಿಸುವ ಕ್ರಮಕ್ಕೆ ಗೋದಡೀರ್‌ನಾಥ್ ಎಂದು ಕರೆದಿರುವುದು ಔಚಿತ್ಯಪೂರ್ಣವಾಗಿದೆ.

೩. ಎಂ. ನಂಜಮ್ಮಣ್ಣಿ ಭಾರತೀಯ ಸಾಮಾಜಿಕ ಸಂಸ್ಥೆಗಳು ಪುಟ: ೧೭೮, ೧೯೮೨

೪. ಉದ್ಧೃತ, ಎಂ.ನಂಜಮ್ಮಣ್ಣಿ, ಭಾರತೀಯ ಸಾಮಾಜಿಕ ಸಂಸ್ಥೆಗಳು, ಪುಟ: ೧೭೩, ೧೯೮೨

೫. ಕನ್ಯೆಯ ತಂದೆತಾಯಿಗಳು ದೂರದ ಊರಿನಲ್ಲಿದ್ದರೆ ಅವರಿಗೆ ವಿವಾಹದ ವಿಷಯ ತಿಳಿಸಲಾಗದಿದ್ದ ಸಂದರ್ಭದಲ್ಲಿ ಹತ್ತಿರದಲ್ಲಿರುವ ಅವರದೆ ಬಳಿಯ ಬಂಧುಗಳಿಗೆ ಕನ್ಯಾಶುಲ್ಕವನ್ನು ಮುಟ್ಟಿಸಿ ವಿವಾಹವಾಗಬಹುದು.

೬. 'ಗಂಗಾ' ಎಂದರೆ 'ಸಾಕ್ಷಿ' ಎಂದು ಅರ್ಥೈಸುತ್ತಾರೆ. ಅಂದರೆ ಯಾವುದೇ ಕುಲಪಂಚಾಯ್ತಿ ಮದುವೆ ಮುಂಜಿ ಕಾರ್ಯಗಳಿರಲಿ ಎರಡು ಬೆಡಗಿನವರ ಮಧ್ಯೆ ಬೇಕೆಂದು ಬೆಡಗಿನ ವ್ಯಕ್ತಿ ಸೇರುವುದಕ್ಕೆ 'ಗಂಗಾ' ಎಂದು ಕರೆಯುತ್ತಾರೆ. ಉದಾಹರಣೆಗೆ ಖಾಗ್‌ಪಡಿಯಾರ್ ಬೆಡಗಿನವರ ಪಂಚಾಯಿತಿಯಲ್ಲಿ 'ಮುಣ್ಯಾಣಿ' ಬೇಡುವ ವ್ಯಕ್ತಿ ಸೇರುವುದಕ್ಕೆ 'ಗಂಗಾ' (ಸಾಕ್ಷಿ) ಎನ್ನುವರು.

೭. ಎಂ. ನಂಜಮ್ಮಣ್ಣಿ, ಭಾರತೀಯ ಸಾಮಾಜಿಕ ಸಂಸ್ಥೆಗಳು, ಪುಟ: ೩೦೯, ೧೯೮೨

೮. ಎಂ. ನಂಜಮ್ಮಣ್ಣಿ, ಸಾಮಾಜಿಕ ಮಾನವಶಾಸ್ತ್ರ, ಪುಟ: ೪೭-೪೮, ೧೯೭೪

೯. ದೊಕ್ಕಲು ಮಕ್ಕಳು ಹಾಗೂ ಲಂಬಾಣಿಗಳಲ್ಲೂ ಸಹ ಹನ್ನೆರಡು ಮುಖ್ಯ ಗೋತ್ರಗಳಿರುವುದು ತಿಳಿದು ಬರುತ್ತದೆ. ಇದಕ್ಕೆ ಅವರು 'ಬಾರಾಗೋತ್ರ'ಗಳೆಂದು ಕರೆಯುತ್ತಾರೆ.

೧೦. ಗೋಸಂಗಿಗಳು ಚೌಹಾಣ್ ಬಳಿಯವರನ್ನು ತಮ್ಮ ಸಮುದಾಯದ ಹಿರಿಯ ನಾಯಕನೆಂದು ಭಾವಿಸಿದ್ದಾರೆ. ಹಾಗಾಗಿ ಇವರು ಎಲ್ಲಿ ವಾಸವಾಗಿರಲಿ, ಮದುವೆ, ಪಂಚಾಯಿತಿಯಂತಹ ಕಾರ್ಯಗಳೇನಾದರೂ ನಡೆಸಿದರೆ 'ಚೌವಾಣ್' ಬಳಿಯವರಿಗೆ ಮುಡುಪನ್ನು ಕಳುಹಿಸಿ ಕಾರ್ಯಮಾಡಬೇಕೆಂಬ ನಿಯಮವಿದೆ. ಆದರೆ ಕಳೆದ ೧೦-೧೫ ವರ್ಷದಿಂದೀಚೆಗೆ 'ಚೌವಾಣ್' ಬಳಿಯವರ ಹೆಸರಿನಲ್ಲಿ ದೇವರಿಗೆ ಮುಡುಪನ್ನು ಸಲ್ಲಿಸಿ ಕಾರ್ಯಗಳನ್ನು ಮಾಡುತ್ತಾ ಬರುತ್ತಿದ್ದಾರೆ.

೧೧. ಹೊಸಪೇಟೆಯ ಸಿರಿಮಂತ್ ಪಡಿಯಾರ್ ಹಾಗೂ ಬುಕ್ಕಸಾಗರ (ಹೊಸಪೇಟೆ ತಾಲ್ಲೂಕ)ದ ಮಾಧವರಾವ್ ಗೋಸಂಗಿಯವರ ನಡುವಿನ ಜಗಳವನ್ನು ಏಳನೇ (ಕೊನೆ ಪಂಚಾಯಿತಿ ಕಟ್ಟೆ) ಹಂತದ ಪಂಚಾಯಿತಿಯಲ್ಲಿ ಇತ್ಯಾರ್ಥವಾಗಿರುವುದು ತಿಳಿದುಬಂದಿದೆ. ಅಷ್ಟೇ ಅಲ್ಲ ಆ ಪಂಚಾಯಿತಿ ನಡೆಯುತ್ತಿದ್ದ ಸಂದರ್ಭವನ್ನು ಮಾಧವ್‌ರಾವ್‌ರವರು ವಿಡಿಯೋ ಚಿತ್ರಣವನ್ನು ಸಹ ಮಾಡಿಕೊಂಡಿದ್ದಾರೆ. ನನ್ನ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ದೊರೆತ ಈ ನ್ಯಾಯ ಪಂಚಾಯಿತಿಯ ವಿಡಿಯೋ ಚಿತ್ರಣವನ್ನು ಸಿ.ಡಿ.ಕ್ಯಾಸೆಟ್‌ನಲ್ಲಿ ದಾಖಲಿಸಿಕೊಂಡಿದ್ದೇನೆ. ಹೊಸಪೇಟೆ ಪ್ರದೇಶದಲ್ಲಿ ನಡೆದಿರುವುದು ಬೆಳಕಿಗೆ ಬಂದಿದೆ.



## ಅಧ್ಯಾಯ - ಮೂರು

# ಗೋಸಂಗಿಗಳ ಸಾಂಸ್ಕೃತಿಕ ಬದುಕು

೧. ಹಬ್ಬಗಳು

೨. ಆಚರಣೆಗಳು

೩. ಸಂಸ್ಕಾರಗಳು

೪. ನಂಬಿಕೆ-ನಿಷೇಧಗಳು

# ಗೋಸಂಗಿಗಳ ಸಾಂಸ್ಕೃತಿಕ ಬದುಕು

ಭಾರತದ ಬಹುತ್ವದ ಬಹುದೊಡ್ಡ ವಿಶೇಷವೇನೆಂದರೆ, ಪಾರಂಪರಿಕವಾಗಿ ತಾನು ಕಟ್ಟಿಕೊಂಡು ಬಂದ ಅಸ್ಮಿತೆಯನ್ನ, ಎಂತಹುದೇ ಪ್ರಭಾವಗಳ ಎದುರು ಜತನದಿಂದ ಕಾಪಾಡಿಕೊಂಡು ಬರುವುದು. ಭಾರತದ ಸಾಂಸ್ಕೃತಿಕ ಚರಿತ್ರೆಯನ್ನ ರೂಪಿಸಿದ ಅನೇಕ ಮತಧರ್ಮಗಳು, ಪ್ರಭುತ್ವಗಳು, ಆಯಾಕಾಲಘಟ್ಟದಲ್ಲಿ ಇಲ್ಲಿನ ಜನಸಮುದಾಯಗಳನ್ನ ಉಗ್ರವಾಗಿ ಪ್ರಭಾವಿಸಿದರೂ ಸಹ, ಈ ಸಮುದಾಯಗಳ ಅಂತಸ್ಥ ಜಗತ್ತು ಆ ಪ್ರಭಾವಗಳೆಲ್ಲವನ್ನು ಅರಗಿಸಿಕೊಂಡು ಪಕ್ವವಾಗುತ್ತಲೇ ಬಂದಿದೆ. ಅಲ್ಲದೆ ಈವತ್ತು ಮುಖ್ಯವಾಹಿನಿಯೆಂದು ಕರೆಯಲ್ಪಡುವ 'ವೈದಿಕ ದರ್ಶನ'ಗಳು, ಈ ಅವೈದಿಕ ಜ್ಞಾನಶಿಸ್ತುಗಳ ಪ್ರಭಾವದಿಂದ ರೂಪಗೊಂಡಿವೆ. ಇಂದು ನಾವು 'ವೈದಿಕ ದರ್ಶನ'ಗಳು ಎಂದು ಯಾವುದನ್ನ ಕರೆಯುತ್ತೇವೆಯೋ, ಆ ಜ್ಞಾನ ಪರಂಪರೆ ಶುದ್ಧಾಂಗವಾಗೇನೂ ಉಳಿದುಕೊಂಡಿಲ್ಲ. ಇಲ್ಲವೆ ಶುದ್ಧ ದ್ರಾವಿಡ ಮತ್ತು ಆರ್ಯ ಜ್ಞಾನ ಪರಂಪರೆಗಳಿವೆ ಎಂಬುದೇ ಒಂದು ಮಿಥ್ ಆಗಿ ಕಾಣುತ್ತಿದೆ. ಭಾರತದ ಒಟ್ಟು ಸಾಂಸ್ಕೃತಿಕ ಸಂದರ್ಭವೇ ಒಂದು ಬೃಹತ್ ಸಂಕರ ರೂಪವಾಗಿ ನಮ್ಮ ಕಣ್ಣೆದುರಿಗಿದೆ. ಹೀಗಾಗಿ ಭಾರತದ ಯಾವ ಸಾಂಸ್ಕೃತಿಕ ಘಟಕವೂ ಈ ಸಂಕರ ಪ್ರವೃತ್ತಿಗೆ ಹೊರತಾಗೇನೂ ಇಲ್ಲ. ಒಂದು ಪ್ರಾಂಜಲ ಸಾಂಸ್ಕೃತಿಕ ಸಂದರ್ಭ ತನ್ನನ್ನ ಉಳಿಸಿಕೊಂಡು, ಅನ್ಯ ಪ್ರಭಾವಗಳನ್ನ 'ಸ್ವೀಕರಿಸುವ' ಇಲ್ಲವೆ 'ನಿರಾಕರಿಸುವ' ನಮ್ಮ ಸ್ವಭಾವವನ್ನ ಮೈಗೂಡಿಸಿಕೊಂಡಿರುತ್ತದೆ. 'ಸ್ವೀಕರಿಸುವ' ಮತ್ತು 'ನಿರಾಕರಿಸುವ' ಈ ಡೆಮಕ್ರಾಟಿಕ್ ಪ್ರವೃತ್ತಿಯೇ ಒಂದು ಜೀವಂತ ಸಂಸ್ಕೃತಿಯನ್ನ ರೂಪಿಸುತ್ತದೆ. ಭಾರತದ ಆದಿಮ ಸಮಾಜಗಳು ಈ ಸ್ವಭಾವವನ್ನು ಮೈಗೂಡಿಸಿಕೊಂಡೇ ಬಂದಿವೆ. ವರ್ತಮಾನದಲ್ಲಿ ಅನೇಕ ವೈಜ್ಞಾನಿಕ ಪರಿಕರಗಳನ್ನ ಹೊಂದಿ 'ಆಧುನಿಕವಾಗಿಬಿಟ್ಟಿದ್ದೇವೆ' ಎಂಬ 'ನಾಗರಿಕ' ಜಗತ್ತಿನ, ಅತಂತ್ರ ನಗರವಾಸಿ ಸಮುದಾಯಗಳಿಗಿಂತ 'ಗುಣಾತ್ಮಕವಾಗಿ' ಈ ಆದಿಮ ಸಮಾಜಗಳು ಬದಲಾವಣೆಗೆ ಪಕ್ಕಾಗುತ್ತವೆ. ಅದಕ್ಕೆ 'ಪರಂಪರೆ' ಮತ್ತು 'ಆಧುನಿಕತೆ' ಎಂಬ ಈ ಎರಡು ಪರಿಕಲ್ಪನೆಗಳು, ಏಕಕಾಲಕ್ಕೆ ಒಂದು ಸಂಸ್ಕೃತಿಯ ಕೋಶದಲ್ಲಿ ಅನುಸಂಧಾನ ನಡೆಸಿ, ಒಂದು ಸಮುದಾಯವನ್ನು

ವರ್ತಮಾನದಲ್ಲಿ ಜೀವಂತವಾಗಿರಿಸುತ್ತವೆ. ಹೀಗಾಗಿ ಒಂದು ಜೀವಂತ ಸಂಸ್ಕೃತಿ 'ಪರಂಪರೆ' ಎಂಬುದನ್ನ 'ಬಿಟ್ಟುಕೊಡುವ', ಆಧುನಿಕತೆಯೆಂಬುದನ್ನ 'ಹೊಂದಲೇಬೇಕೆಂಬ', ಎರಡು ಭಿನ್ನ ಮೌಲ್ಯಗಳೆಂದೇನು ಭಾವಿಸುವುದಿಲ್ಲ.

ಭಾರತದ ಅಲೆಮಾರಿಗಳನ್ನ ಅಧ್ಯಯನ ಮಾಡಲು ಹೊರಟಾಗ ನಮಗೆ ಇದೇ ಬಗೆಯ ವಿಸ್ಮಯ ಕಾಡಿಬಿಡುತ್ತದೆ. ಎಲ್ಲಿಂದಲೋ ವಲಸೆ ಬಂದು, ಆಧುನಿಕ ಪ್ರಭಾವಗಳನ್ನ ಅರಗಿಸಿಕೊಂಡು, ತಮ್ಮ ಸಾಂಸ್ಕೃತಿಕ ಚಹರೆಗಳನ್ನು ಉಳಿಸಿಕೊಂಡು ಬಂದಿರುವ ಲಂಬಾಣಿಗರು ನಮ್ಮ ನಡುವೆ ಇದ್ದಾರೆ. ಬೃಹತ್ ನಗರಗಳ ಕೊಳೆಗೇರಿಗಳಲ್ಲಿ ವಾಸಿಸುವ ಹಕ್ಕಿಪಿಕ್ಕಿಗಳು, ದೊಂಬರು, ಗೋಸಂಗಿಗಳು ಇಂದಿಗೂ ತಮ್ಮ 'ಅನನ್ಯತೆ'ಯನ್ನ ಒಪ್ಪವಾಗಿ ಉಳಿಸಿಕೊಂಡು ಬಂದಿದ್ದಾರೆ. ಹೀಗೆ ಉಳಿದುಕೊಂಡು ಬಂದ ಅವರ ಅನನ್ಯತೆ ಯಾವುದೋ ಓಬಿರಾಯನ ಕಾಲದ ಕಂತೆಯೇನೂ ಅಲ್ಲ. ಅದು ಎಲ್ಲಾ ಬಗೆಯ ಆಧುನಿಕ ಪ್ರಭಾವಗಳನ್ನ ಮುಖಾಮುಖಿಯಾಗಿಯೂ ತನ್ನ ತನವನ್ನ ಉಳಿಸಿಕೊಂಡು ಬಂದ, ಒಂದು ಜೀವಂತ ವೇದಿಕೆ. ಇಂಡಿಯಾದ ಆದಿವಾಸಿಗಳನ್ನ, ಅರ್ಥಮಾಡಿಕೊಳ್ಳಲು ಅಲೆಮಾರಿಗಳನ್ನ ನಾವು ಇದೆ ಬಗೆಯಲ್ಲಿ ಯತ್ನಿಸಬೇಕು.

ಗೋಸಂಗಿಗಳು ಮಹಾರಾಷ್ಟ್ರದ ಮೂಲದವರಾಗಿದ್ದರೂ ಸಹ, ಕರ್ನಾಟಕದ ಸಂಸ್ಕೃತಿಯಿಂದ ಪ್ರಭಾವಿತರಾಗಿಯೂ ತಮ್ಮ ಆದಿಮ ಚಹರೆಗಳನ್ನೇನು ಬಿಟ್ಟುಕೊಟ್ಟಿಲ್ಲ. ಅಲ್ಲದೆ ಅವರು ರೂಢಿಸಿಕೊಂಡ ಆರ್ಥಿಕ ಬದುಕಿನ ಒಂದು ಭಾಗವಾಗಿ ಅವರ ಸಾಂಸ್ಕೃತಿಕ ಜಗತ್ತು ರೂಪಗೊಂಡಿರುತ್ತದೆ. ಭಾಷಿಕವಾಗಿಯೂ ಈ ಬಗೆಯ ಕೊಡುಕೊಳ್ಳುವಿಕೆ ಸದ್ದಿಲ್ಲದೆ ನಡೆದುಹೋಗುತ್ತದೆ. ಈವತ್ತಿನ ಗೋಸಂಗಿಗಳ ಮುರುಗಾ ಭಾಷೆ ಈ ಬಗೆಯ ಕೊಡು ಕೇಳುವ ವ್ಯಾಪಾರದ ಒಂದು ಭಾಗವಾಗಿಯೇ ರೂಪಗೊಂಡಿದೆ. ಅವರಲ್ಲಿನ ಗಾದಿಗಳು, ಒಡಪುಗಳು ಕೆಲವು ವಿಶಿಷ್ಟ ನುಡಿಗಟ್ಟುಗಳು ಕನ್ನಡದ ಸ್ಥಳೀಯ ಭಾಷಿಕ ರೂಪಗಳಿಂದ ಪಡೆದುಕೊಂಡವುಗಳೇ ಆಗಿವೆ. ಅವರು ಆಚರಿಸುವ ದೀಪಾವಳಿ, ಯುಗಾದಿ, ಹೋಳಿ ಹಬ್ಬಗಳು 'ಗೋಸಂಗಿಗಳದೇ' ಎಂಬಷ್ಟು ವಿಶಿಷ್ಟವಾಗಿ ಆಚರಿಲ್ಪಡುತ್ತವೆ. ಹೀಗೆ ಅಲೆಮಾರಿಗಳಿಗೆ ತಮ್ಮದೇ ಆದ ಸಾಂಸ್ಕೃತಿಕ ಚಹರೆಗಳು ಸಹಜವಾಗಿಯೇ ಉಳಿದುಕೊಂಡು ಬಂದಿವೆ.

ಪ್ರತಿಯೊಂದು ಬುಡಕಟ್ಟು ಸಮುದಾಯಗಳಲ್ಲಿದ್ದಂತೆ, ಗೋಸಂಗಿಗಳಲ್ಲಿ ಸಹ ಅನೇಕ ಆಚರಣೆಗಳಿವೆ. ಅವುಗಳನ್ನು ಜೀವನಾವರ್ತನ ಆಚರಣೆಗಳು ಮತ್ತು ವಾರ್ಷಿಕಾವರ್ತನ ಆಚರಣೆಗಳೆಂದು ವಿಂಗಡಿಸಲಾಗಿದೆ. ಜೀವನಾವರ್ತನ ಆಚರಣೆಗಳು ಅವಶ್ಯಕ ವಿಧಿ ವಿಧಾನಗಳಿಂದ, ನಿಶ್ಚಿತ ಸಾಮಾಜಿಕ ಕಟ್ಟುಪಾಡುಗಳಿಂದ, ಜಾತಿಯೊಂದು ರೂಢಿಸಿಕೊಂಡು ಬಂದ ನಿಯಮಗಳ ಮೂಲಕ ಆಚರಿಸಲ್ಪಡುತ್ತವೆ. ವಾರ್ಷಿಕಾವರ್ತನ ಆಚರಣೆಗಳು ಹೆಚ್ಚಾಗಿ ಸಮೂಹ ನಿಷ್ಟವಾದವುಗಳು. ವರ್ಷಕ್ಕೊಂದಾವರ್ತಿ ಈ ಆಚರಣೆಗಳು ಪುನಾರಾವರ್ತನೆಯಾಗುತ್ತಿರುತ್ತವೆ.

## ಹಬ್ಬಗಳು

### ದಸರಾ

ಗೋಸಂಗಿಗಳು ಆಚರಿಸುವ ಪ್ರಮುಖ ಹಬ್ಬಗಳಲ್ಲಿ ದಸರಾವೂ ಒಂದು. ಅಲೆಮಾರಿಗಳಾದ ಗೋಸಂಗಿಗಳು ಈ ಹಬ್ಬದಂದು ಎಲ್ಲರೂ ಒಂದೆಡೆ ಸೇರೆ ಸಾಮೂಹಿಕವಾಗಿ ಹಬ್ಬವನ್ನು ಆಚರಿಸಿ ಮತ್ತೆ ತಮ್ಮ ತಮ್ಮ ಅಲೆಮಾರಿತನಕ್ಕೆ ಅಡಿಹಿಡುವರು. ಇದೇ ಸಂದರ್ಭದಲ್ಲಿ ಮದುವೆಗೆ ಸಂಬಂಧಿಸಿದ ಮಾತುಕತೆಗಳು ನಡೆಯುತ್ತವೆ. ಕೊಲವೊಮ್ಮೆ ಅನುಕೂಲವಾದರೆ ಮದುವೆಗಳು ಸಹ ನಡೆಯುತ್ತವೆ ಹಾಗೂ ಹಳೆಯ ತಂಟೆ ತಕರಾರುಗಳೇನಾದರೂ ಇದ್ದರೆ ಇದೇ ಸಂದರ್ಭದಲ್ಲಿ ಬಗೆಹರಿಸಿಕೊಳ್ಳುತ್ತಾರೆ. ಎಲ್ಲಾ ಬಳಿಯವರು ಈ ಹಬ್ಬವನ್ನು ಆಚರಿಸುತ್ತಿದ್ದು, ಪಡಿಯಾರ ಬಳಿಯವರು ಮಾತ್ರ ಈ ಹಬ್ಬವನ್ನು ಭಿನ್ನವಾಗಿ ಆಚರಿಸುವುದು ಕಂಡುಬರುತ್ತದೆ.

**ಪೂಜಾವಿಧಾನ :** ದಸರಾ ಹಬ್ಬದ ಮುನ್ನಾ ದಿನ ತಮ್ಮ ತಮ್ಮ ಡೇರಾಗಳನ್ನು ಆಕಳು ಸೆಗಣಿಯಿಂದ ಸಾರಿಸಿ .ಸ್ವಚ್ಛಮಾಡುವರು ಇದೇ ಸಂದರ್ಭದಲ್ಲಿ ವಿವಿಧ ದೇವರಗಳನ್ನು ಸಂಕೇತಿಸುವ ಹಳೇ ಬಾವುಟಗಳನ್ನು ತೆಗೆದು ಹೊಸ ಬಾವುಟಗಳನ್ನು ನಿರ್ಮಾಣ ಮಾಡುವರು, ಹಾಗೆಯೇ ಬಾವುಟದ ಕೋಲುಗಳಿಗೂ ಸಹ ಹಳದಿ ಮಿಶ್ರಿತ ಕೆಂಪು ಬಣ್ಣವನ್ನು (ಇದಕ್ಕೆ ಸಿಂಧೂರ ಎಂದು ಕರೆಯುವರು) ಸವರುತ್ತಾರೆ. ಹಬ್ಬದ ಪ್ರಾರಂಭದ ದಿನ ಬೆಳಿಗ್ಗೆ ಒಂದೊಂದು ಕುಟುಂಬದಿಂದ ಮಹಾಲಕ್ಷ್ಮಿ(ಕೊರಡಾವಳಿ) ಗೆ ಐದು ತುಂಡು ಮತ್ತು 'ಮರಿ'(ಸಿರ್ಸಿಮಾರಿಕಾಂಬ)ಗೆ ಎರೆಡು ತುಂಡು ಹೀಗೆ ಒಟ್ಟು ಏಳು ತುಂಡು ಬೆಲ್ಲವನ್ನು ತಂದು ನೈವೇದ್ಯ ಅರ್ಪಿಸಿ ಹಬ್ಬ ಪ್ರಾರಂಭ ಮಾಡುವುದರ ಬಗ್ಗೆ 'ಭಗತ'ನ ಅನುಮತಿಯನ್ನು ಕೇಳುವರು. ಆಗ 'ಭಗತ'ನ ಮೈಯಲ್ಲಿ ದೇವರು ಬಂದು, ಹಬ್ಬ ಆಚರಿಸುವ ವಿಧಾನದ ಬಗ್ಗೆ ವಿವರಣೆಯನ್ನು ನೀಡಿ ಕೆಲವು ನಿಬಂಧನೆಗಳನ್ನು ಸೂಚಿಸಿ ಹಬ್ಬಕ್ಕೆ ಸಿದ್ಧತೆ ಮಾಡಲು ಸೂಚಿಸುವರು. ಭಗತ ಹಾಗೂ ಹಿರಿಯರ ಮಾರ್ಗದರ್ಶನದಂತೆ ಹಬ್ಬ ಆಚರಿಸಲು ಅಣಿಯಾಗುವರು.

ಅಲೆಮಾರಿಗಳಾದ ಗೋಸಂಗಿಗಳು ದಸರಾ ಹಬ್ಬವನ್ನು ಅತ್ಯಂತ ವೈಭವದಿಂದ ಆಚರಿಸುವರು. ತಮ್ಮ ಸಂಚಾರಿ ಜೀವನವನ್ನು ನಿಲ್ಲಿಸಿ, ಎಲ್ಲರೂ ಕೂಡಿ ಈ ಹಬ್ಬವನ್ನು ಒಂದಾಗಿ ಆಚರಿಸುವರು. ಹಬ್ಬ ಆಚರಿಸುವ ಮುನ್ನ ಎಲ್ಲರೂ ಒಂದು ಕಡೆ ಸೇರಿ ಚರ್ಚಿಸಿ ಒಬ್ಬೊಬ್ಬರು ಒಂದೊಂದು ಕೆಲಸಗಳನ್ನು ಹಂಚಿಕೊಂಡು ಯಾವುದೇ ರೀತಿಯ ಅನಾನುಕೂಲಗಳಿಗೆ ಎಡೆಮಾಡಿಕೊಡದೇ ಕುಲದ ನಿಯಮಗಳಿಗೆ ಬದ್ಧರಾಗಿ ಪರಸ್ಪರ ಸಹಕಾರದೊಂದಿಗೆ ದಸರಾವನ್ನು ಆಚರಣೆಮಾಡುವರು. ಹಬ್ಬದ ಮೊದಲ ದಿನ ಅಮವಾಸೆಯಂದು ಐದಾರು ಜನ ಯುವಕರು ಕೂಡಿ ಯಾರೂ ಸಂಚರಿಸದೇ ಇರುವ ಸ್ಥಳದಲ್ಲಿ ಕೇಡಿಮಣ್ಣನ್ನು ತರಲು ಹೋದರೆ ಮತ್ತೆ ಕೆಲವರು ಪ್ರತ್ಯೇಕವಾದ ಜಾಗವನ್ನು ಸ್ವಚ್ಛಮಾಡಿ ಆಕಳ ಸಗಣಿಯಿಂದ ಸಾರಿಸಿ ದೊಡ್ಡದಾದ ಡೇರಾವನ್ನು ನಿರ್ಮಿಸಿ ಅದರಲ್ಲಿ ಖಡ್ಯಾದೇವಿ, ಸಿರ್ಸಿಮಾರಿ, ಸಿತಳಾ ಮುನ್ನುಳಿದ ದೈವಗಳನ್ನು ಸಾಂಕೇತಿಸುವ ವಿವಿಧ ಬಣ್ಣದ ಬಾವುಟಗಳನ್ನು ಸ್ಥಾಪಿಸುವರು. ಪ್ರತಿಯೊಂದು

ಬಾವುಟದ ಮುಂದೆ ಜೇಡಿ ಮಣ್ಣಿನಿಂದ ಗದ್ದಿಗೆಯನ್ನು ಸ್ಥಾಪಿಸುವರು. ನಂತರ ಕುಂಬಾರನ ಮನೆಯಿಂದ ಮಣ್ಣಿನ ಕುಡಿಕೆಗಳನ್ನು ತಂದು ಪ್ರತಿಯೊಂದು ದೇವರ ಗದ್ದುಗೆಯ ಮುಂದೆ ಗೋದಿ ಕಲೆಸಿದ ಮಣ್ಣಿನ ಮೇಲೆ ತಂದಂತಹ ಕುಡಿಕೆಗಳನ್ನಿಟ್ಟು ಒಂದಕ್ಕೆ ಐದರಂತೆ ವೀಳ್ಯದೆಲೆ ಹಾಗೂ ಒಂದೊಂದು ತೆಂಗಿನ ಕಾಯನ್ನಿಟ್ಟು ಕಳಸ ತುಂಬುವರು. ಇದಕ್ಕೆ ಅವರು 'ಘಟ' ಸ್ಥಾಪನೆ ಎಂದು ಕರೆಯುವರು. ಕಳಸದ ಕೆಳಗೆ ಗೋದಿ ಕಲೆಸಿದ ಮಣ್ಣಿಗೆ ದಿನಾಲು ನೀರುಣಿಸುವುದರಿಂದ ಹಬ್ಬ ಮುಗಿಯುವಷ್ಟೊತ್ತಿಗೆ ಗೋದಿ ಮೊಳಕೆಯೊಡೆದು ಸಸಿಯಾಗಿರುತ್ತದೆ. ಉಳಿದೆಲ್ಲಾ ಗದ್ದುಗೆಗಿಂತ ಖಡ್ಯಾದೇವಿ(ಚಾಮುಂಡಿ)ಯ ಗದ್ದುಗೆ ದೊಡ್ಡದಾಗಿರುತ್ತದೆ. ಈ ಹಬ್ಬದಲ್ಲಿ ಅದಕ್ಕೆ ವಿಶೇಷ ಪೂಜೆ ಸಲ್ಲುತ್ತದೆ. ಖಡ್ಯಾದೇವಿ ಗದ್ದಿಗೆ ಮೇಲೆ ಖಡ್ಗ, ಚಾಮುಂಡಿ ಹಾಗೂ ಸಪ್ತಕನ್ನಿಕೆಯರ ಬೆಳ್ಳಿಮೂರ್ತಿಗಳನ್ನಿಟ್ಟಿರುತ್ತಾರೆ. ಇದರ ಎದುರಿಗೆ ಜೇಡಿಮಣ್ಣಿನಿಂದ ಆನೆಯೊಂದನ್ನು ತಯಾರಿಸಿಡುರು. ಖಡ್ಯಾದೇವಿ ಗದ್ದುಗೆಯ ಪಕ್ಕ ಒಂದು ಚಿಕ್ಕದಾದ ಬಂಡೆಯನ್ನು ಅಡ್ಡವಿಟ್ಟು ಅದರ ಪಕ್ಕ (ಬಲಭಾಗಕ್ಕೆ) ಬಡೀದೇವ್ (ಕೊಲ್ಲಾಪುರ ಮಹಾಲಕ್ಷ್ಮಿ) ಸಿತಳಾ (ಎಲ್ಲಮ್ಮ) ಹಿರೇಕೇರಿ (ದುರ್ಗಾದೇವಿ) ಹಾಗೂ ಶಿವನಮೂರ್ತಿಯನ್ನು ಪ್ರತಿಷ್ಠಾಪಿಸುವರು.

'ಸಾಲ ಮಾಡಿಯಾದರೂ ತುಪ್ಪದೂಟ ಮಾಡು' ಎಂಬ ಜನಪದ ಗಾದೆಯಂತೆ ಎಷ್ಟೇ ಕಡು ಬಡವರಾದರೂ ಈ ಹಬ್ಬಕ್ಕೆ ಏನೂ ಕೊರತೆಯುಂಟಾಗದಂತೆ ನೋಡಿಕೊಳ್ಳುವರು. ಅತ್ಯಂತ ಕಡು ಬಡತನದಲ್ಲಿರುವ ಗೋಸಂಗಿಗಳು ಇಂದೂ ಸಹ ದಸರಾ ಹಬ್ಬದ ಪ್ರಾರಂಭದಿಂದ ಹಿಡಿದು ಮುಗಿಯುವವರೆಗೆ ತುಪ್ಪದಿಂದಲೇ ದೀಪ ಹಚ್ಚುವರು. ಏಳುದಿನಗಳ (ಕೆಲವು ಬಳಿಯವರು ಒಂಬತ್ತುದಿನ)ವರೆಗೆ ದೀಪ ಆರದಂತೆ ನೋಡಿಕೊಳ್ಳುವರು. ಅಂದು ಕುಂಬಾರನ ಮನೆಯಿಂದ ದೊಡ್ಡ (ಎರಡು ಅಥವಾ ಮೂರು ಕೊಡ ನೀರಿಡಿಸುವಷ್ಟು ದೊಡ್ಡದಾದ) ಗಡಿಗೆಯನ್ನು ತಂದು ದೇವರ ಡೇರಾದಲ್ಲಿಟ್ಟು, ಅದಕ್ಕೆ ಪೂಜೆ ಮಾಡಿ ಅದರಲ್ಲಿ ಸ್ವಲ್ಪ ಮೊಸರನ್ನು ಹಾಕಿ, ಅಂದಿನಿಂದ ಹಬ್ಬ ಮುಗಿಯವವರೆಗೂ ಅವರ ಶಕ್ತಾನುಸಾರ ಹಾಲನ್ನು ತಂದು ಗಡಿಗೆಯಲ್ಲಿ ಹಾಕಿ ಮೀಸಲಿಡುವರು. ಹೀಗೆ ಏಳುದಿನಗಳವರೆಗೆ ಮೀಸಲಿಟ್ಟು ಹಾಲು ಹೆಪ್ಪಾಗಿರುತ್ತದೆ. ಅದನ್ನು ಹಬ್ಬದ ಕೊನೆಯ ದಿನದಂದು ಸಮುದಾಯದ ಎಲ್ಲರೂ ಪ್ರಸಾದದ ಜೊತೆಗೆ ಬಳಸುವರು. ಈ ಸಂದರ್ಭದಲ್ಲಿ 'ಭಗತ'(ಪೂಜಾರಿ) ಒಪ್ಪತ್ತಿರು(ಉಪವಾಸ)ತ್ತಾನೆ. ದೇವರಿಗೆ ಒಂದು ಜೋಳದ ರೊಟ್ಟಿ ಹಾಗೂ ಮೆಣಸಿನ ಚಟ್ನಿಯನ್ನು ನೈವೇದ್ಯವಾಗಿ ಅರ್ಪಿಸಿ, ಸಂಜೆ ಮೂರು ಗಂಟೆಯ ನಂತರ ಭಗತ ಊಟಮಾಡಬಹುದು. ಮತ್ತೆ ಊಟ ಮಾಡಬೇಕಾದರೆ ಮರುದಿನ ದೇವರಿಗೆ ನೈವೇದ್ಯ ಅರ್ಪಿಸಿದ ಮೇಲೆಯೇ ಊಟ ಮಾಡಬೇಕು. ಹೀಗೆ ಹಬ್ಬ ಮುಗಿಯವವರೆಗೆ 'ಭಗತ' ಅತ್ಯಂತ ನೇಮ ನಿಷ್ಟೆಯಿಂದಿರುವನು. ಈ ಸಂದರ್ಭದಲ್ಲಿ ಸಮುದಾಯದ ಪುರುಷರೆಲ್ಲರು ದೇವಿಯ ಸನ್ನಿಧಿಯಲ್ಲೇ ಮಲಗಬೇಕು. ಪುರುಷರು ಸ್ತ್ರೀಯರ ಹತ್ತಿರ ಮಲಗಬಾರದೆಂಬ ನಿಯಮವಿದೆ. ಹಾಗಾಗಿ ದಸಾರಾ ಮುಗಿಯವವರೆಗೆ ಪುರುಷರೆಲ್ಲರೂ ದೇವರ ಸನ್ನಿಧಿಯಲ್ಲಿ ಇದ್ದು ರಾತ್ರಿಯೆಲ್ಲಾ ಭಜನೆ ಮಾಡುತ್ತಾ ಜಾಗರಣೆ ಮಾಡುವರು.

ಹಬ್ಬ ಇನ್ನು ಮೂರು ದಿನಕ್ಕೆ ಮುಗಿಯುತ್ತದೆ ಎನ್ನುವಾಗ ದೇವರ ಎಡೆಗೆ ಗೋದಿ ಬೀಸಲು ಪ್ರಾರಂಭಿಸುತ್ತಾರೆ. ದೇವರ ಬಗ್ಗೆ ಅಪಾರ ಭಯ, ಭಕ್ತಿಯನ್ನು ಹೊಂದಿರುವ ಗೋಸಂಗಿಗಳು ಎಡೆಗೆ ಗೋದಿ ಬೀಸುವಾಗಿನಿಂದ ಹಿಡಿದು ಎಡೆ ಅರ್ಪಿಸುವವರೆಗೂ ಆಚರಣೆ ಕ್ರಮದಲ್ಲಿ ಯಾವುದೇ ರೀತಿಯ ದೋಷ ಉಂಟಾಗದಂತೆ ಎಚ್ಚರವಹಿಸುವರು. ಯಾವ ಬಳಿಯವರು ಈ ಪೂಜೆಯನ್ನು ಮಾಡುತ್ತಾರೋ ಅವರೇ ಗೋದಿಯನ್ನು ಬೀಸಬೇಕೆಂಬ ನಿಯಮವಿದೆ. ಇಲ್ಲಿ ಬೇರೆ ಬಳಿಯವರಿಗೆ ಪ್ರವೇಶವಿಲ್ಲ. ಗೋದಿ ಬೀಸುವಾಗ ಬಾಯಿಗೆ ಬಟ್ಟೆ ಕಟ್ಟಿಕೊಂಡು ಬೀಸಬೇಕು. ಹೀಗೆ ಬೀಸಿದ ೨೫ ಸೇರು ಗೋದಿ (ತಮ್ಮತಮ್ಮ ಶಕ್ತ್ಯಾನುಸಾರ ಗೋದಿಯನ್ನು ತಂದು ಬೀಸಿ ಎಡೆಕೊಡುವರು)ಯ ಹಿಟ್ಟನ್ನು ಹಬ್ಬದ ಕೊನೆಯದಿನ ಶುದ್ಧವಾದ ನೀರಿನಿಂದ ಕಲೆಸಿ ಅಂದು ಬೆಳಗ್ಗೆ ಹನ್ನೊಂದು ಗಂಟೆಯಿಂದ ರೊಟ್ಟಿಮಾಡಲು ಆರಂಭಿಸುವರು. ಈ ಸಂದರ್ಭದಲ್ಲೂ ಸಹ ಒಂದೇ 'ಬಳಿ'ಗೆ ಸೇರಿದ ಹೆಣ್ಣುಮಕ್ಕಳು ಬಾಯಿಗೆ ಬಟ್ಟೆಕಟ್ಟಿಕೊಂಡು ಮಾತಾಡದಂತೆ, ಉಗುಳು ಬೀಳದಂತೆ ಎಚ್ಚರಿಕೆವಹಿಸಿ ರೊಟ್ಟಿಯನ್ನು ನೈವೇದ್ಯಕ್ಕೆ ಸಿದ್ಧಮಾಡುವರು. ಹೀಗೆ ಸಿದ್ಧಪಡಿಸಿದ ಗೋದಿರೊಟ್ಟಿಯನ್ನು ಅನುಭವವಿರುವ ಹಾಗೂ ನೇಮನಿಷ್ಠೆಯಿಂದಿರುವ ಇಬ್ಬರು ಹಿರಿಯರು ಕೂಡಿ ಆ ಗೋದಿ ರೊಟ್ಟಿಯಲ್ಲಿನ ರಂಧ್ರಗಳನ್ನು ಪರೀಕ್ಷಿಸುವರು. ರಂಧ್ರಗಳಿರುವ ರೊಟ್ಟಿಗಳು ದೇವರ ನೈವೇದ್ಯಕ್ಕೆ ಯೋಗ್ಯವಲ್ಲ ಎಂಬ ನಂಬಿಕೆ ಇವರಲ್ಲಿದೆ. ನಂತರ ಇನ್ನಿಬ್ಬರು ಹಿರಿಯರು ರಂಧ್ರಗಳಿಲ್ಲದ ರೊಟ್ಟಿಗಳ ಎರಡೂ ಬದಿಗೆ ತುಪ್ಪವನ್ನು ಸವರಿ 'ಭಗತ'ನ ಕೈಗೆ ಕೊಡುವರು. ಭಗತ ವಿಶಿಷ್ಟವಾದ ಕ್ರಮವೊಂದನ್ನು ಅನುಸರಿಸಿ ಎಡೆ ಇಡುವನು.



ದಸರಾ ಹಬ್ಬದ ಎಡೆ ಹಿಡಿಯುವ ಚಿತ್ರ

ಮೊದಲ ಸಾಲಿನಲ್ಲಿ ಏಳುಗುಂಪು ರೊಟ್ಟಿಗಳಿದ್ದು ಒಂದೊಂದು ಗುಂಪಿನಲ್ಲಿ ಏಳೇಳು ರೊಟ್ಟಿಗಳಿರುತ್ತವೆ. ನಂತರದ ಸಾಲಿನಲ್ಲಿ ಆರುಗುಂಪು ರೊಟ್ಟಿಗಳಿದ್ದು ಒಂದೊಂದು ಗುಂಪಿನಲ್ಲಿ ಆರಾರು ರೊಟ್ಟಿಗಳಿರುತ್ತವೆ. ಹೀಗೆ ಏಳರಿಂದ ಒಂದರವರೆಗೂ ಒಂದೊಂದು ರೊಟ್ಟಿ ಕಡಿಮೆ ಮಾಡುತ್ತಾ ಹೋಗುತ್ತಾನೆ. (೭-೭-೭-೭-೭-೭-೭, ೬-೬-೬-೬-೬-೬, ೫-೫-೫-೫-೫, ೪-೪-೪-೪, ೩-೩-೩, ೨-೨, ೧,) ಹೀಗೆ ಕ್ರಮವನ್ನನುಸರಿಸಿ ಎಡೆ ಇಟ್ಟನಂತರ ಉಳಿದ ರೊಟ್ಟಿಗಳನ್ನ ಒಂದೊಂದಾಗಿ (ತುಪ್ಪಹಚ್ಚಿದ) ಡೇರಾದ (Tent) ತುಂಬಾ ಒಂದಕ್ಕೊಂದು ತಾಗುವಂತೆ ನೆಲದ ಮೇಲೆ ಉದ್ದಕ್ಕೆ ಹಾಸುವರು. ನಂತರ ಪ್ರತಿಯೊಂದು ರೊಟ್ಟಿಯ ಮೇಲೆ ಒಂದೊಂದು ಹಿಡಿ ಮೀಸಲು ಅನ್ನವನ್ನು ಇಟ್ಟು ಅದರ ಮೇಲೆ ಒಂದೊಂದು ತುಂಡು ಬೆಲ್ಲ, ಬೆಲ್ಲದ ಮೇಲೆ ಒಂದೊಂದು ಚಮಚದಷ್ಟು ತುಪ್ಪ ಹಾಗೂ ಗೋದಿ ಸಸಿಯನ್ನು ಹಾಕಿ ಎಡೆಹಿಡುವರು.

ಎಡೆ ಸಿದ್ಧವಾದ ನಂತರ ಡೇರಾದ ಪ್ರವೇಶ ದ್ವಾರದಲ್ಲಿ ಒಂದು ಚಿಕ್ಕದಾದ ಚೌಕಾಕಾರದ ಹೋಮದ ಗುಂಡಿಯನ್ನು ತೋಡಿ ಅದರಲ್ಲಿ ಸ್ವಲ್ಪ ಬೆಂಕಿಕೆಂಡಗಳನ್ನು ಹಾಕಿ ಧೂಪ (ಲೊಬಾನ) ಹಾಕುವರು ನಂತರ ನೆರೆದ ಭಕ್ತಾದಿಗಳು 'ಉಧೇ ಖಿಡ್ಯಾದೇವಿ' ಎಂದು ಜಯಕಾರ ಹಾಕುತ್ತಿದ್ದಂತೆ ಭಗತನ ಮೈಯಲ್ಲಿ ದೇವಿ ಬರುತ್ತದೆ. ಆಗ ಆತ ತಲೆಯನ್ನು ಹಿಂದು ಮುಂದಾಡಿಸುತ್ತಾ ಕುಳಿತು ದೇಕುತ್ತಾ ಚಿಕ್ಕದಾದ ಅಗ್ನಿಕುಂಡವನ್ನು ದಾಟಿ ಮುಂದೊಗಿ ಕುಳಿತು ಮತ್ತೆ ತಲೆಯನ್ನು ಜೋರಾಗಿ ಹಿಂದು ಮುಂದಾಡಿಸುತ್ತಾ ಗುನುಗುವನು. ನೆರೆದವರು ಅತ್ಯಂತ ಭಕ್ತಿಯಿಂದ ತಮಗೊದಗಿದ ತೊಂದರೆ ತಾಪತ್ರಯಗಳ ಬಗ್ಗೆ ಕೇಳಿಕೊಳ್ಳುತ್ತಾರೆ. ಮಕ್ಕಳಿಲ್ಲದವರು ಮಕ್ಕಳ ಫಲ, ವ್ಯಾಪಾರಕ್ಕೆ ಹೋಗುವವರು ಯಾವ ಕಡೆ ವ್ಯಾಪಾರ ಸುಗಮ, ಯಾವ ದಿಕ್ಕಿಗೆ ಹೋದರೆ ತಮ್ಮ ಜೀವನ ಸುಗಮ ಹೀಗೆ ಹಲವು ಹತ್ತು ವಿಷಯಗಳ ಬಗ್ಗೆ ಭಗತನಲ್ಲಿ ಕೇಳಿಕೊಳ್ಳಲಾಗುತ್ತದೆ. ಅದಕ್ಕೆ ಭಗತನಿಂದ ಬಂದ ಪ್ರತಿಕ್ರಿಯೆಗನುಸಾರವಾಗಿ ನಡೆದುಕೊಳ್ಳುತ್ತಾರೆ. ಭಗತ ತಮ್ಮ ಮೈಯಲ್ಲಿ ದೇವರು ಇರುವವರೆಗೆ ಹೇಳಿಕೆಗಳನ್ನು ನೀಡಿ ಯಥಾಸ್ಥಿತಿಗೆ ಮರಳಿದ ನಂತರ ಎಡೆ ಇಟ್ಟ ಎಲ್ಲಾ ರೊಟ್ಟಿಗಳನ್ನು ಮುಟ್ಟಿ ಸ್ವಲ್ಪ ಸ್ಥಳಾಂತರಿಸಿ ಎಡೆ ಎತ್ತುವನು. ಈತನಿಗೆ ಸಹಾಯಕರಾಗಿ ಇಬ್ಬರು ನಿಂತು ರೊಟ್ಟಿಮೇಲಿನ ಗೋದಿಸಸಿ ಬೆಲ್ಲ, ಅನ್ನವನ್ನು ಬೇರೆ ಬೇರೆಯಾಗಿ ಬೇರ್ಪಡಿಸುವರು. ಭಗತ ಪ್ರಸಾದವನ್ನು ಸ್ವೀಕರಿಸಿದ ನಂತರ ದೊಡ್ಡ ಹಿತ್ತಾಳೆ 'ಪರಾತ್'ನಲ್ಲಿ ದೇವರಿಗೆ ಎಡೆ ಇಟ್ಟಿದ್ದ ಗೊದಿರೊಟ್ಟಿ, ಬೆಲ್ಲ, ತುಪ್ಪ, ಅನ್ನ ಹಾಗೂ ಮೀಸಲು ಮೊಸರನ್ನ ಹಾಕಿ ಏಳು ವರ್ಷದೊಳಗಿನ ಹೆಣ್ಣುಮಕ್ಕಳನ್ನು ಕೂಡಿಸಿ ತೃಪ್ತಿಯಾಗುವವರೆಗೆ ಉಣಬಡಿಸುವರು. ಮಕ್ಕಳು ತೃಪ್ತಿಯಾಗುವವರೆಗೆ ಊಟ ಮಾಡಿದನಂತರ ಉಳಿದವರಿಗೆ ಪ್ರಸಾದವನ್ನು ಹಂಚುವರು. ಯಾವ ಬಳಿಯವರು ಈ ಹಬ್ಬವನ್ನು ಆಚರಿಸುವರೋ ಅವರಿಗೆ ಮಾತ್ರ ಈ ಪ್ರಸಾದ ಸಲ್ಲುತ್ತದೆ. ಬೇರೆ ಬಳಿಯವರಿಗೆ ಪ್ರಸಾದವನ್ನು ಕೊಡುವಂತಿಲ್ಲ. ಉದಾ: ಖಾಗಳ್ ಬಳಿಯವರು ದಸರಾ ಆಚರಣೆ ಮಾಡಿದರೆ ಅವರ ರಕ್ತ ಸಂಬಂಧಿಕರು ಅಥವಾ ಅದೇ ಬಳಿಯವರು ಯಾರಾದರೂ ಪ್ರಸಾದ ಸ್ವೀಕರಿಸಬಹುದು. ಉಳಿದ ಬಳಿಯವರು ಸ್ವೀಕರಿಸುವಂತಿಲ್ಲ. ಅಷ್ಟೇ ಏಕೆ, ಖಾಗಳ್ ಬಳಿಯವರ ಮನೆಗೆ ಸೊಸೆಯಾಗಿ

ಬಂದವಳಿಗೂ ಸಹ ನೈವೇದ್ಯ ಕೊಡುವಂತಿಲ್ಲ. ಚುರುಮಾದಿಂದ ಉಂಡೆಮಾಡಿ (ತುಪ್ಪ ಬಳಸದೇ) ಸಪ್ತಕನ್ನಿಕೆಯರಿಗೆ ಎಡೆಮಾಡಿದ ಏಳು ಉಂಡೆಗಳನ್ನು ಬೇಕಾದರೆ ಬೇರೆ ಬಳಿಯವರಿಗೆ ಪ್ರಸಾದವಾಗಿ ಕೊಡಬಹುದು.

ಎಲ್ಲರೂ ಪ್ರಸಾದ ಸ್ವೀಕರಿಸಿದ ನಂತರ ಪ್ರಸಾದವೇನಾದರು ಉಳಿದಿದ್ದರೆ ಅದನ್ನು ಯಾರಿಗೂ ಕೊಡುವುದಿಲ್ಲ, ನಾಯಿಗಳಿಗೂ ಹಾಕುವಂತಿಲ್ಲ ಹಾಗೂ ಮರುದಿನಕ್ಕೂ ಉಳಿಸುವಂತಿಲ್ಲ. ಅದು ಎಷ್ಟೇ ಉಳಿದಿರಲಿ ದೇವರ ಡೇರಾದ ಪಕ್ಕ ಒಂದು ಗುಂಡಿಯನ್ನು ತೋಡಿ ಅದರಲ್ಲಿ ಹಾಕಿ ಮುಚ್ಚಿ, ನಾಯಿ ನರಿ ಕೆದರದಂತೆ ಎಚ್ಚರವಹಿಸುವರು. ಅಷ್ಟೇ ಅಲ್ಲ. ಪ್ರಸಾದ ಸ್ವಿಕರಿಸಿದ ನಂತರ ಕೈಯನ್ನು ಸಹ ಹೊರಗಡೆ ತೊಳೆಯುವಂತಿಲ್ಲ ಗುಂಡಿಯಲ್ಲೇ ಕೈ ತೊಳೆದುಕೊಳ್ಳಬೇಕು. ಒಂದು ವೇಳೆ ಪ್ರಸಾದವನ್ನು ಬೇರೆಯವರಿಗೆ ಕೊಟ್ಟದ್ದೇ ಆದರೆ ನಾಯಿ ನರಿಗಳಿಗೆ ಮುಟ್ಟಿಸಿದ್ದೇ ಆದರೆ ಹೊರಗಡೆ ಕೈ ತೊಳೆದುಕೊಂಡದ್ದೇ ಆದರೆ ಕೇಡಂತೂ ತಪ್ಪಿದ್ದಲ್ಲ ಎಂಬ ಬಲವಾದ ನಂಬಿಕೆ ಇರುವುದರಿಂದ ಅವರ ಆಚರಣೆಯ ಪ್ರತಿಯೊಂದು ಹಂತದಲ್ಲೂ ಅತ್ಯಂತ ಎಚ್ಚರಿಕೆಯನ್ನು ವಹಿಸಿ ಆಚರಣಾ ವಿಧಿಗೆ ಎಲ್ಲಿಯೂ ಅಪಚಾರವಾಗದಂತೆ ನೋಡಿಕೊಳ್ಳುವರು.

ಪೂಜೆಯೆಲ್ಲಾ ಮುಗಿದ ನಂತರ ಒಂದು ಟೋಪಲಾ (ಬಿದಿರು ಪುಟ್ಟಿ) ತೆಗೆದುಕೊಂಡು ಖಡ್ಕಾದೇವಿ ಮತ್ತು ಸಪ್ತಕನ್ನಿಕೆಯರ ಬೆಳ್ಳಿ ವಿಗ್ರಹ, ಎರಡು ಚಿಕ್ಕ ಆನೆಗಳ ವಿಗ್ರಹ, ಎರೆಡು ಚಿಕ್ಕ ತೆಂಗಿನಕಾಯಿ, ಒಂದು ಗಂಧದ ತುಂಡು, ಏಳು ಅರಿಶಿಣ ಕೊಂಬು, ಏಳು ಉತ್ತತ್ತಿ, ಏಳು ಬೆಟ್ಟಡಿಕೆ ಹಾಗೂ ಹಳೇ ನಾಣ್ಯಗಳನ್ನು ಕೆಂಪು ಬಟ್ಟೆಯಲ್ಲಿ (ಈ ಬಟ್ಟೆಗೆ 'ಕಾರವಾರ್ ಲುಗಡೋ' ಎಂದು ಕರೆಯುವರು) ಭದ್ರವಾಗಿ ಸುತ್ತಿ ಬುಟ್ಟಿಯಲ್ಲಿಟ್ಟು, ಆ ಬುಟ್ಟಿಯನ್ನು ಮತ್ತೊಂದು ಕೆಂಪು ಬಟ್ಟೆಯಲ್ಲಿಟ್ಟು ಭದ್ರವಾಗಿ ಕಟ್ಟಿ ಕೆಂಪು ಬಾವುಟವಿರುವ ಕೋಲಿಗೆ ಕಟ್ಟುವರು. ನಂತರ ಖಡ್ಗವನ್ನು ಸಹ ಕೆಂಪು ಬಟ್ಟೆಯಿಂದ ಸುತ್ತಿ ಕೋಲಿಗೆ ಕಟ್ಟಿ ಮೊದಲಿನ ಸ್ಥಳಕ್ಕೆ ಸ್ಥಳಾಂತರಿಸುವರು. ಹೀಗೆ ಪ್ರತಿವರ್ಷ ದಸರಾವನ್ನು ಅತ್ಯಂತ ವೈಭವಯುತವಾಗಿ ಆಚರಿಸುವರು.

**ಪಡಿಯಾರ ಬಳಿಯವರ ಪೂಜಾವಿಧಾನ**

ಗೋಸಂಗಿ ಸಮುದಾಯ ಪಡಿಯಾರ ಬಳಿಯವರಿಗೆ ಮೈಲಾರಲಿಂಗ ಮನೆದೇವರಾಗಿದ್ದು, ದಸರಾ ಹಬ್ಬದಂದು ಈತನೆಗೆ ವಿಶೇಷ ಪೂಜೆ ಸಲ್ಲುತ್ತದೆ. ಈ ಹಬ್ಬವನ್ನು ಉಳಿದ ಬಳಿಯವರಿಗಿಂತ ವಿಶಿಷ್ಟ ರೀತಿಯಲ್ಲಿ ಆಚರಿಸುವರು. ಅಮವಾಸೆಯಿಂದ ಆರಂಭವಾಗುವ ಈ ಹಬ್ಬ ಒಂಬತ್ತು ದಿನಗಳ ಕಾಲ ನಡೆಯುತ್ತದೆ. ಹಬ್ಬ ಸಮೀಪಿಸುತ್ತಿದ್ದಂತೆ ಡೇರಾ ಹಾಗೂ ಸುತ್ತಮುತ್ತಲಿನ ಪ್ರದೇಶವನ್ನು ಸಾರಿಸಿ ಸ್ವಚ್ಛಮಾಡಿ, ಪ್ರತ್ಯೇಕ ಸ್ಥಳದಲ್ಲಿ ದೊಡ್ಡದಾದ ಒಂದು ಡೇರಾವನ್ನು ನಿರ್ಮಿಸಿ, ಅದರಲ್ಲಿ ಜೇಡಿ ಮಣ್ಣಿನಿಂದ ಚಿಕ್ಕಚಿಕ್ಕ ಗದ್ದುಗೆಗಳನ್ನು ನಿರ್ಮಿಸುವರು ನಂತರ ಮೈಲಾರಲಿಂಗನ ಗದ್ದುಗೆಯ ಎಡಭಾಗಕ್ಕೆ 'ಬುಡುಬಾ'(ಹಿರಿಯ) ಬಲಭಾಗಕ್ಕೆ 'ಪೀರಸ್ವಾಮಿ' ಮೂರ್ತಿಗಳನ್ನು ಸ್ಥಾಪಿಸಿ ಪಕ್ಕಕ್ಕೆ ಸಿತಳಾ, ಬಡಿದೇವ್

ಇನ್ನಿತರೆ ದೈವಗಳನ್ನು ತಂದು ಪ್ರತಿಷ್ಠಾಪಿಸುವರು. ನಂತರ ಕುಂಬಾರನ ಮನೆಯಿಂದ ಮಣ್ಣಿನ ಹೊಸ ಕುಡಿಕೆಗಳನ್ನು ತರುವರು. ದೇವರ ಮುಂದೆ ಮಣ್ಣಿನಲ್ಲಿ ಗೋದಿಯನ್ನು ಕಲೆಸಿ ಚಿಕ್ಕಚಿಕ್ಕ ಗುಡ್ಡೆಗಳನ್ನು ಮಾಡಿ, ಕುಂಬಾರನ ಮನೆಯಿಂದ ತಂದ ಕುಡಿಕೆಗಳಲ್ಲಿ ನೀರನ್ನು ತುಂಬಿ ಅದರ ಮೇಲಿಡುವರು. ನಂತರ ಪ್ರತಿಯೊಂದು ಕುಡಿಕೆಯ ಮೇಲೆ ಐದೈದು ವೀಳ್ಯದೆಲೆಗಳನ್ನು ಅಥವಾ ಮಾವಿನ ಎಲೆಗಳನ್ನು ಇಟ್ಟು ಅದರ ಮೇಲೆ ಒಂದೊಂದು ತೆಂಗಿನ ಕಾಯಿಯನ್ನಿಟ್ಟು ಕಳಸ ತುಂಬುವರು. ಇದಕ್ಕೆ 'ಘಟಸ್ಥಾಪನೆ' ಎಂದು ಕರೆಯುವರು.ಇದೇ ಸಂದರ್ಭದಲ್ಲಿ ಪ್ರತಿ ದೇವರ ಪಟ(ಬಾವುಟ)ಗಳನ್ನು ಬದಲಾಯಿಸುವರು. ಅಂದು ಸಂಜೆ ಐದು ಗಂಟೆಗೆ ಹಿರಿಯನ ಸಮ್ಮುಖದಲ್ಲಿ ಸಮುದಾಯದವರೆಲ್ಲ ಸೇರಿ ಹಬ್ಬ ಆಚರಿಸುವ ಬಗ್ಗೆ ಮಾತುಕತೆ ನಡೆಸಿ, ತಮ್ಮ ಸಮುದಾಯದವನೇ ಆದ 'ಭಗತ'(ಪೂಜಾರಿ)ನನ್ನು ಕರೆದು ಆತನ ಸೊಂಟಕ್ಕೆ ಕೆಂಪುಬಟ್ಟೆಯನ್ನು ಕಟ್ಟಿ ಅದರಲ್ಲಿ ಚಿಕ್ಕಚಿಕ್ಕ ಒಣಕೊಬ್ಬರಿ ತುಂಡುಗಳನ್ನು ಹಾಕಿ ಉಡಿತುಂಬಿಸುವರು. ನಂತರ 'ಭಗತ' ಉಡಿಯಲ್ಲಿನ ಕೊಬ್ಬರಿಯನ್ನು ತನ್ನೆರಡು ಕೈಗಳಿಂದ (ಮುಷ್ಠಿಹಿಡಿದು) ಐದು ಸಲ ಮೈಲಾರಲಿಂಗನಿಗೆ ಅರ್ಪಿಸಿ, ಉಳಿದ ಕೊಬ್ಬರಿಯನ್ನು ಹೊರ ಚೆಲ್ಲುವನು. ಹೀಗೆ ಚೆಲ್ಲಿದ ಕೊಬ್ಬರಿ ತುಂಡುಗಳನ್ನು ಭಕ್ತಾದಿಗಳು ಆಯ್ದುಕೊಂಡು ಪ್ರಸಾದವೆಂದು ಸ್ವೀಕರಿಸುವರು. ಇದಾದ ಸ್ವಲ್ಪ ಹೊತ್ತಿಗೆ ಭಗತನ ಮೈಯಲ್ಲಿ ದೇವರು ಬಂದು. ವಿಧಿ-ವಿಧಾನಗಳನ್ನು ಅನುಸರಿಸಿ ಹಬ್ಬವನ್ನು ಆಚರಿಸುವಂತೆ ಸೂಚಿಸುವನು. ಹಬ್ಬ ಮುಗಿಯುವವರೆಗೆ ಮಾಂಸ ತಿನ್ನುವುದಾಗಲಿ, ಕುಡಿಯುವುದಾಗಲಿ ಹೆಂಡತಿಯರ ಜೊತೆ ಮಲಗುವುದಾಗಲಿ ನಿಷಿದ್ಧ. ಸಮುದಾಯದ ಎಲ್ಲಾ ನಿಯಮಗಳನ್ನು ಎಲ್ಲಾರೂ ಕಡ್ಡಾಯವಾಗಿ ಪಾಲಿಸಲೇಬೇಕು. ಯಾರಾದರೂ ಉಲ್ಲಂಘಿಸಿದರೆ ಅಂತವರು ಕಠಿಣ ಶಿಕ್ಷೆಗೆ ಗುರಿಯಾಗುತ್ತಾರೆ.

ಹಬ್ಬ ಪ್ರಾರಂಭಿಸಲು ಭಗತ ಹಾಗೂ ಹಿರಿಯದೈವಗಳ ಅನುಮತಿಯನ್ನು ಪಡೆದ ನಂತರ ಮೈಲಾರಲಿಂಗ, ಸಿತಳಾ, ಬಡಿದೇವ್, ಇನ್ನಿತರ ದೈವಗಳಿಗೆ ಐದು ತೆಂಗಿನಕಾಯಿ, ಐದು ವೀಳ್ಯೆದೆಲೆ, ಐದು ಬೆಟ್ಟಡಿಕೆಯನ್ನಿಟ್ಟು "ಏಳ್ ಕೋಟ್ ಏಳ್ ಕೋಟ್ ಭೈರ್ ಚಾಂಗ್ ಬಲೆ ಚಿಂತಾಮಣಿ ಹರಹರ ಮಹಾದೇವ್ " ಎಂದು ಹೇಳಿ, ಮೈಲಾರಲಿಂಗನಿಗೆ ಐದು ಸಲ ಭಂಡಾರವನ್ನು ಹಾಕಿ ಎಲ್ಲರೂ ನಮಸ್ಕರಿಸಿ ಹಬ್ಬದ ಮುಂದಿನ ಕೆಲಸ ಕಾರ್ಯಗಳಲ್ಲಿ ತೊಡಗುವರು.

ಮೈಲಾರಲಿಂಗನ ಭಕ್ತರಾದ ಪಡಿಯಾರ ಬಳಿಯವರು ಮಾತ್ರ ದಸರಾ ಹಬ್ಬವನ್ನು ಒಂಬತ್ತು ದಿನಗಳವರೆಗೆ ಆಚರಿಸುತ್ತಾರೆ. ಈ ಒಂಬತ್ತು ದಿನಗಳ ಕಾಲ 'ಸಿತಳಾ ಭವಾನಿಗೆ' ತುಪ್ಪದ ದೀಪ ಹಚ್ಚುವರು ಹಾಗೂ 'ಬಡಿದೇವ' ಹಾಗೂ 'ಮೈಲಾರಲಿಂಗ'ನಿಗೆ ಎಣ್ಣೆದೀಪ ಹಚ್ಚುವರು. ಹಬ್ಬ ಮುಗಿಯುವವರೆಗೂ ಪುರಷರ್‍ಯಾರೂ ತಮ್ಮ ಡೇರಾಗಳಲ್ಲಿ ಮಲಗುವಂತಿಲ್ಲ ಎಲ್ಲರೂ ದೇವರ ಸನ್ನಿಧಿಯಲ್ಲೇ ಮಲಗಬೇಕು (ಈ ದಿನಗಳಲ್ಲಿ ಗಂಡ-ಹೆಂಡತಿ ಕೂಡುವಂತಿಲ್ಲ) ರಾತ್ರಿಯೆಲ್ಲ ದೇವರ ಸ್ತುತಿ ಹಾಡುಗಳನ್ನು ಹಾಡುತ್ತಾ ಹಬ್ಬ ಮುಗಿಯುವವರೆಗೆ ಜಾಗರಣೆ ಮಾಡುವರು.

ಹಬ್ಬ ಪ್ರಾರಂಭವಾಗಿ ಎಂಟನೇ ದಿನದಂದು ಬೀಸೊಕಲ್ಲನ್ನು ಹೊಳೆಗೆ ಅಥವಾ ಬಾವಿಗೆ ತೆಗೆದುಕೊಂಡು ಹೋಗಿ ಚೆನ್ನಾಗಿ ತೊಳೆದು ತಂದು ಪೂಜೆಮಾಡಿ. ಹಬ್ಬದ ಕೊನೆಯದಿನದ ಪೂಜೆಗೆ

ಎಡೆ ಮಾಡಲು ಬೇಕಾದ ಗೋದಿಯನ್ನು ಬೀಸುವರು. ಗೋದಿಯನ್ನು ಗಂಡು ಮಕ್ಕಳೇ ಬೀಸಿ ಸಿದ್ಧಪಡಿಸುವರು. (ಈ ಸಂದರ್ಭದಲ್ಲಿ ಹೆಣ್ಣುಮಕ್ಕಳು ಗೋದಿಯನ್ನು ಬೀಸುವಂತಿಲ್ಲ) ಒಂಬತ್ತನೆಯ ದಿನ ಬೆಳಿಗ್ಗೆ ನಾಲ್ಕು ಅಥವಾ ಐದು ಕಟ್ಟು ಮೆದುವಾದ ವೀಳ್ಯೆದೆಲೆಯನ್ನು ತಂದು ಮೈಲಾರಲಿಂಗನ ಗದ್ದುಗೆ ಮೇಲೆ ಹಾಸಿ ಅದರ ಮೇಲೆ ದೇವರನ್ನು ಕೂಡಿಸಿ, ನಂತರ ಉಳಿದ ಎಲೆಗಳನ್ನು ಗದ್ದಿಗೆಯ ಸುತ್ತ ಹಾಸುವರು. ನಂತರ ಇದೇ ಡೇರಾದಲ್ಲಿ ಎರೆಡು ಒಲೆಗಳನ್ನೂಡಿ ಗೋದಿ ರೊಟ್ಟಿಮಾಡಲು ಪ್ರಾರಂಭಿಸುವರು.ಹೀಗೆ ಕೆಲವರು ಗೋದಿರೊಟ್ಟಿ ಮಾಡಲು ಪ್ರಾರಂಭಿಸಿದರೆ ಇನ್ನು ಕೆಲವರು ಒಣಮೆಣಸಿನಕಾಯಿ, ಜೀರಿಗೆ, ಕಸಕಸೆ, ಲವಂಗ, ಬೆಳ್ಳುಳ್ಳಿ ಇನ್ನು ಮುಂತಾದ ಪದಾರ್ಥಗಳನ್ನು ಸೇರಿಸಿ ಮಾಂಸದ ಸಾರಿಗೆ ಮಸಾಲೆಯನ್ನು ಸಿದ್ಧಪಡಿಸುವರು.

ಇಂದು ಮಧ್ಯಾಹ್ನ ಮೂರು ಗಂಟೆಯ ನಂತರ ಬಲಿಕೊಡುವ ಕಾರ್ಯ ಆರಂಭವಾಗುತ್ತದೆ. ಅದಕ್ಕಿಂತ ಮುಂಚೆ ಸರಾಯಿಯನ್ನು ತಂದು ಮೈಲಾರಲಿಂಗನಿಗೆ ಬಲಗಡೆಯಿಂದ ಎಡಗಡಗೆ ಒಯ್ಯುವ ವಿಶಿಷ್ಟ ಪದ್ಧತಿ ಇವರಲ್ಲಿದೆ. ಯಾವ ಸಂದರ್ಭದಲ್ಲೇ ಬಲಿಕೊಡಲಿ, ಮೊದಲ 'ಬಲಿ' ಭಗತನದು. ಇದಕ್ಕೆ ಅವರು 'ಭಗತ್ರೊ ಏಕ್ ಬಕರೋ' ಎಂದು ಕರೆಯುವರು. ಈತನದು ಸ್ವಂತ ಕುರಿ, ಕೋಳಿಯನ್ನು ತಂದು ಬಲಿಕೊಟ್ಟನಂತರ ಸಮುಯದಾಯದ ಉಳಿದವರು ಬಲಿಕೊಡಬಹುದು. ಅಲ್ಲಿಯವರೆಗೂ ಯಾರು ಬಲಿಕೊಡುವಂತಿಲ್ಲ.

ಬಲಿಕೊಡುವ ಸಂದರ್ಭದಲ್ಲಿ ಯಾರೇ ಬಲಿಕೊಟ್ಟರೂ ಮೊದಲು ಹುಂಜ (ಕೆಂಪು) ವನ್ನು ಬಲಿಕೊಟ್ಟು ನಂತರ ಕುರಿಯನ್ನು ಬಲಿಕೊಡಬಹುದು. ಕೋಳಿ ಮತ್ತು ಕುರಿಯ ಕುತ್ತಿಗೆಯನ್ನು ಕತ್ತರಿಸಿ ಮೈಲಾರಲಿಂಗನ ಕಡೆಗೆ ತಲೆಮಾಡಿ ಇಡುವರು. ಆದರೆ ಬಲಗಾಲನ್ನು ಕಡಿದು ಬಾಯಲ್ಲಿಡುವ ಪದ್ಧತಿ ಇವರಲ್ಲಿಲ್ಲ. ಕುರಿಯ ತಲೆಯನ್ನು ಕತ್ತರಿಸಿದ ನಂತರ ಅದರ ಬಲಗಾಲ ತೊಡೆಮಾಂಸ ಹಾಗೂ ಹೊಟ್ಟೆಯಲ್ಲಿನ 'ಕಲಿಜ'ವನ್ನು ತೆಗೆದು ಕುರಿಯ ತಲೆಯ ಮೇಲಿಡುವ ವಿಶಿಷ್ಟವಾದ ಪದ್ಧತಿ ಇವರಲ್ಲಿರುವುದು ಕಂಡುಬರುತ್ತದೆ. ತಲೆಯ ಮೇಲಿಟ್ಟ ಮಾಂಸವನ್ನು ಮರುದಿನದವರೆಗೆ ಹಾಗೆ ಇರುತ್ತದೆ. ಉಳಿದ ಮಾಂಸದಲ್ಲಿ ಮೂರನೇ ಒಂದು ಭಾಗದಷ್ಟು ಅಡಿಗೆಗೆ ಬಳಸುವರು. ಇನ್ನುಳಿದ ನಾಲ್ಕನೇ ಒಂದು ಭಾಗದಷ್ಟು ಮಾಂಸದಲ್ಲಿ ಮೃದುವಾದ ಮಾಂಸವನ್ನು ಬೇರ್ಪಡಿಸಿ ಉದ್ದನೆಯ ಒಂಬತ್ತು ಕೋಲುಗಳನ್ನು ತೆಗೆದು ಕೊಂಡು ಒಂದೊಂದು ಕೋಲಿಗೆ ಒಂಬೊಂಬತ್ತು ತುಂಡು(ಚೂರು)ಗಳನ್ನು ಸಿಕ್ಕಿಸು (ಇತ್ತೀಚಿಗೆ ಪ್ರತಿಯೊಂದು ಕೋಲಿಗೂ ಮುಂದೆ ತಂತಿಯನ್ನು ಸಿಕ್ಕಿಸಿ ಮಾಂಸದ ತುಂಡನ್ನು ಸಿಕ್ಕಿಸುವರು)ವರು. ಹೀಗೆ ಮಾಂಸದ ತುಂಡುಗಳನ್ನು ಸಿಕ್ಕಿಸಿದ ಒಂಬತ್ತು ಕೋಲುಗಳಲ್ಲಿ ನಾಲ್ಕು ಕೋಲುಗಳಲ್ಲಿನ ಮಾಂಸವನ್ನು ಬೆಂಕಿಯಲ್ಲಿ ಸುಡುವರು. ಉಳಿದ ಐದು ಕೋಲುಗಳಲ್ಲಿನ ಮಾಂಸವನ್ನು ಪ್ರತ್ಯೇಕವಾದ ನೀರಿನಲ್ಲಿ ಕುದಿಸಿ ಎಡೆಗೆ ಸಿದ್ಧಪಡಿಸುವರು. ಹೀಗೆ ಕೆಲವರು ಎಡೆಗೆ ಮಾಂಸವನ್ನು ಸಿದ್ಧಪಡಿಸುವ ಕೆಲಸದಲ್ಲಿ ನಿರತರಾದರೆ. ಇನ್ನು ಕೆಲವರು ಎಡೆಗೆ ಗೋದಿರೊಟ್ಟಿಯನ್ನು ಸಿದ್ಧಪಡಿಸುತ್ತಾರೆ. ಸಿದ್ಧಪಡಿಸಿದ ಗೋದಿರೊಟ್ಟಿಯನ್ನು

ಒಂದೊಂದು ಗುಡ್ಡೆಯಲ್ಲಿ ಒಂಬೊಂಬತ್ತು ರೊಟ್ಟಿ ಇರುವಂತೆ, ಒಂಬತ್ತು ಗುಡ್ಡೆ ಗೋದಿರೊಟ್ಟಿಯನ್ನು ವೃತ್ತಾಕಾರ ಇರುವಂತೆ ಎಡೆ ಇಡುವರು. ಹೀಗೆ ಎಡೆ ಇಟ್ಟ ಒಂಬತ್ತು ಗುಡ್ಡೆ ರೊಟ್ಟಿಯ ಗುಂಪಿಗೆ 'ನೌಕಣ' ಎಂದು ಕರೆಯುವರು. (ಫೋಟೊ ಇದೆ) ನಂತರ ರೊಟ್ಟಿಯನ್ನು ಪುಡಿಮಾಡಿ ತಯಾರಿಸಿದ 'ಚುರುಮಾ'ವನ್ನು ಪ್ರತಿಯೊಂದು ರೊಟ್ಟಿಗುಡ್ಡೆಗಳ ಮೇಲಿಟ್ಟು ಅದರ ಮೇಲೆ ಬೆಲ್ಲದ ಚೂರು, ತುಪ್ಪವನ್ನು ಹಾಗೂ ಗೋದಿಯಸಸಿಯನ್ನು ಹಾಕುವರು. ಇದಾದ ಮೇಲೆ ಮೊದಲ ಗುಂಪಿನ ರೊಟ್ಟಿಯ ಮೇಲೆ ಕುದಿಸಿದ ಮಾಂಸ, ಎರಡನೇ ಗುಂಪಿನ ರೊಟ್ಟಿಯ ಮೇಲೆ ಸುಟ್ಟಮಾಂಸವನ್ನು ಇಡುವರು. ಹೀಗೆ ಒಂಬತ್ತು ರೊಟ್ಟಿಕಣದ ಮೇಲೆ ಒಮ್ಮೆ ಕುದಿಸಿದ ಮಾಂಸ ಇನ್ನೊಮ್ಮೆ ಸುಟ್ಟಮಾಂಸವನ್ನಿಟ್ಟು ಅರ್ಪಿಸಿದ ಎಡೆ ಮೈಲಾರಲಿಂಗನಿಗೆ ಸಲ್ಲುತ್ತದೆ.

**ಬುಡಬಾ :** ಮೈಲಾರಲಿಂಗನ ಎಡಭಾಗದಲ್ಲಿ ಮತ್ತೊಂದು ದೇವರಿರುತ್ತದೆ. ಅದನ್ನು 'ಬುಡಬಾ' ಎಂದು ಕರೆಯುವರು. ಬುಡಬಾ ಎಂಬುದಕ್ಕೆ 'ಹಿರಿಯ' ಎಂಬ ಅರ್ಥವನ್ನು ಅರ್ಥೈಸಿಕೊಂಡಿದ್ದಾರೆ. ಅಂದರೆ ಅವರ ಸಮುದಾಯದಲ್ಲಿ ಹಿಂದೆ ಬಾಳಿ ಹೋದ ಆದರ್ಶ ಹಿರಿಯನ ನೆನಪಿನಾರ್ಥವಾಗಿ ಇದನ್ನು ಪೂಜಿಸುವರು. ಈತನಿಗೆ ಒಂದು ಪಾವು ಅಕ್ಕಿಯಿಂದ ಅನ್ನಮಾಡಿ, ಅನ್ನದ ಮೇಲೆ ಬೆಲ್ಲದ ಚೂರೊಂದನ್ನು ಇಟ್ಟು, ಅದರ ಮೇಲೆ ಸ್ವಲ್ಪ ಮೊಸರನ್ನು ಹಾಕಿ ಎಡೆ ಅರ್ಪಿಸಿ ಆಶೀರ್ವಾದ ಪಡೆಯುವರು.

**ಪೀರಸ್ವಾಮಿ :** ಅಲೆಮಾರಿಗಳಾದ ಗೋಸಂಗಿ ಸಮುದಾಯದಲ್ಲಿ 'ಪೀರಸ್ವಾಮಿ'ಯನ್ನು ಪೂಜಿಸುವುದು. ವಿಶೇಷವಾಗಿ ಕಂಡು ಬರುತ್ತಿದೆ. ಮೈಲಾರಲಿಂಗನ ಗದ್ದುಗೆಯ ಬಲಭಾಗಕ್ಕೆ ಮಣ್ಣಿನಿಂದ ಅಥವಾ ಒಂದು ಕಲ್ಲನ್ನು ಇಟ್ಟು ಅದನ್ನು ಪೀರಸ್ವಾಮಿ ಎಂದು ಪೂಜಿಸುವರು. ಕೆಲವರು ಇದನ್ನು 'ಕೌಡೆಪೀರಾಸಾಬ' ಎಂತಲೂ ಕರೆಯುವರು. ಅಲೆಮಾರಿಗಲಾದ ಇವರಲ್ಲಿ ಪೀರಸ್ವಾಮಿಯ ಪ್ರವೇಶ ಹೇಗಾಯಿತು ಎಂಬುದರ ಬಗ್ಗೆ ಯಾವುದೇ ಸರಿಯಾದ ಮಾಹಿತಿ ಲಭ್ಯವಿಲ್ಲ. ಆದರೆ ಈ ಸಮುದಾಯದಲ್ಲಿ ಆತನ ಪ್ರವೇಶ ಹೇಗಾಯಿತು, ಯಾಕಾಯಿತು ಎಂಬ ಪ್ರಶ್ನೆಗೆ ಒಂದು ಚಿಕ್ಕ ಘಟನೆಯನ್ನು ನೆನಪಿಸಿಕೊಳ್ಳುತ್ತಾರೆ. "ನಾವು ಮೊದಲು ಹಂದಿಮಾಂಸವನ್ನು ತಿನ್ನುತ್ತಿದ್ದೆವು, ಹೀಗೆ ತಿನ್ನುವಾಗ ಪೀರಸ್ವಾಮಿ ನಮ್ಮ ಹಿರಿಯರ ಕನಸಿನಲ್ಲಿ ಬಂದು 'ಇನ್ನು ಮೇಲೆ ನೀವು ಹಂದಿಮಾಂಸವನ್ನು ತಿನ್ನುವುದನ್ನು ನಿಲ್ಲಿಸಿ, ನಿಮಗೆ ಒಳ್ಳೆಯದಾಗುತ್ತದೆ' ಎಂದು ಹೇಳಿದ್ದರಿಂದ ಅಂದಿನಿಂದ ನಾವು ಹಂದಿಮಾಂಸ ತಿನ್ನುವುದನ್ನು ನಿಲ್ಲಿಸಿದೆವು. ಅಂದಿನಿಂದ ನಮಗೆ ಒಳ್ಳೆಯದಾಗಿದೆ. ಆ ಕಾರಣಕ್ಕಾಗಿ ಪೀರಸ್ವಾಮಿಯನ್ನು ನಾವು ಪೂಜಿಸುತ್ತಿದ್ದೇವೆಂದು ಹೇಳುತ್ತಾರೆ. ಈತನ ಎಡೆ ಎಂದರೆ ಒಂದು ಗೋದಿ ರೊಟ್ಟಿಯನ್ನು ಇಟ್ಟು ನಂತರ ಒಂದುವರೆ ಗೋದಿರೊಟ್ಟಿಯನ್ನು ಪುಡಿಮಾಡಿ (ಚುರುಮ) ಆ ಪುಡಿಗೆ ಸ್ವಲ್ಪ ನೀರನ್ನ ಬೆರೆಸಿ ಒಂದು ಉಂಡೆ ಮಾಡಿ ಅದರ ಮೇಲಿಟ್ಟು ಪಕ್ಕದಲ್ಲಿ ಒಂದು ತೆಂಗಿನಕಾಯಿಡುವರು. ಮೈಲಾರಲಿಂಗ ಹಾಗೂ ಬುಡುಬಾನಿಗೆ ಪೂಜೆ ಸಲ್ಲಿಸಿದ ನಂತರ ಪೀರಸ್ವಾಮಿ ಪಕ್ಕದಲ್ಲಿರುವ ತೆಂಗಿನಕಾಯಿಯನ್ನು ಒಡೆಯುವರು.

ಈ ರೀತಿಯಾಗಿ ಮೈಲಾರಲಿಂಗ, ಬುಡುಬಾ ಹಾಗೂ ಪೀರಸ್ವಾಮಿಗೆ ಪೂಜೆ ಸಲ್ಲಿಸುವರು. ಕೊನೆಯದಾಗಿ ಮೈಲಾರಲಿಂಗನಿಗೆ ಎಡಗಡೆಯಿಂದ ಬಲಗಡೆಗೆ ಸರಾಯಿಯನ್ನು ಅರ್ಪಿಸುವರು. ಆಗ

ಭಗತನಿಗೆ ದೇವರು ಮೈಯಲ್ಲಿ ಬಂದು ಹಬ್ಬದ ಆಚರಣೆಯ ,ಸಂದರ್ಭದಲ್ಲಿ ಉಂಟಾದ ಲೋಪದೋಷಗಳ ಬಗ್ಗೆ ಹಾಗೂ ತಮ್ಮ ಸಮುದಾಯಕ್ಕೆ ಮುಂದೆ ಒದಗಬಹುದಾದ ಒಳಿತು-ಕೆಡಕುಗಳ ಬಗ್ಗೆ ಮುನ್ಸೂಚನೆಯನ್ನು ನೀಡುವನು. ಹಾಗೆಯೇ ನೆರೆದಂತ ಭಕ್ತರು ತಮ್ಮ ಕಷ್ಟಸುಖಗಳನ್ನು ಭಗತನಲ್ಲಿ ಹೇಳಿಕೊಂಡು ಆಶೀರ್ವಾದ ಪಡೆಯುವರು. ಹೀಗೆ ಸುಮಾರು ೨೦-೩೦ ನಿಮಿಷಗಳ ಕಾಲ ಭಗತ ಮತ್ತು ಭಕ್ತರ ನಡುವೆ ಚರ್ಚೆ ನಡೆಯುತ್ತದೆ. ಭಗತ ಸಹಜ ಸ್ಥಿತಿಗೆ ಮರಳಿದ ಮೇಲೆ ಎಡೆಯನ್ನು ಸ್ವೀಕರಿಸಿ ಸಮುದಾಯದವರಿಗೆ ಪ್ರಸಾದ ಸ್ವೀಕರಿಸಲು ಅನುಮತಿ ನೀಡುವರು. ಈ ರೀತಿಯಾಗಿ ಭಗತ ಅನುಮತಿಯ ಮೇರೆಗೆ ಪ್ರಸಾದ ಸ್ವೀಕರಿಸುವಾಗ ಮೊದಲ ಪ್ರಧಾನ್ಯತೆ ಮಕ್ಕಳಿಗೆ ಕೊಡುವರು. ಒಂದು ದೊಡ್ಡ ಹಿತ್ತಾಳೆ ಪರಾತಿನಲ್ಲಿ ಗೋದಿರೊಟ್ಟಿ ಹಾಗೂ ಮಾಂಸದ ಸಾರನ್ನು ಹಾಕಿ, ಅದರ ಸುತ್ತ ಒಂಬತ್ತು ಜನ ಹೆಣ್ಣು ಮಕ್ಕಳನ್ನು (ಏಳುವರ್ಷ ಏಳುತಿಂಗಳೊಳಗಿನ) ಕೂಡಿಸಿ (ಇದಕ್ಕೆ ಇವರು 'ಸವಾಸಣೆ' ಎಂದು ಕರೆಯುವರು) ತೃಪ್ತಿಯಾಗುವವರೆಗೆ ಉಣಬಡಿಸುವರು. ಮಕ್ಕಳು ಉಂಡ ನಂತರ ಅವರ ಕೈಗಳನ್ನು ಹೊರಗಡೆ ತೊಳೆದು ಕೊಂಡರೆ ಮೈಲಿಗೆಯಾಗುತ್ತದೆಂಬ ನಂಬಿಕೆ ಇರುವುದರಿಂದ ಒಂದು ಚಿಕ್ಕ ಗುಂಡಿಯನ್ನು ತೆಗೆದು ಅದರಲ್ಲೆ ಎಲ್ಲರೂ ಕೈಗಳನ್ನು ತೊಳೆದುಕೊಳ್ಳುವರು. ಈ ರೀತಿಯಾಗಿ ಭಗತ ಮತ್ತು ಮಕ್ಕಳು ಪ್ರಸಾದ ಸ್ವೀಕರಿಸಿದ ನಂತರ ಸಮುದಾಯದ ಉಳಿದವರೆಲ್ಲ ಪ್ರಸಾದ ಸ್ವೀಕರಿಸಬಹುದು. ಆದರೆ ಯಾವ ಬಳಿಯುವರು ಹಬ್ಬವನ್ನು ಆಚರಿಸುತ್ತಾರೋ ಅವರು ಮಾತ್ರ ದೇವರ ಪ್ರಸಾದವನ್ನು ಸ್ವೀಕರಿಸಬಹುದು. ಉಳಿದ ಬಳಿಯವರಿಗೆ ಪ್ರಸಾದ ಕೊಡುವಂತಿಲ್ಲ. (ಬೇರೆ ಬಳಿಯ ಹೆಣ್ಣು ಸೊಸೆಯಾಗಿ ಬಂದವಳಿಗೂ ಸಹ ಪ್ರಸಾದವನ್ನು ಕೊಡುವಂತಿಲ್ಲ) ಒಂದು ವೇಳೆ ನೆಂಟರಿಗೆ ಅಥವಾ ಬೇರೆ ಬಳಿಯವರಿಗೆ ಹಬ್ಬದ ಪ್ರಸಾದ ಕೊಡಬೇಕಾಗಿ ಬಂದರೆ ಎಡೆಗೆ ಬಳಸಿ ಉಳಿದಿದ್ದ ಮೂರನೇ ಒಂದು ಭಾಗದ ಮಾಂಸವನ್ನು ಬೇಕಾದರೆ ಬೇರೆ ಬಳಿ ಅಥವಾ ಬೇರೆ ಜಾತಿ (ಪರ್‌ಬಾತ್) ಯವರಿಗೆ ಕೊಡಬಹುದು. ಇದಕ್ಕೆ ಮೈಲಾರಲಿಂಗನ `ಭಂಡಾರದ 'ಊಟ' ಎನ್ನುವರು. ಹೀಗೆ ಮೈಲಾರಲಿಂಗ ಭಕ್ತರಾದ ಪಡಿಯಾರ ಬಳಿಯವರು ಬಲಿ ಕೊಡುವುದರ ಮೂಲಕ ದಸರಾ ಆಚರಣೆ ಮಾಡುವ ವಿಶಿಷ್ಟ ಪದ್ಧತಿಯನ್ನು ರೂಢಿಸಿಕೊಂಡು ಬಂದಿದ್ದಾರೆ.

**ಸಿತಳಾ (ಎಲ್ಲಮ್ಮ) ಪೂಜೆ :** ದಸರಾ ಹಬ್ಬದ ದಿನ ಸಿತಳಾಗೆ ವಿಶೇಷ ಪೂಜೆ ಸಲ್ಲುತ್ತದೆ. ಶಕ್ತಿ ದೈವಗಳ ಬಗ್ಗೆ ಅಪಾರ ನಂಬಿಕೆಗಳನ್ನಿಟ್ಟುಕೊಂಡಿರುವ ಗೊಸಂಗಿಗಳು ಅತ್ಯಂತ ನೇಮ ನಿಷ್ಠೆಗಳಿಂದ ಆಚರಣೆಗಳನ್ನು ರೂಢಿಸಿಕೊಂಡು ಬರುತ್ತಿದ್ದಾರೆ. ಹಬ್ಬದ ಮೊದಲನೇ ದಿನದ ಮೊದಲ ಪೂಜೆ ಹಾಗೂ ಕೊನೆ ದಿನ (ಏಳನೇ ದಿನ)ದ ಮೊದಲ ಪೂಜೆ ಸಿತಳಾಗೆ ನಡೆದ ನಂತರವೇ ಉಳಿದ ದೈವಗಳಿಗೆ ಪೂಜೆ ನಡೆಯುತ್ತದೆ. ಬಹುಶಃ ಮಕ್ಕಳನ್ನು ಕಾಪಾಡುವ ದೈವ ಎಂಬ ನಂಬಿಕೆ ಇರುವದರಿಂದ ಮೊದಲ ಪೂಜೆ ಸಿತಳಾ (ಮಕ್ಕಳಿಗೆ ಬರುವ ದಡಾರ ರೋಗವನ್ನು ವಾಸಿಮಾಡುವ ದೈವ)ಗೆ ಮಾಡುತ್ತಿರಬೇಕು. ಹಬ್ಬದ ಕೊನೆಯ ದಿನ ಬೆಳಗ್ಗೆ ಸಿತಳಾಗೆ ಪೂಜೆ ಮಾಡಿ 'ತಂಗಳನ್ನ' ಎಡೆಕೊಡುವರು. ಆ ಎಡೆಯ ಮೇಲೆ ಬೆಲ್ಲದ ತುಂಡು, ಸ್ವಲ್ಪ ತುಪ್ಪ ಹಾಗೂ ಗೋದಿ ಸಸಿಯನ್ನು ಹಾಕಿ ನೈವೇದ್ಯ ಅರ್ಪಿಸುವರು.

ಇದಕ್ಕೆ 'ರಾತೀ ಜೋಗೋ' ಎಂದು ಕರೆಯುವರು. ಅಂದರೆ ಹಬ್ಬದ ಕೊನೆಯದಿನದ ಹಿಂದಿನ ದಿನ ರಾತ್ರಿ ಪ್ರತಿಯೊಂದು ಕುಟುಂಬದವರು ಅನ್ನಮಾಡಿ ಅದನ್ನು ಬಟ್ಟೆಯಲ್ಲಿ ಕಟ್ಟಿಟ್ಟು ಅದೇ ಅನ್ನವನ್ನು ಮರುದಿನ ಬೆಳಗ್ಗೆ ಎಂಟು ಗಂಟೆಗೆ ಸಿತಳಾಗೆ ನೈವೇದ್ಯ (ಎಡೆ) ಇಡುವುದಕ್ಕೆ ರಾತೀ ಜೋಗೋ (ತಂತಳನ್ನ ಎಡೆ) ಎಂದು ಕರೆಯುವರು. ಇದೇ ಸಂದರ್ಭದಲ್ಲಿ ಒಂದೊಂದು ಕೊಬ್ಬರಿ ಬಟ್ಟಲನ್ನು ತಂದು, ಅದರಲ್ಲಿ ತುಪ್ಪಹಾಕಿ ದೇವರ ಮುಂದೆ ದೀಪ ಹಚ್ಚುವರು.

**ಖಡ್ಕಾದೇವಿ :** ಮೈಸೂರು ಚಾಮುಂಡೇಶ್ವರಿಯನ್ನು ಇವರು 'ಕಟಕ್ ಚಂಡಿ', 'ಖಡ್ಕಾದೇವಿ' ಎಂತಲೂ ಕರೆಯುವರು. ದಸರಾ ಹಬ್ಬದ ದಿನ ಈ ದೇವತೆಗೆ ವಿಶೇಷ ಪೂಜೆ, ಸಲ್ಲಿಸುತ್ತಾರೆ. ಈಕೆಗೆ ನೈವೇದ್ಯವಾಗಿ ಜೋಳದ ಅಥವಾ ಗೋದಿರೊಟ್ಟಿಯನ್ನು ಅರ್ಪಿಸುವರು. ಅರಿಶಿಣ, ಕುಂಕುಮ, ಹೂವಿನ ಹಾರ, ಮುಟ್ಟಿಸುವಂತಿಲ್ಲ. ಗಂಧವನ್ನು ಮಾತ್ರ ಹಚ್ಚಬಹುದು. ಅದು ಸಹ ಕೈಯಿಂದ ಹಚ್ಚುವಂತಿಲ್ಲ. ಭಗತನಾದವನು ದೂರ ನಿಂತು ತನ್ನ ಕೈಯಿಂದ ಚಿಮುಕಿಸಬೇಕೆಂಬ ನಿಯಮವಿದೆ.

**ಸಪ್ತಕನ್ನಿಕೆಯರು (ಸಾತ್ ಮಾಲ್ಬಿ) :** ಚಾಮುಂಡೇಶ್ವರಿಯ ಗದ್ದುಗೆಯ ಮೇಲೆ ಬಲಭಾಗಕ್ಕೆ ಏಳು ಬೆಳ್ಳಿ ಮೂರ್ತಿಗಳನ್ನಿಟ್ಟು ಪೂಜಿಸುವರು. ಇದಕ್ಕೆ 'ಸಾತ್‌ಮಾಲ್ಬಿ' (ಸಪ್ತಕನ್ನಿಕೆಯರು) ಎಂದು ಕರೆಯುವರು. ಇದೇ ರೀತಿ ಏಳುಜನ ಸ್ತ್ರೀ ದೇವತೆಗಳನ್ನು ಅಕ್ಕತಂಗಿಯರೆಂದು, ಶಕ್ತಿದೇವತೆಗಳೆಂದು ಪೂಜಿಸುವ ಪದ್ಧತಿ ಲಂಬಾಣಿಗರಲ್ಲಿರುವುದು ಕಂಡುಬರುತ್ತದೆ. ಅಷ್ಟೇ ಅಲ್ಲ ಈ ಏಳು ಜನರನ್ನು 'ಸಾತೀಭವಾನಿ', 'ಆದಿಶಕ್ತಿ', ಮತ್ತು 'ಪರಿ' ಎಂತಲೂ ಸಹ ಕರೆಯುತ್ತಾರೆ. ಲಂಬಾಣಿಗರು ಗುರುತಿಸಿರುವ ಏಳು ಜನ ದೇವತೆಗಳೆಂದರೆ ತುಳಜಾಭವಾನಿ, ಶೀತಲಾಭವಾನಿ, ಬೋಜರಿಮಾತ, ಮತರಾಲಭವಾನಿ, ಮೈಸೂರುಭವಾನಿ, ವಾಗ್ಮಾಯಿಭವಾನಿ, ಹಿಂಗಳಾಮಾತಾ. ಲಂಬಾಣಿಗರು ಈ ದೇವತೆಗಳಿಗೆ ತಪ್ಪದೆ ಬಲಿ ಅರ್ಪಿಸುವರು.[೧]

ದಸರಾ ಹಬ್ಬದ ದಿನ ಸಾತ್‌ಮಾಲ್ಬಿಗಳಿಗೆ ವಿಶೇಷ ಪೂಜೆ ಸಲ್ಲುತ್ತದೆ. ಇವರಿಗೆ ಕೊಡುವ ನೈವೇದ್ಯವೆಂದರೆ ಗೋದಿರೊಟ್ಟಿ ಹಾಗೂ ಬೆಲ್ಲವನ್ನು ಪುಡಿಮಾಡಿ ಅನ್ನದೊಂದಿಗೆ ಬೆರಸಿ ಗಟ್ಟಿಯಾಗಿ ಏಳು ಉಂಡೆಗಳನ್ನು ಕಟ್ಟಿ ಎಡೆ ಇಡುವರು. ಲಂಬಾಣಿಗರಂತೆ ಬಲಿಕೊಡುವ ಪದ್ಧತಿ ಇವರಲ್ಲಿಲ್ಲ.

## ಯುಗಾದಿ

ಹಿಂದೂಗಳು ಆಚರಿಸುವ ಪ್ರಮುಖ ಹಬ್ಬಗಳಲ್ಲಿ 'ಯುಗಾದಿ'ಯು ಒಂದಾಗಿದ್ದು. ಇದನ್ನು ವರ್ಷದ ಮೊದಲ ಹಬ್ಬವೆಂದೇ ಪರಿಗಣಿಸುವರು. 'ಯುಗಾದಿ' ಕಾಲಮಾನವನ್ನಾಧರಿಸಿ ಆಚರಿಸುವ ಹಬ್ಬವಾದ್ದರಿಂದ ಭಾರತೀಯರು ಇದಕ್ಕೆ ವಿಶೇಷ ಸ್ಥಾನಮಾನ ನೀಡಿದ್ದಾರೆ. ಬಡವ ಶ್ರೀಮಂತ ಎನ್ನದೆ ಎಲ್ಲಾ ವರ್ಗದವರು ಅತ್ಯಂತ ಸಂತೋಷ ಸಂಭ್ರಮದಿಂದ ಆಚರಿಸುತ್ತಾರೆ. "ಹಿಂದೂ ಹಬ್ಬಗಳಾದ ಗೌರಿ-ಗಣೇಶ, ವಿಜಯದಶಮಿ, ದೀಪಾವಳಿ ಮುಂತಾದವು ಪುರಾಣ, ಇತಿಹಾಸ, ಧರ್ಮಶಾಸ್ತ್ರಗಳನ್ನು ಆಧರಿಸಿ ರೂಪಗೊಂಡಿವೆಯಾದರೂ ಪುರಾಣವೇ ಅವುಗಳ ಬೆನ್ನೆಲುಬು. ಆದರೆ ಸಂಕ್ರಾಂತಿ ಮತ್ತು ಯುಗಾದಿಗಳ ವೈಶಿಷ್ಟ್ಯವೇ ಬೇರೆ. ಯಾವ

ಪೌರಾಣಿಕ ಕಥೆಯೂ ಅಲ್ಲ. 'ಕಾಲಮಾನ ಪದ್ಧತಿ'ಯು ಇವುಗಳ ಬೆನ್ನೆಲುಬು. ಜೋತಿಷ್ಯ, ಧರ್ಮಸಾಸ್ತ್ರ ಋತು ಧರ್ಮಗಳು ಪಕ್ಕೆಲುಬುಗಳು"[೨] ಹಾಗಾಗಿ ಕಾಲಮಾನಗಳ ಬದಲಾವಣೆಗಳಿಂದ ಸಕಲ ಜೀವ ಸಂಕುಲಕ್ಕೆ ಹೊಸ ಜೀವ, ಹೊಸ ಚೈತನ್ಯ ನೀಡುವ ಹಬ್ಬವಾಗಿರುವುದರಿಂದಲೇ ಬಹುತೇಕ ಸಮುದಾಯಗಳು 'ಯುಗಾದಿ'ಯನ್ನು ವರ್ಷದ ಮೊದಲ ಹಬ್ಬವೆಂದೇ ಪರಿಗಣಿಸುವರು. ಈ ಹಬ್ಬದ ಪ್ರಾರಂಭದಲ್ಲುಂಟಾಗುವ ಶುಭ-ಅಶುಭಗಳು ವ್ಯಕ್ತಿಗೆ ಬಹಳ ಮುಖ್ಯವಾಗಿದ್ದು ವರ್ಷದುದ್ದಕ್ಕೂ ಅವು ಅನ್ವಯಿಸುವುದರಿಂದ ಅತ್ಯಂತ ಸಂತೋಷದಿಂದ ಕಾಲ ಕಳೆಯಲು ಪ್ರಯತ್ನಿಸುವರು. 'ಯುಗಾದಿ' ಅಮವಾಸೆ ತುಂಬಾ ಕೆಟ್ಟದೆಂದು ಬಗೆಯುವ ಜನ ಅಂದು ಯಾವ ಕೆಲಸವನ್ನು ಮಾಡುವುದಿಲ್ಲ. ಅಷ್ಟೇ ಅಲ್ಲ, ಅಂದು ಯಾರಲ್ಲಾದರೂ ಸಾಲ ಕೇಳಿದರೆ ವರ್ಷಪೂರ್ತಿ ಸಾಲ ಕೇಳಬೇಕಾಗುತ್ತದೆ, ಅಂದು ಜಗಳವಾಡಿದರೆ ವರ್ಷಪೂರ್ತಿ ಜಗಳವಾಡಬೇಕಾಗುತ್ತದೆ ಎಂಬ ವಾಡಿಕೆ ಜನಸಾಮಾನ್ಯರಲ್ಲಿದೆ. 'ಯುಗಾದೆ ಮುಂದೆ ತಗಾದೆ' ಎಂಬ ಗಾದೆಯೂ ಸಹ ಈ ಹಿನ್ನೆಲೆಯಲ್ಲಿ ಹುಟ್ಟಿಕೊಂಡಿದೆ. ಹಾಗಾಗಿ 'ಯುಗಾದಿ' ಹಬ್ಬ ಹೊಸತನವನ್ನು ತರುವುದರ ಜೊತೆಗೆ ಅಮವಾಸೆಯ ಆತಂಕದ ಭಾವನೆಯನ್ನು ಮೂಡಿಸುತ್ತದೆ.

"ಯುಗಾದಿ ಅರ್ಥ ಹೊಸ ವರ್ಷದ ಆರಂಭದ ದಿನ ಎನ್ನುವಷ್ಟಕ್ಕೆ ಸೀಮಿತಗೊಳಿಸಿದರೆ ಪ್ರಪಂಚದ ಎಲ್ಲಾ ಜನಾಂಗಗಳಲ್ಲಿಯೂ ಇದರ ಆಚರಣೆ ಕಾಣಬಹುದಾಗಿದೆ. ಈ ಅರ್ಥದಲ್ಲಿ ಯುಗಾದಿ ಆಚರಣೆಯ ಪ್ರಪ್ರಥಮ ದಾಖಲೆಯು ಕ್ರಿ.ಪೂ. ೨೦೦೦ ಕ್ಕೆ ಹೋಗುತ್ತದೆ. ಆ ಕಾಲದಲ್ಲಿ ಮೆಸಪಟೋಮಿಯಾದಲ್ಲಿ ಯುಗಾದಿ ಆಚರಿಸುತ್ತಿದ್ದುದಾಗಿ ತಿಳಿದಿದೆ. ಅಸ್ಸೀರಿಯನ್ನರಿಗೆ ಮೋಕ್ಷ ಸಂಕ್ರಾಂತಿ ಸಮಯದ ಅಮವಾಸ್ಯೆ ದಿನದಂದೂ, ಇಜಿಪ್ತಿಯನ್, ಪೊನಿಶಿಯನ್, ಪರ್ಶಿಯನ್‌ರಿಗೆ ತುಲಾ ಸಂಕ್ರಾಂತಿಯಂದೂ, ಯುಗಾದಿಯೆಂದೂ ತಿಳಿದು ಬಂದಿದೆ."[೩] ಹೀಗೆ ಯುಗಾದಿಯನ್ನು ದೇಶ-ವಿದೇಶಗಳಲ್ಲಿಯೂ ಸಹ ಆಯಾ ಪ್ರದೇಶದ ಕಾಲಮಾನಕ್ಕೆ ತಕ್ಕಂತೆ ಹೊಸವರ್ಷವೆಂದು ಸ್ವಾಗತಿಸುತ್ತಿರುವುದು ಕಂಡುಬರುತ್ತದೆ. ಹಲವು ಸಂಸ್ಕೃತಿ, ಜನಾಂಗಗಳನ್ನು ಹೊಂದಿರುವ ಭಾರತದಲ್ಲಿಯೂ ಯುಗಾದಿಯನ್ನು ಹೊಸ ವರ್ಷವೆಂದು ಸ್ವಾಗತಿಸುತ್ತಿದ್ದು, ಆಚರಣೆಯಲ್ಲಿ ಭಿನ್ನತೆಯನ್ನು ಕಾಣಬಹುದಾಗಿದೆ.

ಅಲೆಮಾರಿಗಳಾದ ಗೋಸಂಗಿಗಳು 'ಯುಗಾದಿ' ಹಬ್ಬವನ್ನು ವಿಶಿಷ್ಟ ರೀತಿಯಲ್ಲಿ ಆಚರಿಸುತ್ತಿರುವುದು ಕಂಡುಬರುತ್ತದೆ. ಅಮವಾಸೆಯ ದಿನ ಬೆಳಿಗ್ಗೆ ಭಾಂಗ್ಯಾ(ಭೈರಿನಾಥ)ನಿಗೆ ಮೊದಲ ಪೂಜೆ ನಂತರ ಮರುದಿನ ಮಧ್ಯಾಹ್ನ ಬಲಿಕಾರ್ಯ. ಸಂಜೆ ಭಂಗೀ ಸೇವನೆ. ಹೀಗೆ ಮೂರು ಹಂತಗಳಲ್ಲಿ ಪೂಜೆ ಮಾಡುವುದು ಕಂಡುಬರುತ್ತದೆ.

**ಅಮಾಸ್‌ರೇದನೆ ಭಾಂಗ್ಯಾರೇ ತಳಿ ಬರೋಗ್ಯಾ (ಅಮವಾಸೆ ದಿನ ಭೈರಿನಾಥ (ಶಿವ)ನ ಪೂಜೆ**

ಗೋಸಂಗಿಗಳು ಆಚರಿಸುವ ಯಾವುದೇ ಹಬ್ಬಗಳಿಗೆ ಹಿರಿಯ ದೈವಗಳ ಅನುಮತಿಬೇಕು. ಹಾಗಾಗಿ ಯುಗಾದಿ ಅಮವಾಸೆಯ ದಿನ ಸಮುದಾಯದ ಎಲ್ಲರೂ ಕೂಡಿ ದೈವಗಳ ಸಮ್ಮುಖದಲ್ಲಿ ಹಬ್ಬ

ಆಚರಿಸುವ ಬಗ್ಗೆ ಚರ್ಚೆ ನಡೆಸುತ್ತಾರೆ. ಎಲ್ಲರ ಸಮ್ಮತಿ ದೊರೆತ ಮೇಲೆ ದೇವಸ್ಥಾನದ ಹತ್ತಿರ ಹೋಗಿ ಹಬ್ಬವನ್ನು ಯಾವ ರೀತಿ ಆಚರಿಸಬೇಕು. ಲೋಪ ದೋಷಗಳೇನಾದರು ಇದ್ದಾವೆಯೆ ಎಂದು 'ಭಗತ'ನನ್ನು ಕೇಳುವರು. ಆಗ 'ಭಗತ'ನ ಮೈಯಲ್ಲಿ ದೇವರು ಬಂದು" ಸುಭೀಕ್ಷೆಯಿಂದ ನಡೆಸಿಕೊಂಡೋಗಲು ಇರುವ ತೊಂದರೆ ತಾಪತ್ರಯಗಳನ್ನು ತಿಳಿಸಿ ಅವುಗಳ ಪರಿಹಾರಕ್ಕೆ ಮಾರ್ಗಸೂಚಿಸಿ ಅನುಮತಿ ನೀಡುವನು. ಈ ಎಲ್ಲಾ ಒಪ್ಪಿಗೆಯು ಮುಗಿದ ಮೇಲೆ ಹಬ್ಬ ಆಚರಿಸಲು ಬೇಕಾದ ಸಾಮಾನು ಸರಂಜಾಮುಗಳ ತಯಾರಿಯಲ್ಲಿ ತೊಡಗುತ್ತಾರೆ. ಯುಗಾದಿ ಅಮವಾಸೆಯ ದಿನ ಬೆಳಿಗ್ಗೆ 'ಭಾಂಗ್ಯಾ'ನ ಪೂಜೆ ಪ್ರಾರಂಭವಾಗುತ್ತದೆ.

ಕಾಶಿ ವಿಶ್ವನಾಥನಿಗೆ ಇವರು 'ಭಾಂಗ್ಯ' ಎಂದು ಕರೆಯುತ್ತಾರೆ. ಖಾವಿ ಬಟ್ಟೆಯ ಧ್ವಜವನ್ನು ಈತನ ಸಂಕೇತವೆಂದು ಭಾವಿಸುವರು. ಧ್ವಜವನ್ನು ಹೊಂದಿದ ಬೆತ್ತಕ್ಕೆ ಚಿಕ್ಕದಾದ ಖಾವಿ ಚೀಲ ಕಟ್ಟಿದ್ದು, ಅದರಲ್ಲಿ ಕುದುರೆ ಮೆಲೆ ಕುಳಿತು ತ್ರಿಶೂಲ ಹಿಡಿದಿರುವ ಕಾಶಿ ವಿಶ್ವನಾಥನ ಮೂರ್ತಿ ಇರುತ್ತದೆ. ಭಾಂಗ್ಯನ ಸಂಕೇತವಾದ ಖಾವಿ ಬಟ್ಟೆಯ ಧ್ವಜವನ್ನು ಪ್ರತ್ಯೇಕವಾದ ಸ್ಥಳದಲ್ಲಿ ನಿರ್ಮಿಸಿದ ಡೇರಾದಲ್ಲಿ ತಂದು ಸ್ಥಾಪಿಸಿ. ಅಲ್ಲಿ ಅದಕ್ಕೆ ಪೂಜೆಗೆ ಅಣಿಮಾಡುವರು." ಪ್ರತಿಯೊಂದು ಡೇರಾದಿಂದ ಒಂದೊಂದು ತೆಂಗಿನ ಕಾಯನ್ನು ತೆಗೆದುಕೊಂಡು ಬಂದು ಭಾಂಗ್ಯಾನಿಗೆ ಅರ್ಪಿಸುವರು. ನಂತರ ಕಾಯಿಯಿಂದ ಕೊಬ್ಬರಿಯನ್ನು ಬೇರ್ಪಡಿಸಿ ದೊಡ್ಡದಾದ ಹಿತ್ತಾಳೆ ಪರಾತಿನಲ್ಲಿ ಹಾಕಿ ಅದರ ಮೇಲೆ ಭಂಡಾರ ಹಾಕುವರು. (ಹಿಂದೆ ಕೊಬ್ಬರಿಯನ್ನು ಬಾವುಟದ ಸುತ್ತ ಎತ್ತರಕ್ಕೆ ಜೋಡಿಸುತ್ತಿದ್ದರಂತೆ) 'ಭಗತ' ಹಾಗೂ ನಾಲ್ಕು ಜನ ದೈವಗಳು ಕೂಡಿ ತಲೆಗೆ ಪೇಟ ಸುತ್ತಿಕೊಂಡು ಕೊಬ್ಬರಿ ತುಂಬಿದ ಪರತಾನ್ನು ಕೈಯಲ್ಲಿ ಹಿಡಿದು, 'ಚಾಂಗ್ ಭಲೇ ಚಿಂತಾಮಣಿ ಹರ ಹರ ಮಹದೇವ್' ಎಂದು ಐದು ಸಲ ಎತ್ತಿಟ್ಟು ಭಾಂಗ್ಯನ ಧ್ವಜಕ್ಕೆ ಐದು ಹಿಡಿ ಕೊಬ್ಬರಿ ಅರ್ಪಿಸಿ ಕೈ ಮುಗಿದು ಎಲ್ಲರಿಗೂ ಪ್ರಸಾದವನ್ನು ಹಂಚುವರು. ಈ ಸಂದರ್ಭದಲ್ಲಿ ಹೆಂಗಸರಿಗೆ ಪ್ರವೇಶವಿರುವುದಿಲ್ಲ. ಒಂದು ವೇಳೆ ಅವರು ನಮಸ್ಕರಿಸುವುದಾದರೆ, ದೂರದಿಂದಲೇ ತಮ್ಮ ಸೆರಗಿನ ಅಂಚನ್ನೂ ಎರಡೂ ಕೈಯಿಂದ ಹಿಡಿದು ಐದು ಸಲ ನಮಸ್ಕರಿಸಬಹುದು. ಇಲ್ಲಿಗೆ ಭಾಂಗ್ಯನ ಬೆಳಗಿನ ಪೂಜೆ ಮುಕ್ತಾಯವಾಗುತ್ತದೆ.

### ಭಾಂಗ್ಯಾನಿಗೆ ಬಲಿ

ಯುಗಾದಿ ಅಮವಾಸೆಯಾದ ಮರುದಿನ 'ಭಾಂಗ್ಯಾ'ನಿಗೆ ಬಲಿ ಕೊಡುವ ಕಾರ್ಯ ನಡೆಯುತ್ತದೆ. ಬೆಳಿಗ್ಗೆ ಪ್ರಾರಂಭವಾಗಿ ಮಧ್ಯಾಹ್ನ ಮೂರಗಂಟೆಯೊಳಗೆ ಈ ಕಾರ್ಯವನ್ನು ಮಾಡಿ ಮುಗಿಸುವರು. ಎಲ್ಲಾ ಹಬ್ಬ ಹರಿದಿನಗಳಿಗೆ ಹಿರಿಯ ದೈವಗಳ ಅನುಮತಿ ಪಡೆಯುವಂತೆ ಈ ಹಬ್ಬದ ಸಂದರ್ಭದಲ್ಲೂ ಸಹ ಹಿರಿಯರ ಒಪ್ಪಿಗೆ ಪಡೆದು ಪೂಜಾ ಕಾರ್ಯದಲ್ಲಿ ತೊಡಗುವರು. ಪ್ರತ್ಯೇಕವಾದ ಡೆರಾದಲ್ಲಿ ಸ್ಥಾಪಿಸಿರುವ 'ಭಾಂಗ್ಯಾ'ನ ಬಾವುಟಕ್ಕೆ ಸ್ವಲ್ಪ ದೂರದಲ್ಲಿ ಒಂದು ತ್ರಿಭುಜಾಕಾರದ ಕಲ್ಲನ್ನಿಟ್ಟು, ಅದಕ್ಕೆ

ಬಲಿಯನ್ನು ಅರ್ಪಿಸುವರು. ('ಭಾಂಗ್ಯಾ'ನ ಭಾವುಟದ ಪಕ್ಕ ಆತ ಕಾಶಿ (ವಿಶ್ವನಾಥ)ನ ಬೆಳ್ಳಿ ಮೂರ್ತಿ, ಶಂಕ ಹಾಗೂ ಗಾಂಜಾ ಸೇದುವ ಚೆಲುಮೆ ಇಟ್ಟಿರುತ್ತಾರೆ.) ಇಂದು ಭಾಂಗ್ಯನ ಹೆಸರಿನಲ್ಲಿ ಬಲಿಕೊಟ್ಟರೂ ಸಹ ಬಲಿಯ ರಕ್ತವನ್ನು ಮಾತ್ರ ಧ್ವಜದ ಪಕ್ಕ ಇಟ್ಟಿರುವ ತ್ರಿಭುಜಾಕಾರದ ಕಲ್ಲಿಗೆ ಅರ್ಪಿಸುವುದು ವಿಶೇಷ.

ಬಲಿಕೊಡುವಾಗ 'ಭಾಂಗ್ಯಾ'ನಿಗೆ ಮೊದಲ ಬಲಿ ಭಗತನದು (ಭಗತ್ರೊ ಏಕ್ ಬಕ್ರೊ) ನಂತರ ಭಕ್ತಾದಿಗಳು ತಮ್ಮ ಶಕ್ತ್ಯಾನುಸಾರ ವರಗಣಿ (ಪಟ್ಟಿ) ಎತ್ತಿ ಬಲಿಗೆ ಹೋತವನ್ನು ತರುವರು. 'ಬಲಿ'ಗೆ ಹೋತವನ್ನು ತರುವಾಗ ಅದರ ದೇಹದ ಎಲ್ಲಾ ಅಂಗಗಳನ್ನು ಪರೀಕ್ಷಿಸುವರು. ಎಲ್ಲಿಯೂ ದೇಹ ಮುಕ್ಕಾಗಿರಬಾರದು. ಮುಕ್ಕಾಗಿದ್ದರೆ ದೇವರು ಅದನ್ನು ಸ್ವೀಕರಿಸುವುದಿಲ್ಲ ಎಂಬ ನಂಬಿಕೆ ಇವರಲ್ಲಿದೆ. ಹಾಗಾಗಿ ಅತ್ಯಂತ ಎಚ್ಚರಿಕೆ ವಹಿಸಿ 'ಬಲಿ'ಗೆ ಹೋತವನ್ನು ತರುವರು. ತಂದಂತಹ ಬಲಿಯನ್ನು ಕಲ್ಲಿನ ಮೂರ್ತಿಯ ಹತ್ತಿರ ನಿಲ್ಲಿಸಿ. ಭಂಡಾರ, ಕುಂಕುಮವನ್ನು ತಲೆಗಚ್ಚಿ, ನೀರು ಚಿಮುಕಿಸಿ ಅದು ತಲೆ ಅಲ್ಲಾಡಿಸಿದಾಗ ಭಕ್ತರ ಸಹಾಯದಿಂದ ಅದನ್ನು ಮಲಗಿಸಿ 'ಭಗತ' ಬಲಿ ಕೊಡುವನು. (ಬಲಿಕೊಟ್ಟ ಕುರಿಯ ರಕ್ತವನ್ನು ಒಂದು ಪಾತ್ರೆಯಲ್ಲಿ ಹಿಡಿದಿಟ್ಟು ಭಗತನಿಗೆ ಕೊಡುವರು. ಭಗತ ಅದನ್ನು ಹಾಗೆಯೇ ಅದನ್ನು ಹಗೆಯೇ ಕುಡಿಯುತ್ತಾನೆ) ನಂತರ ಅದರ ಬಲಗಾಲನ್ನು ಮೊಳಕಾಲಿಗೆ ಕತ್ತರಿಸಿ ಬಾಯಲ್ಲಿಟ್ಟು ಎದೆ ಭಾಗದ ಸ್ವಲ್ಪ ಮಾಂಸವನ್ನು ತಲೆಯ ಮೇಲಿಡುವರು. ಉಳಿದ ಮಾಂಸವನ್ನು ಸಾರು ಮಾಡುವರು. ಇದಿಷ್ಟು ಪೂಜೆ ಭಾಂಗ್ಯನ ಭಾವುಟದ ಪಕ್ಕದಲ್ಲಿರುವ ಕಲ್ಲಿನ ಮೂರ್ತಿಗೆ. ನಂತರದ ಎಡೆ ಭಾಂಗ್ಯನಿಗೆ ಸಜ್ಜೆಯಿಂದ ಮಾಡಿದ ಐದು ರೊಟ್ಟಿ, ಗೋದಿಯಿಂದ ಮಾಡಿದ ಐದು ಚಪಾತಿಗಳನ್ನು (ಕೆಲವು ಕಡೆ ಸಜ್ಜೆ ರೊಟ್ಟಿಯನ್ನು ಪುಡಿ ಮಾಡಿ ಚಪಾತಿ ಮೇಲಿಡುವರು. ಇದಕ್ಕೆ ಚುರುಮ ಎನ್ನುವರು) ಭಾಂಗ್ಯಾನ ಭಾವುಟದ ಮುಂದಿಟ್ಟು ಅದರ ಮೇಲೆ ಸ್ವಲ್ಪ ಮಾಂಸದ ಸಾರನ್ನಿಟ್ಟು ಎಡೆ ಅರ್ಪಿಸುವರು. ಇಲ್ಲಿಗೆ ಈ ದಿನದ ಭಾಂಗ್ಯಾನ ಎರಡನೇ ಹಂತದ ಪೂಜೆ ಮುಕ್ತಾಯವಾಗುತ್ತದೆ.

**ಭಂಗೀ ಸೇವೆ (ಕುಸುಂಬೋ) :** ಯುಗಾದಿ ಅಮವಾಸೆಯ ಮರುದಿನ ಕೊನೆಯ ಆಚರಣೆ ಎಂದರೆ ಸಾಮೂಹಿಕ ಭಂಗಿ ಸೇವನೆ. ಗಾಂಜಾ ಸೊಪ್ಪನ್ನು ತಂದು ಎಲೆ ಬೀಜ ಬೇರ್ಪಡಿಸಿ ಗಾಂಜಾ ಎಲೆ, ಹಶಿಶುಂಠಿ, ಬೆಲ್ಲವನ್ನು ನುಣ್ಣಗೆ ಅರೆದು ಒಂದು ಬಿಳಿ ಬಟ್ಟೆಯಲ್ಲಿ ಕಟ್ಟಿ ನೀರು ತುಂಬಿದ ಹೊಸ ಮಣ್ಣಿನ ಕುಡಿಕೆಯಲ್ಲಿ ನೆನೆಸಿಟ್ಟು, ಅದರ ರಸವನ್ನು ತೆಗೆಯುವರು. ಹೀಗೆ ತಯಾರಿಸಿದ ಭಂಗಿಯ ರಸವನ್ನು ಒಂದು ಲೋಟದಲ್ಲಿ ತುಂಬಿ ಭಾಂಗ್ಯಾನಿಗೆ ಅರ್ಪಿಸುವರು. ನಂತರ ಭಗತನ ಮೈಯಲ್ಲಿ 'ಭಾಂಗ್ಯಾ' ಬಂದು ಆಚರಣೆಯಲ್ಲಿನ ಲೋಪದೋಷಗಳ ಬಗ್ಗೆ ತಿಳಿಸಿ ಮುಂದಿನ ಸಲದ ಆಚರಣೆಯಲ್ಲಿ ಅದರ ಸುಧಾರಣೆಯನ್ನು ಮಾಡಲು ತಿಳಿಸುವನು. ಭಕ್ತರು ತಮ್ಮ ಸುಖ ದುಃಖಗಳನ್ನು ಭಗತನೊಂದಿಗೆ ಹಂಚಿಕೊಳ್ಳುವರು. ಭಗತ ಯತಾಸ್ಥಿತಿಗೆ ಮರುಳಿದಾಗ ಎಲ್ಲರೂ ಭಾಂಗ್ಯನಿಗೆ ಕೈಮುಗಿಯವರು. ಭಗತ ಸ್ವಲ್ಪ ಭಾಂಗ್ಯವನ್ನು (ಗಂಜಾಪಾನಿ) ಸೇವಿಸಿದ ನಂತರ ಆತನ ಅನುಮತಿಯನ್ನು ಪಡೆದು ಉಳಿದವರು

ಭಾಂಗ್ಯ ಸೇವಿಸಲು ಪ್ರಾರಂಭಿಸುತ್ತಾರೆ. ಈ ಸಂದರ್ಭದಲ್ಲಿ ಚಿಕ್ಕಮಕ್ಕಳನ್ನು ಬಿಟ್ಟು ಪ್ರಾಯಕ್ಕೆ ಬಂದ ಎಲ್ಲಾ ಹುಡುಗರು ಮತ್ತು ಮುದುಕರು 'ಗಾಂಜಾ'ದಿಂದ ತಯಾರಿಸಿದ ಪಾನೀಯವನ್ನು ತಮ್ಮ ಶಕ್ತ್ಯಾನುಸಾರ ಕುಡಿಯುತ್ತಾರೆ. ಕುಡಿಯಲೇಬೇಕು ಕೂಡ. ಈ ಆಚರಣೆಯಲ್ಲಿ ಎಲ್ಲರೂ ಸಮಾನರೇ, ಕುಡಿದಾದ ಮೇಲೆ ಊಟ ಮಾಡಲು ಯಾರೂ ಶಕ್ತರಿರುವುದಿಲ್ಲ. ಒಬ್ಬರನ್ನೊಬ್ಬರು ನೋಡಿ ನಗುವುದು, ಕೇಕೆ ಹಾಕುವುದು ಹೀಗೆ ಎಚ್ಚರವಿದ್ದಷ್ಟು ಹೊತ್ತು, ವಿಚಿತ್ರವಾಗಿ ವರ್ತಿಸುವುರು. ಈದಿನ ಅವರ ಸಂತೋಷಕ್ಕೆ ಎಲ್ಲೆಯೇ ಇಲ್ಲವೆನ್ನಬಹುದು. ಈ ಆಚರಣೆಯಲ್ಲಿ ವಯಸ್ಸಿನ ಶ್ರೇಣೀಕರಣವಿರುವುದಿಲ್ಲ. ಎಲ್ಲರೂ ಸಮಾನರೂ ಈ ರೀತಿಯ ಸಾಮೂಹಿಕ ಭಂಗೀ ಸೇವನೆ ನಾಥಸಿದ್ಧರಲ್ಲೂ ನಾವು ಕಾಣಬಹುದು. "ಆದಿ ಚುಂಚನಗಿರಿ ಸೀಮೆಯ ಜೋಗಪ್ಪ, ಮೈಸೂರು ಸೀಮೆಯ ಮಂಟೇಸ್ವಾಮಿ ಸಂಪ್ರದಾಯಗಳಲ್ಲಿ 'ಭಂಗೀಸೇವೆ'ಯು ಮುಖ್ಯ ಆಚರಣೆಗಳಲ್ಲಿ ಒಂದು. ಆದರೆ ಸೂಫಿಗಳಲ್ಲಿ ಬಂಗಿ ಸೇವನೆ ಇತ್ತಾದರೂ ಅದು ಆಚರಣೆಗಳ ವಿಧಿಪೂರ್ವಕತೆ ಪಡೆದಿರಲಿಲ್ಲ. ಆದರೂ ಸೂಫಿ ಕಾವ್ಯದಲ್ಲಿ ಸುರೆಯ ರೂಪಗಳು ಬೇಕಾದಷ್ಟು ಬಳಕೆಯಾಗಿವೆ. ...ಬಹ್ರಿಯ 'ಭಂಗಾಬ್ ನಾಮ್' ದಲ್ಲಿ ೧೨ ದ್ವಿಪದಿಯ ೧೨ ಜಾಮ್ (ಪಾನ ಪಾತ್ರೆ) ಗಳಿವೆ. ಭಂಗಿ ಪುಡಿಯನ್ನು ಹಾಲಿನಲ್ಲಿ ಬೆರಸಿ ಮಾಡುವ ಭಂಗಾಬ್ (ರಾಮರಸ) ಮಹಿಮೆಯನ್ನು ಕವಿ ವರ್ಣಿಸುತ್ತಾ ಹೋಗುತ್ತಾನೆ.

"ಕುಡಿದು ಭಂಗಾಬನು ಆನಂದವಾಗಿರಿ | ತಣಿಸಲು ಹೃದಯವ ದರವೇಶಿಯಾಗಿರಿ<br>ಚಿಂದಿ ತೇಪೆಗಳ ಹಾಕುವ ಬದಲು | ಕುಡಿದೀ ಆನಂದವ ಬದುಕಿರಿ"[೬]



ಗೋಸಂಗಗಿಗಳ ಭಂಗಿ ರಸ ಸೇವನೆ

## ದೀಪಾವಳಿ

ಅಂದಃಕಾರವನ್ನು ಹೋಗಲಾಡಿಸಿ ಬೆಳಕನ್ನುಂಟು ಮಾಡುವ ಹಬ್ಬವೆಂದೇ ಪರಿಗಣಿಸಿರುವ ದೀಪಾವಳಿಯನ್ನು ಭಾರತಾದಾದ್ಯಂತ ಅತ್ಯಂತ ಸಂಭ್ರಮ ಸಡಗರದಿಂದ ಆಚರಿಸುವರು. ಗೋಸಂಗಿಗಳು ಆಚರಿಸುವ ದೀಪಾವಳಿ ಹಬ್ಬಕ್ಕೂ ಲಂಬಾಣಿಗಳು ಆಚರಿಸುವ ದೀಪಾವಳಿ ಹಬ್ಬಕ್ಕೂ ಅಲ್ಪಸ್ವಲ್ಪ ವ್ಯತ್ಯಾಸಗಳಿದ್ದರೂ, ಆಶಯಗಳು ಮಾತ್ರ ಒಂದೇಯಾಗಿರುವುದು ಕಂಡುಬರುತ್ತದೆ.

ಗೋಸಂಗಿಗಳು ಆಚರಿಸುವ ಈ ಹಬ್ಬ ಮೂರು ಮುಖ್ಯ ಅಂಶಗಳನ್ನೊಳಗೊಂಡಿದೆ. ೧. ದುಷ್ಟ ಶಕ್ತಿಗಳನ್ನು ಓಡಿಸುವುದು, ೨. ಹಿರಿಯರಿಗೆ ಗೌರವ ಸೂಚಿಸುವುದು, ೩. ಅರ್ಧ ದಿನ ಬೇಟೆ (ದಿವಾಳಿ ಅರ್ಧಕರ್) ಯಾಡುವ ಮೂಲಕ ಈ ಹಬ್ಬವನ್ನು ಆಚರಿಸುವುದು ರೂಢಿಯಲ್ಲಿದೆ.

ಪ್ರತಿಯೊಂದು ಹಬ್ಬಗಳನ್ನು ಆಚರಿಸುವಾಗ ಮೊದಲು ಹಿರಿಯರ (ದೈವಗಳ) ಒಪ್ಪಿಗೆಯನ್ನು ಮತ್ತು ಭಗತನ ಒಪ್ಪಿಗೆಯನ್ನು ಪಡೆದು ಪ್ರಾರಂಭಿಸುವರು. ಕೆಲವೊಮ್ಮೆ ಯಾವುದಾದರು 'ಬಳಿ'ಯವರು ಇಂತಹ ಸಂದರ್ಭದಲ್ಲಿ ಸತ್ತರೆ ಸತ್ತ ವ್ಯಕ್ತಿಯ 'ಬಳಿ'ಯವರ್‍ಯಾರೂ ಒಂದು ವರ್ಷದವರೆಗೂ ಈ ಹಬ್ಬವನ್ನು ಆಚರಿಸುವಂತಿಲ್ಲ. ಹಾಗಾಗಿ ಪ್ರತಿಯೊಂದು ಕಾರ್ಯವೂ ಹಿರಿಯ ಒಪ್ಪಿಗೆ ಮಾರ್ಗದರ್ಶನದಲ್ಲಿ ನಡೆಯುತ್ತದೆ. ಹಿರಿಯರಿಗೆ ದೈವಗಳೆಂದು ಸಹ ಕರೆಯುವರು. ಪ್ರತಿಯೊಂದು ಕಾರ್ಯ ಮಾಡುವಾಗ ಎರಡು 'ಬಳಿ'ಗಳ ನಡುವೆ ಮತ್ತೊಂದು 'ಬಳಿ'ಯ ವ್ಯಕ್ತಿಯನ್ನು ಸಾಕ್ಷಿಗಾಗಿ ನೇಮಿಸಿಕೊಳ್ಳುತ್ತಾರೆ. ಈತನಿಗೆ 'ಗಂಗಾ' ಎಂದು ಕರೆಯುವರು.

ನಿರಂತರ ಸಂಚಾರದಲ್ಲಿರುವ ಗೋಸಂಗಿಗಳಿಗೆ ನಿಶ್ಚಿತವಾದ ಸ್ಥಳಗಳಿರಲಿಲ್ಲ. ಹಾಗಾಗಿ ಗುಂಪು ಗುಂಪಾಗಿ ಅಲೆಮಾರಿತನ ಜೀವನ ನಡೆಸುತ್ತಿರುವ ಇವರಿಗೆ 'ದೀಪಾವಳಿ'ಯಂತಹ ಹಬ್ಬಗಳು ಒಂದು ಕಡೆ ಕೂಡುವಂತೆ ಮಾಡುತ್ತಿದ್ದವು. ಪರಸ್ಪರ ತಮ್ಮ ಬದುಕಿನ ಆಗು-ಹೋಗುಗಳ ಬಗ್ಗೆ ಚರ್ಚಿಸುತ್ತಾ ಅತ್ಯಂತ ವೈಭವಯುತವಾಗಿ ಇಂತಹ ಹಬ್ಬಗಳನ್ನು ಆಚರಿಸುತ್ತಿರುವುದು ಕಂಡುಬರುತ್ತದೆ.

### ಪೀಡೆ ಕಳುಹಿಸುವುದು

'ದೀಪಾವಳಿ' ಅಮವಾಸೆಯ ದಿನ ರಾತ್ರಿ ಪಂಜು ಹೊತ್ತಿಸಿಕೊಂಡು ಮಾಡುವ ಆಚರಣೆಗೆ 'ಪೀಡೆ ಕಳುಹಿಸುವುದು' ಎನ್ನುವರು.

ಅಮವಾಸೆಯ ಬೆಳಿಗ್ಗೆ ಖಡ್ಯಾದೇವಿ (ಚಾಮುಂಡಿ), ಕೊರಡಾವಳಿ (ಮಹಾಲಕ್ಷ್ಮಿ), ಹಿರೇಕೇರಿ (ದುರ್ಗಾದೇವಿ), ಸಿತಳಾದೇವಿ (ಯಲ್ಲಮ್ಮ), ಹೀಗೆ ಇತರೆ ದೇವರುಗಳಿಗೆ ಭಗತ ಪೂಜೆಯನ್ನು ಸಲ್ಲಿಸಿ ಹಬ್ಬ ಆಚರಿಸಲು ಅನುಮತಿಯನ್ನು ನೀಡುವುದಲ್ಲದೆ ಹಬ್ಬ ಮುಗಿಯುವವರೆಗೂ ಆಚರಣೆಯಲ್ಲಿ ಯಾವದೇ ರೀತಿಯ ಕುಂದುಂಟಾಗದಂತೆ, ಎಲ್ಲರೂ ಭಯ ಭಕ್ತಿಯಿಂದ ನಡೆದುಕೊಳ್ಳಲು ಸೂಚಿಸುವನು. ಅದರಂತೆ ಎಲ್ಲರೂ ತಪ್ಪದೆ ಪಾಲಿಸುವರು.

ಅಮವಾಸೆಯ ಸಂಜೆ ಸುಮಾರು ಏಳು ಗಂಟೆಗೆ ಭಗತ ದೇವರ ಡೇರಾದ ಹತ್ತಿರ ಬಂದು ಪ್ರತಿಯೊಂದು ದೇವರ ಹೆಸರಿನಲ್ಲಿ ಒಂದೊಂದು ಕೋಲನ್ನು ತೆಗೆದುಕೊಂಡು ಅದರ ತುದಿಗೆ ಗೇಣುದ್ದದ ತಂತಿಯನ್ನು ಸಿಕ್ಕಿಸಿ ಆ ತಂತಿಗೆ ಕೊಬ್ಬರಿ ತುಂಡುಗಳನ್ನು ಪೋಣಿಸಿ ನಂತರ ದೇವರ ಡೇರಾದ ಎದುರಿಗೆ ಸಾಲಾಗಿ ನಿಲ್ಲಿಸುವನು. (ಈ ಸಂದರ್ಭದಲ್ಲಿ ಹೆಣ್ಣು ಮಕ್ಕಳಿಗೆ ಪ್ರವೇಶವಿಲ್ಲ) ಮತ್ತೆ ಒಂದು ಮನೆಯಲ್ಲಿ ಎಷ್ಟು ಜನ ಗಂಡು ಮಕ್ಕಳಿದ್ದಾರೋ ಅವರೆಲ್ಲರೂ ಸುಮಾರು ಮೂರಡಿ ಉದ್ದದ ಒಂದೊಂದು ಕೋಲುಗಳನ್ನು ತೆಗೆದುಕೊಂಡು ಸುಮಾರು ಆರಿಂಚು ಉದ್ದದ ಹಾಗೂ ದಪ್ಪದ ದಾರವನ್ನು ಹೊಸೆದು ರುತ್ತಾಕಾರವಾಗಿ ಮಾಡಿ ಕೋಲಿನ ತುದಿಗೆ ಕಟ್ಟಿ ಎಣ್ಣೆಯಿರುವ ಬಟ್ಟಲಲ್ಲಿ ನೆನೆಯಿಡುವರು. ಅದು ಎಣ್ಣೆಯನ್ನು ಹೀರಿಕೊಂಡ ನಂತರ ಪ್ರತಿಯೊಬ್ಬರು ಒಂದೊಂದು ಕೋಲನ್ನು ಕೈಯಲ್ಲಿ ಹಿಡಿದುಕೊಂಡು ದೇವರ ಡೇರಾದ ಹತ್ತಿರಕ್ಕೆ ಬರುವರು. ಆಗ ಡೇರಾದ ಎದುರು ಕೋಲಿಗೆ ಪೋಣಿಸಿ ನಿಲ್ಲಿಸಿದ ಕೊಬ್ಬರಿ ಕೋಲುಗಳಿಗೆ ಭಗತ (ಪೂಜಾರಿ) ಬೆಂಕಿ ಹೊತ್ತಿಸುವನು. ನಂತರ ಹುಡಗರು ಎಣ್ಣೆ ಅದ್ದಿದ ಕೋಲುಗಳಿಗೆ ಕೊಬ್ಬರಿಯಿಂದ ಬೆಂಕಿಯನ್ನು ಹತ್ತಿಸಿಕೊಂಡು, ದೇವರ ಮುಂದೆ ಮೂರು ಸಲ ಆರತಿ ಮಾಡುವರು. ತದನಂತರ ತಮ್ಮ ತಮ್ಮ ಡೇರಾಗಳಿಗೆ ಹೋಗಿ ಕತ್ತಲಿರುವ ಕಡೆಗೆಲ್ಲಾ ಆ ದಿವಟಿಕೆಯಿಂದ ಬೆಳಗಿ 'ಈಡಾ ಪೀಡ ಜಾವೋ, ಬಳಿರೆ ರಾಜಾವೊ' (ಕೆಟ್ಟ ಪೀಡೆ ಹೋಗ್ಲಿ ಒಳ್ಳೆಯ ದಿನಗಳು (ಶಕುನಗಳು) ಬರಲಿ) ಎಂದು ಹೇಳುತ್ತಾ ಸಾಗುವರು. ಇದೇ ರೀತಿ ತಮ್ಮ ಸಮುದಾಯದ ಡೇರಾ ಸುತ್ತಾ, ಕೋಳಿ, ಆಕಳು, ನಾಯಿ ಇನ್ನಿತರ ಪ್ರಾಣಿಗಳ ಸುತ್ತಾ ಬೆಳಕನ್ನು ಸೂಸುತ್ತಾ ಮೇಲಿನ ವಾಕ್ಯವನ್ನು ಮತ್ತೆ ಮತ್ತೆ, ಉಚ್ಚರಿಸುತ್ತಾ ಕೊನೆಗೆ ಊರ ಹೊರಗಡೆಗೆ ಓಡಿಹೋಗುವರು. ಅಲ್ಲಿ ದೀವಟಿಗೆಯನ್ನು ತಮ್ಮ ತಮ್ಮ ತಲೆಯ ಸುತ್ತ ಮೂರು ಅಥವಾ ಐದು ಸಲ ತಿರುಗಿಸಿ, ಎಡಗಾಲು ಮೇಲ್ಮಾಡಿ ಬಿಸಾಡಿ ತಮ್ಮ ವಾಸಸ್ಥಳಕ್ಕೆ ಹಿಂತಿರುಗುವರು. ದೇವಸ್ಥಾನದ ಹತ್ತಿರಕ್ಕೆ ಬಂದು ದೇವರಿಗೆ ನಮಸ್ಕರಿಸಿ "ದೇವ್ ಹಮಾರಾ ಗರ್ ಮೇರಿ ಗಿರಪ್‌ದಾರಿ ಕಾಡ್‌ಜೆ ಕಡಕಾದೇವಿ (ತಮ್ಮ ತಮ್ಮ ಮನೆದೇವರ ಹೆಸರೇಳಿ) ಹಮಾನೆ ವರಸೆ ವರಸೆ ಪೈಸಾ, ಟಕಾಮೇ, ಬಾಲ್-ಬಚ್ಚಾಮೆ ಅಚ್ಚಿ ರಾಚೇ ಆಯಿ." (ದೇವರೇ ನಮ್ಮ ನಮ್ಮ ಮನೆಯಲ್ಲಿನ ದುಷ್ಟ ಶಕ್ತಿಗಳನ್ನು ದೂರ ಮಾಡು ಕಡಕಾದೇವಿ, ನಮಗೆ ವರ್ಷ ವರ್ಷ ಸಿರಿ-ಸಂಪತ್ತು, ಮಕ್ಕಳು ಮರಿ ಎಲ್ಲವನ್ನೂ ಚೆನ್ನಾಗಿ ಕೊಡು ತಾಯೆ) ಎಂದು ಬೇಡಿಕೊಳ್ಳುವರು. ಹೀಗೆ ಮಾಡವುದರಿಂದ ನಮಗೆ ಹತ್ತಿರುವ ದರಿದ್ರ ಮಾಯವಾಗಿ ಮುಂದೆ ಒಳ್ಳೆಯ ದಿನಗಳು ಬರುವವು, ಅಷ್ಟೇ ಅಲ್ಲ, ನಮ್ಮ ಅಲೆಮಾರಿ ಬದುಕಿನಲ್ಲಿ ನಮಗೂ, ಪ್ರಾಣಿಗಳಿಗೂ ಯಾವುದೇ ರೀತಿಯ ಪೀಡೆಗಳಾಗಲಿ, ತೊಂದರೆಗಳಾಗಲಿ ಬರುವುದಿಲ್ಲ ಎಂಬ ಬಲವಾದ ನಂಬಿಕೆ ಇವರಲ್ಲಿದೆ.

**ಹಿರಿಯರಿಗೆ ಗೌರವ**

ದೀಪಾವಳಿ ಹಬ್ಬ ಆಚರಿಸಲು ಇನ್ನೊಂದು ಬಹು ಮುಖ್ಯ ಕಾರಣವೆಂದರೆ ಸತ್ತ ಹಾಗೂ ಇರುವ ಹಿರಿಯರಿಗೆ ಗೌರವ ಸೂಚಿಸುವುದಾಗಿದೆ .ಅಮವಾಸೆ ದಿನ ರಾತ್ರಿ ಹೆಣ್ಣು ಮಕ್ಕಳು ಸ್ನಾನಾದಿಗಳನ್ನು

ಮುಗಿಸಿಕೊಂಡು ತಟ್ಟೆಯಲ್ಲಿ ಹಣತೆಯನ್ನಿಟ್ಟುಕೊಂಡು ಪ್ರತಿಯೊಂದು ಡೇರಾದ ಹತ್ತಿರ ಹೋಗಿ ಹಿರಿಯರಿಗೆ ಆರತಿ ಬೆಳಗಿ ನಮಸ್ಕರಿಸಿ ಆಶೀರ್ವಾದ ಪಡೆಯುವರು. ಆರತಿ ಬೆಳಗಿದ ಹೆಣ್ಣು ಮಕ್ಕಳಿಗೆ ಹಿರಿಯರು ಆಶೀರ್ವಾದ ಮಾಡಿ ತಮ್ಮ ಕೈಲಾದ ಕಾಣಿಕೆಯನ್ನು ನೀಡುವರು. ಹೀಗೆ ಪರಸ್ಪರ ಆಶೀರ್ವಾದ ಹಾರೈಕೆಗಳು ಈ ಸಂದರ್ಭದಲ್ಲಿ ನಡೆಯುತ್ತವೆ. ಇದೇ ರೀತಿಯ ಆಚರಣೆ ಲಂಬಾಣಿ ಸಮುದಾಯದಲ್ಲಿ ನಡೆಯುತ್ತಿದ್ದು ಇದಕ್ಕೆ ಅವರು 'ಮೇರಾ' (ಶುಭಾಶಯ ಕೋರುವುದು) ಪದ್ಧತಿ ಎನ್ನುವರು. ಈ ಎರಡು ಸಮುದಾಯದಲ್ಲಿನ ಆಚರಣೆಗಳು ಮಲೆನಾಡಿನ ಪ್ರಸಿದ್ಧ ಅಂಟಿಕೆ-ಪಂಟಿಕೆ ಆಚರಣೆಯಂತೆ ಕಂಡುಬರುತ್ತಿದೆ. ಹೀಗೆ ದೀಪಾವಳಿಯಂದು ಹಿರಿಯರಿಗೆ ಗೌರವ ನೀಡುವ ಸಲುವಾಗಿ ಮಾಡುವ ಇಂತಹ ಆಚರಣೆಗಳು ಇತರ ಸಮುದಾಯಗಳಲ್ಲೂ ಸಹ ಕಾಣಬಹುದಾಗಿದೆ.

**ದಿವಾಳಿ ಅರ್ಧಕರ್ (ದೀಪಾವಳಿಗೆ ಅರ್ಧಕರಿ) :** ಅಲೆಮಾರಿ ಗೋಸಂಗಿಗಳಿಗೆ ಬೇಟೆಯು ತಮ್ಮ ಬದುಕಿನ ಬಹುಮುಖ್ಯಭಾಗವಾಗಿದೆ. ಧಾರ್ಮಿಕ ಆಚರಣೆ ಸಂದರ್ಭಗಳಲ್ಲಿ ನಿಷೇಧಕ್ಕೊಳಪಟ್ಟ ದಿನಗಳೊಂದನ್ನು ಬಿಟ್ಟರೆ ಉಳಿದೆಲ್ಲಾ ದಿನಗಳಲ್ಲಿ ಬೇಟೆಮಾಂಸವನ್ನು ಸೇವಿಸುವರು. ಮಾಂಸದೂಟವಿಲ್ಲದ ದಿನಗಳೇ ಇಲ್ಲವೆಂದು ಹೇಳಬಹುದು. ಅಡವಿ ಜೀವದಾನಗಳ ಮಾಂಸವನ್ನೇ ಹೆಚ್ಚಾಗಿ ಸೇವಿಸುವುದರಿಂದ ಇಂದೂ ಸಹ ಯಾವುದೇ ಕಾಯಿಲೆ ಕಷಾಯಗಳಿಲ್ಲದೆ ಆರೋಗ್ಯಪೂರ್ಣವಾಗಿದ್ದಾರೆ.

ಗೋಸಂಗಿಗಳು 'ವರ್ಷದಲ್ಲಿ ಮೂರುವರೆ ಕರಿ'[೭] (ವರಸನೇ ಸಾಡೇ ತೀನ್‌ಕರು) ಮಾಡುವುದಾಗಿ ತಿಳಿಸುತ್ತಾರೆ. ಇದನ್ನೇ ಜ್ಯೋತಿಷ್ಯಶಾಸ್ತ್ರದಲ್ಲಿ 'ಸಾಡೆತೀನ್ ಮುಹೂರ್ತ' ಎಂದು ಕರೆಯುವರು. ಯುಗಾದಿ, ನಾಗರ ಪಂಚಮಿ, ಪೀರ್ಲದೇವರು ಹಬ್ಬದ ದಿನ ಒಂದೊಂದು ಕರಿ ಮಾಡಿದರೆ ದೀಪಾವಳಿ ದಿನ ಅರ್ಧ ಕರಿ ಮಾಡುತ್ತಾರಂತೆ. ಇವರೇ ಹೇಳುವಂತೆ ಮೊದಲು ತಿಳಿಸಿದ ಮೂರು ಹಬ್ಬಗಳಂದು ದಿನಪೂರ್ತಿ ಬೇಟೆಗೆ ಹೋದರೆ ದೀಪಾವಳಿ ದಿನ ಮಾತ್ರ ಅರ್ಧ ದಿನ ಬೇಟೆಗೆ ಹೋಗುವರಂತೆ, ಹೀಗೇ ವರ್ಷದಲ್ಲಿ ಮೂರುವರೆ ಕರಿ ಆಚರಿಸುತ್ತಿರುವುದಾಗಿ ತಿಳಿಸುತ್ತಾರೆ.

ಅಮವಾಸೆಯ ಮರುದಿನ ಹಿರಿಯರ ಅನುಮತಿ ಪಡೆದು ದೇವರಿಗೆ ಕೈ ಮುಗಿದು ಅಂದು ಬೆಳಿಗ್ಗೆ ಬೇಟೆಗೆ ಹೋದವರು ಮಧ್ಯಾಹ್ನಕ್ಕೆ ಹಿಂತಿರುಗಬೇಕು. ಹಿಂತಿರುಗುವಾಗ ಕನಿಷ್ಟ ಒಂದು ಬೇಟೆಯನ್ನಾದರು ತರಲೇಬೇಕು. ಒಂದು ವೇಳೆ ಅಡವಿ ಜೀವದಾನ ಸಿಗದೇ ಇದ್ದ ಪಕ್ಷದಲ್ಲಿ ಊರಲ್ಲಿರುವ ಗುಬ್ಬಿಯನ್ನಾದರೂ ತಂದು ದೇವರಿಗೆ ಎಡೆ ಕೊಡಬೇಕು. ನಂತರ ತಮ್ಮ ಶಕ್ತಾನುಸಾರ ಕುರಿ ಕೋಳಿಯನ್ನು ಬಲಿಕೊಟ್ಟು ಊಟ ಮಾಡಬಹುದು. ಹೀಗೆ ಗೋಸಂಗಿಗಳು ಬಲಿಕೊಡುವ ಮೂಲಕ ದೀಪಾವಳಿ ಹಬ್ಬವನ್ನು ಕೊನೆಗೊಳಿಸತ್ತಾರೆ.

**ಹೋಳಿ**

ಗೋಸಂಗಿಗಳು ಆಚರಿಸುವ ಪ್ರಮುಖ ಹಬ್ಬಗಳಲ್ಲಿ ಹೋಳಿಯು ಒಂದು. ಫಲ್ಗುಣದ ಪೂರ್ಣ ಹುಣ್ಣಿಮೆಯಂದು ಆಚರಿಸುವ ಹೋಳಿಯನ್ನು 'ಕಾಮನಹಬ್ಬ' ಎಂದೂ ಸಹ ಕರೆಯುತ್ತಾರೆ. ಕರ್ನಾಟಕದಲ್ಲಿ

ವಾಸಿಸುವ ಬಹುತೇಕ ಸಮುದಾಯಗಳು ಹೋಳಿ ಹಬ್ಬವನ್ನು ಅತ್ಯಂತ ಸಂಭ್ರಮ ಸಡಗರದಿಂದ ಆಚರಿಸುವರು. ಇದನ್ನು ಮೋಜಿನ ಹಬ್ಬವೆಂದೇ ತಿಳಿಯುತ್ತಾರೆ. ದುಷ್ಟ ಶಕ್ತಿಗಳನ್ನು ದಮನಮಾಡಿ, ಮಕ್ಕಳು ಮರಿಗೆ ಒಳ್ಳೆಯದನ್ನು ಮಾಡು, ನಮಗೆ ಸಿರಿ ಸಂಪತ್ತು ನೀಡಿ ಕಾಪಾಡು ಎಂದು 'ಹೋಳಿ' ಆಚರಣೆಯ ಸಂದರ್ಭದಲ್ಲಿ ಗೋಸಂಗಿಗಳು ಪ್ರಾರ್ಥಿಸಿ ಕೊಳ್ಳುವರು. ಈ 'ಹಬ್ಬ' ಅವರ ಮುಂದಿನ ಪ್ರಯಾಣದ ಮಾರ್ಗಸೂಚಿಯೂ ಹೌದು.

### ೩೦-೪೦ ವರ್ಷಗಳ ಹಿಂದಿನ ಹೋಳಿ ಆಚರಣೆ

ವಕ್ತೃಗಳೇ ಹೇಳುವಂತೆ ಸುಮಾರು ಮೂವತ್ತು ನಲವತ್ತು ವರ್ಷಗಳ ಹಿಂದೆ ಗೋಸಂಗಿಗಳು ಆಚರಿಸುವ ಹೋಳಿ ಹಬ್ಬದ ಮುನ್ನಾ ದಿನ ಪುರುಷರ ನಡುವೆ ಸಾಹಸ ಪ್ರದರ್ಶನವೊಂದು ನಡೆಯುತ್ತಿದ್ದು ಈ ಪ್ರದರ್ಶನದಲ್ಲಿ ಪುರುಷರು ಗೆದ್ದರೆ ಮಾತ್ರ ಹೋಳಿ ಸುಡುತ್ತಿದ್ದರಂತೆ.

ಉದ್ದನೆಯ ಬಿದಿರಿನ ಕೋಲಿಗೆ ಬಾವುಟವನ್ನು ಕಟ್ಟಿ ನೆಲದಲ್ಲಿ ಭದ್ರವಾಗಿ ಹುಗಿದು ಅದರ (ಚಿತ್ರ ನೋಡಿ) ಅದರ ಸುತ್ತ ನಾಲ್ಕು ಚಿಕ್ಕ ಗೂಟಗಳನ್ನು ನೆಟ್ಟು ಈ ನಾಲ್ಕು ಗೂಟಗಳಿಗೆ ನಾಲ್ಕು ಹಗ್ಗಗಳನ್ನು ಕಟ್ಟಿ, ನಾಲ್ಕು ಹಗ್ಗಗಳನ್ನು ಉದ್ದನೆಯ ಬಾವುಟದ ಬಿದಿರಿನ ಕೋಲಿಗೆ ಮಧ್ಯದಲ್ಲಿ ಬಿಗಿಯುವರು. ನಂತರ ಈ ಸಮುದಾಯದ ಹೆಂಗಸರೆಲ್ಲರೂ ಸೇರಿ ಒಬ್ಬೊಬ್ಬರು ಒಂದೊಂದು ಬಡಿಗೆಯನ್ನು ಕೈಯಲ್ಲಿಡಿದು ಬಾವುಟದ ಸುತ್ತಾ ನಿಲ್ಲುವರು. ಹೀಗೆ ನಿಂತಂಥ ಹೆಂಗಸರ ಜೊತೆ ಹೋರಾಡಿ ಪುರುಷರು ಬಾವುಟ ಕೀಳಬೇಕು. ಈ ಸಂದರ್ಭದಲ್ಲಿ ಅಣ್ಣ ತಮ್ಮ, ಅಪ್ಪ, ಗಂಡ, ಮಾವ ಎಂಬ ಬೇಧ ಬಾವವಿಲ್ಲದೆ ಬಡಿಯುವ ಸಂಪೂರ್ಣ ಹಕ್ಕು ಹೆಂಗಸರಿಗಿರುತ್ತದೆ.



ಗೋಸಂಗಿಗಳ ಹಿಂದಿನ ಹೋಳಿ ಆಚರಣೆ

ಈ ಸಂದರ್ಭದಲ್ಲಿ ನಾಲ್ಕು ಚಿಕ್ಕ ಗೂಟಗಳಿಗೆ, ನಾಲ್ಕು ಜನ, ಮಧ್ಯದಲ್ಲಿರುವ ಧ್ವಜಕ್ಕೆ ಒಬ್ಬ ಹೀಗೆ ಒಟ್ಟು ಐದು ಜನ ಪುರುಷರು ಸೇರಿ ಧ್ವಜವನ್ನು ಕೀಳಲು ಪ್ರಯತ್ನಿಸುವರು. ಕೀಳಲು ಬಂದ ಪುರುಷರಿಗೆ, ಹೆಂಗಸರಿಂದ ಹೊಡೆತಗಳು ತಪ್ಪಿದ್ದಲ್ಲ. ಅಣ್ಣ, ತಮ್ಮ, ಅಪ್ಪ, ಮಾವ, ಗಂಡ ಎಂಬ ಭೇದವಿಲ್ಲದೆ ಎಲ್ಲರಿಗೂ ಹೊಡೆಯುವರು. ಒಂದು ವೇಳೆ ಬಾವುಟ ಕೀಳಲಾಗದೇ ಮೂರ್ನಾಲ್ಕು ದಿನಗಳ ವರೆಗೆ ಹೊರಗೆ ಇದ್ದರೆ ಅಂದು ಪುರುಷರ್‍ಯಾರೂ ಡೇರಾವನ್ನು ಪ್ರವೇಶಿಸುವಂತಿಲ್ಲ. ಕೆಲವೊಮ್ಮೆ ಬಾವುಟ ಕೀಳಲಾಗದೆ ಇದ್ದ ಪ್ರಸಂಗವನ್ನು ವಕ್ತೃಗಳು ನೆನೆಯುತ್ತಾರೆ. ಅಷ್ಟೇ ಅಲ್ಲ ಈ ರೀತಿಯ ಆಚರಣೆ ಸಂದರ್ಭದಲ್ಲಿ ಹೆಂಗಸರಿಂದ ಹೊಡೆತ ತಿಂದ ಎಷ್ಟೋ ಜನ ಪುರುಷರು ಅಂಗವಿಕಲರಾಗಿದ್ದರಂತೆ ಆದ್ದರಿಂದ ಇಂತಹ ಸಾಹಸ ಪ್ರದರ್ಶನದ ಆಚರಣೆಯನ್ನು ಗೊಸಂಗಿಗಳು ಇಂದು ಸಂಪೂರ್ಣ ನಿಲ್ಲಿಸಿದ್ದು, ಬೇರೊಂದು ಬಗೆಯಲ್ಲಿ ಹೋಳಿಯನ್ನು ಆಚರಿಸುತ್ತಿರುವುದು ಕಂಡುಬರುತ್ತದೆ.

**ಇಂದು ಆಚರಿಸುತ್ತಿರುವ ಹೋಳಿ ವಿಧಾನ**

ಗೋಸಂಗಿಗಳು ಆಚರಿಸುವ ಯಾವುದೇ ಹಬ್ಬಗಳಿಗೆ ಮೊದಲು ಹಿರಿಯರ ಅಪ್ಪಣೆ ಪಡೆಯಲೇಬೇಕು. ಇದು ಅವರ ಸಾಮಾಜಿಕ ಸಂಘಟನೆಯಾಗಿದ್ದು, ಸಮುದಾಯದ ಒಳಿತೂ ಹೌದು. ಹೋಳಿ ಹಬ್ಬದ ದಿನ ಬೆಳಿಗ್ಗೆ ಸಮುದಾಯದ ಎಲ್ಲರ ಜೊತೆ ಹಿರಿಯ ದೈವಗಳು ಚರ್ಚಿಸಿ ಹಬ್ಬವನ್ನು ಸುಗಮವಾಗಿ ನಡೆಸಿಕೊಂಡೋಗಲು ಅನುಮತಿ ನೀಡುವರು.

ಹೋಳಿ ಹಬ್ಬದ ದಿನ ಸಂಜೆ, ಡೇರಾಗಳ ಮುಂದುಗಡೆ ಸ್ವಲ್ಪ ದೂರದಲ್ಲಿ ಹೋಳಿ ಸುಡಲು ಸ್ಥಳವನ್ನು ಸ್ವಚ್ಛ ಮಾಡಿ ಒಂದು ಚಿಕ್ಕ ಕುಣಿಯನ್ನು ತೋಡುವರು. ಇದಾದ ಮೇಲೆ ಆ ಸ್ಥಳವನ್ನು ಆಕಳು ಸಗಣಿಯಿಂದ ಸಾರಿಸಿ ಸ್ವಚ್ಛ ಮಾಡಿದ ನಂತರ ದೈವದವರು ಅಲ್ಲಿಗೆ ಬಂದು ಕುಣಿಯಲ್ಲಿ ಅಡಿಕೆ ಮುಚ್ಚಲು ಸಿದ್ಧರಾಗುತ್ತಾರೆ. ಅಡಿಕೆ ಮುಚ್ಚುವ ಕಾರ್ಯಕ್ಕಿಂತ ಮುಂಚೆ ತಮ್ಮ ತಮ್ಮ ಬೆಡಗುಗಳಲ್ಲಿ ಹಿಂದೆ ನಡೆದ ನ್ಯಾಯ-ಅನ್ಯಾಯಗಳ ಬಗ್ಗೆ ಚರ್ಚೆ ನಡೆಯುತ್ತದೆ. ಯಾವ ಬೆಡಗಿನವರು ಸಮಾಜದ ನೀತಿ ನಿಯಮಗಳನ್ನು ಸರಿಯಾಗಿ ಪಾಲಿಸಿದ್ದಾರೆ ಅಂತವರು ಈ ಅಡಿಕೆ ಮುಚ್ಚುವ ಪವಿತ್ರ ಕಾರ್ಯ ನೆರವೇರಿಸಬೇಕೆಂದು ತೀರ್ಮಾನಿಸುವರು. ಇಂತಹ ಕಾರ್ಯ ಮಾಡುವಾಗ 'ಗಂಗಾ'[5] ಇದ್ದೇ ಇರಬೇಕು. ಇಂತಹ ಚರ್ಚೆಗಳ ಸಂದರ್ಭದಲ್ಲಿ ಪರಿಸ್ಥಿತಿ ವಿಕೋಪಕ್ಕೆ ಹೋದಾಗ ಅದೆಲ್ಲವನ್ನು ತಿಳಿಗೊಳಿಸಿ ಒಂದು ನಿರ್ಣಯಕ್ಕೆ ಬರುವ ಹಕ್ಕು ಗಂಗಾನಿಗಿರುತ್ತದೆ. ಹಾಗಾಗಿ ಈ ಸಮುದಾಯದ ಪ್ರತಿಯೊಂದು ಕಾರ್ಯದಲ್ಲಿ ಗಂಗಾ ಮುಖ್ಯ ನ್ಯಾಯದೀಶನಾಗಿ ಕಾರ್ಯನಿರ್ವಹಿಸುವನು. ಹೀಗೆ ಚರ್ಚಿಸಿದ ನಂತರ ಅರ್ಹತೆಯುಳ್ಳ ವ್ಯಕ್ತಿಯನ್ನು ಆರಿಸಿ ಹೋಳಿ ಕುಣಿಯಲ್ಲಿ ಅಡಿಕೆ ಮುಚ್ಚಲು ಅನುಮತಿ ನೀಡುವರು. ಅನುಮತಿ ನೀಡುವಾಗ ಎಲ್ಲರನ್ನೂ ಉದ್ದೇಶಿಸಿ ದೈವದವರು ಎಚ್ಚರಿಕೆ ಕೊಡುವರು. "ಬಾಯಿ ಕಾಕಾವೋ ಜಾತ್ ಜಮಾತಾವೊ ಟಾಬರ್, ಚಾರು ಆಜ್ ಹೋಳಿ ಬಳುಮೋಗಿ ಸಾಂಟೋ ಉಬೋ ಕರೋಗಿಯಾ, ಸಾಂಟರೆ ಬಹುಂತಾಲ್‌ವ್ಹಾಣ, ಬೂಟ್, ನಾಕೀನ್ ಮತ್ ಪರೋಜೋ ಜೇ ಫರವಾರ ಉನೆ ದಂಡ

ಮೂರವಾರರೇ.... (ಹಿರಿಯರೆ, ಕಿರಯರೆ ನೆರದಂತ ಮಕ್ಕಳು ಮರಿಗಳೇ ಇವತ್ತು ಹೋಳಿಯನ್ನು ಸುಡಲು ಕಬ್ಬು ನಿಲ್ಲಿಸ್ತಾ ಇದೀವಿ, ಕಬ್ಬಿನ ಸುತ್ತ, ಚಪ್ಪಲಿ, ಬೂಟುಗಳನ್ನು ಕಾಲಲ್ಲಿ ಹಾಕಿ ಯಾರೂ ತಿರಗಾಡ ಬ್ಯಾಡಿ ಹಾಗೇನಾದ್ರು ತಿರುಗಾಡಿದರೆ ಅಂತವರಿಗೆ ದಂಡ ವಿಧಿಸಲಾಗುವುದು) ಎಂದು ಹೇಳಿ ಮುಂದಿನ ಕೆಲಸಕ್ಕೆ ಸಿದ್ಧರಾಗುವರು.

ಹೋಳಿ ಕುಣಿಯಲ್ಲಿ ಅಡಿಕೆ ಮುಚ್ಚಿದ ನಂತರ ಬೇರು ಸಹಿತ ಕಿತ್ತುತಂದ ಉದ್ದನೆಯ ಕಬ್ಬಿನ ಕೋಲನ್ನು ಕುಣಿಯಲ್ಲಿಟ್ಟು ಮುಚ್ಚುವರು. ನಂತರ ಕಬ್ಬಿನ ಗರಿಗಳನ್ನು ಕೂಡಿಸಿ ದಾರದಿಂದ ಬಿಗಿಯುವರು. (ಚಿತ್ರ ನೋಡಿ) (ಜೊತೆಗೆ ಔಡಲಗಿಡ ಹಾಗೂ ಹತ್ತಿಗಿಡವನ್ನು ಸೇರಿಸಿ ಕಟ್ಟುವರು.) ನಂತರ ನಿಲ್ಲಿಸಿದ ಕಬ್ಬಿನ ಕೋಲಿನ ಸುತ್ತ ಕಬ್ಬಿನ ಗರಿ ಅಥವಾ ಒಣಗಿದ ಪುಳ್ಳೆಗಳನ್ನು ಹಾಕುವರು. ತದನಂತರ ಒಂದೊಂದು ಮನೆಯಿಂದ ಚಿಕ್ಕ ಚಿಕ್ಕ ಐದ್ಕೆದು ಜೋಳದ ರೊಟ್ಟಿಗಳನ್ನು ತಂದು ಕಬ್ಬಿನ ಕೋಲಿಗೆ ಕಟ್ಟುವರು. ಇದಾದ ಮೇಲೆ ರಾತ್ರಿ ಒಂಬತ್ತು ಗಂಟೆಯೊಳಗೆ ಎಲ್ಲರೂ ಊಟ ಮುಗಿಸಿಕೊಂಡು ದೈವಗಳ ಮುಖಾಂತರ ಹೋಳಿ ಗೂಡಿಗೆ ಬೆಂಕಿ ಹೊತ್ತಿಸಿ ಎಲ್ಲರೂ ಬೆಂಕಿ ಸುತ್ತಾ ಸುತ್ತುತ್ತಾ ಲಭೋ ಲಭೋ ಹೊಯ್ಕೊಳ್ಳುವರು. ಹೀಗೆ ಹೊಯ್ಕೊಳ್ಳುವಾಗ ಅಶ್ಲೀಲ ಪದಗಳನ್ನು ಹಾಡುತ್ತಾರೆ. ಯಾರ ಅಂಜಿಕೆ ಇಲ್ಲದೆ ಒಬ್ಬರನ್ನೊಬ್ಬರು ಅಶ್ಲೀಲವಾಗಿ 'ಉರ ಅಂಡ್ ಉರಿ ಜೋಗುರಿ ಗಳಾಮೆರೆ' (ಅವನ ತೊರಡು ಅವನ ಹೆಂಡತಿ ಕುತ್ತಿಗ್ಯಾಗೋ) ಎಂದು ಬೈದು ಕೊಳ್ಳುವರು. ಯಾರು ಎಷ್ಟು ಬೇಕಾದರು ಇಂತಹ ಅಶ್ಲೀಲ ಮಾತುಗಳನ್ನಾಡಬಹುದು. ಇಲ್ಲಿ ಯಾರೂ ಅವುಗಳನ್ನು ಅಪಾರ್ಥ ಮಾಡಿಕೊಳ್ಳುವಂತಿಲ್ಲ. ಹೀಗೆ ಬೆಂಕಿಯ ಸುತ್ತಾ ಕೇಕೆ ಹಾಕುತ್ತಾ ಸುತ್ತುವರು. 'ಹೋಳಿರೋ ಸಾಂಟೋ ಪಡಿಯೇ ಪೀಕ್ ಗಣೋ ಮಾಂಕಾವವೆ ಚಲಿಯೋ ಉಟ್ಯಾಡಿ' (ಕಬ್ಬು ಬೀಳುವ ಕಡೆ ಬೆಳೆ ಜಾಸ್ತಿ, ಹಾಗಾಗಿ ವ್ಯಾಪಾರ ಮಾಡಲು ಆ ಕಡೆ ಹೋಗುತ್ತಿದ್ದೇನೆ) ಎಂದು ಕಬ್ಬು ಬಿದ್ದ ದಿಕ್ಕಿನ ಕಡೆಗೆ ಸಂಚಾರ ಮಾಡುವರು. ಒಂದು ವೇಳೆ ಕಬ್ಬು ಅವರ ಡೇರಾದ ಕಡೆಗೆ ಬಿದ್ದರೆ ಆಚರಣೆಯಲ್ಲಿ ಏನೋ ಲೋಪ ಉಂಟಾಗಿದೆಯೆಂದು ಮರುದಿನ ಅಲ್ಲಿಂದ ಮುಂದಿನೂರಿಗೆ ಪ್ರಯಾಣ ಬೆಳೆಸುವರು. ಹೋಳಿ ಬಗೆಗಿನ ಈ ರೀತಿಯ ನಂಬಿಕೆ ಲಂಬಾಣಿಗಳಲ್ಲಿಯೂ ಇರುವುದಾಗಿ ತಿಳಿದುಬರುತ್ತದೆ.

ಹೋಳಿ ಮುಗಿದ ಮರುದಿನ ಬೆಳಿಗ್ಗೆ ಐದು ಗಂಟೆ ಹೊತ್ತಿಗೆ, ಮದುವೆಯಾಗದ ಹೆಣ್ಣು ಮಕ್ಕಳು ಸ್ನಾನಾದಿಗಳನ್ನು ಮುಗಿಸಿಕೊಂಡು ಪ್ರತಿಯೊಂದು ಮನೆಯಿಂದ ಒಂದೊಂದು ತುಂಬಿದ ಕೊಡದ ನೀರನ್ನು ತೆಗೆದುಕೊಂಡು ಹೋಳಿ ಸುಟ್ಟು ಕುಣಿಯಸುತ್ತಾ ಹಾಕುವರು. ಹೀಗೆ ಹಾಕುವುದರಿಂದ 'ಸವಾಸಿಣಿರೆ ಹತ್ತೀನ್ ಪಾಣಿ ನಾಕ್‌ತಾಕ್ ದೇವ ಸಾಂತರೇ' (ಕನ್ಯಾಮಣಿ ಕೈಯಿಂದ ನೀರು ಹಾಕಿಸಿದರೆ ದೇವರು ಶಾಂತನಾಗುತ್ತಾನೆ) ಎಂಬ ನಂಬಿಕೆ ಇವರಲ್ಲಿದೆ. ಹಾಗೆಯೇ ನೀರು ಹಾಕುವಾಗ 'ತಡಕರ್ ದನ್ ಜಾ ಪಾಣೇರೇ ದನ್ ಆವ್' (ಬಿಸಿಲು ಕಾಲ ಹೋಗಿ ಮಳೆಗಾಲ ಬರಲಿ) ಎಂದು ಹೇಳಿ ನೀರು ಹಾಕುವುರು. ಹೀಗೆ ಮಾಡಿದರೆ ಮಳೆ ಬೆಳೆ ಸಮೃದ್ಧಿಯಾಗುವುದೆಂಬ ನಂಬಿಕೆ ಇವರಲ್ಲಿದೆ.

## ಕರಿ ಮಾಡುವುದು

ಹೋಳಿ ಮುಗಿದ ಮರುದಿನ ಮಾಡುವ 'ಬಲಿ' ಕಾರ್ಯಕ್ಕೆ ಕರಿ ಮಾಡುವುದು ಎಂದು ಅರ್ಥೈಸಿಕೊಂಡಿದ್ದಾರೆ. ಅಂದು ಹಿರಿಯರೆಲ್ಲರು ಸೇರಿ ಕರಿ ಆಚರಿಸುವದಕ್ಕೆ ಅನುಮತಿ ನೀಡುವರು. 'ಭಗತ' ಇತರರ ಸಹಾಯದಿಂದ ತಾವು ವಾಸ ಮಾಡುವ ಡೇರಾಗಳ ಬಲ ಭಾಗಕ್ಕೆ ಒಂದು ಸ್ಥಳವನ್ನು ಸ್ವಚ್ಛ ಮಾಡಿ, ಆಕಳು ಸಗಣಿಯಿಂದ ಸಾರಿಸಿ, ಒಂದು ಪ್ರತ್ಯೇಕವಾದ ಡೇರಾವನ್ನು ನಿರ್ಮಿಸುವರು. ಆ ಡೇರಾದ ಒಳಗಡೆ ವಿವಿಧ ಬಟ್ಟೆಗಳಿಂದ ಸಾಂಕೇತಿಸಿರುವ ದೇವರ ಬಾವುಟಗಳನ್ನು ತಂದು ನಿಲ್ಲಿಸಿ ಡೇರಾದ ಸುತ್ತಾ ಒಂದು 'ವೃತ್ತ'ವನ್ನು ಹಾಕುವರು. ಈ ಡೇರಾದ ಒಳಗಡೆ 'ಭಗತ' ಹಾಗೂ ಹಿರಿಯ ದೈವಗಳಿಗೆ ಮಾತ್ರ ಪ್ರವೇಶವಿರುತ್ತದೆ. ಅಂದು ಬಲಿಕೊಡಲು ಮನೆಗೊಂದರಂತೆ ನಾಟಿ ಹುಂಜಗಳನ್ನು ತಂದ ಭಕ್ತಾದಿಗಳು ಡೇರಾದ ಹೊರಗಡೆ ಸಾಲಾಗಿ ಕುಳಿತು 'ಭಗತ'ನ ಅನುಮತಿಗಾಗಿ ಕಾಯುವರು. 'ಭಗತ'ನ ಮೈಯಲ್ಲಿ ದೇವರು ಬಂದು ಮುಂದಿನ ಕೆಲಸ ಕಾರ್ಯಗಳ ಬಗ್ಗೆ ಸೂಚನೆಗಳನ್ನು ಕೊಡುವನು. ಭಗತ ಯತಾಸ್ಥಿತಿಗೆ ಮರಳಿದ ನಂತರ ಬಲಿಕೊಡಲು ಅಣಿಯಾಗುವನು. ಬಲಿ ಕೊಡುವುದು ಯಾರಿಗೂ ಕಾಣದಂತೆ ಡೇರಾದ ಪ್ರವೇಶ ದ್ವಾರಕ್ಕೆ ಕೆಂಪು ಬಟ್ಟೆಯನ್ನು ಅಡ್ಡ ಬಿಟ್ಟಿರುತ್ತಾರೆ. ಬಲಿಕೊಡುವಾಗ ಮೊದಲು ಕೆಂಪು ಹುಂಜವನ್ನು ಬಲಿಕೊಡುವನು. ಅಂದು ಯಾರೂ ಮದ್ಯವನ್ನು ಸೇವಿಸುವಂತಿಲ್ಲ. ಒಂದು ವೇಳೆ ಹಟಕ್ಕೆ ಬಿದ್ದು ಸೇವಿಸಿದ್ದೇ ಆದಲ್ಲಿ ಅಂತವರಿಗೆ ದಂಡ ವಿಧಿಸುವುದಷ್ಟೇ ಅಲ್ಲ, ಅವನ ನಿಷೆ ಇಳಿಯುವವರೆಗೂ ಡೇರಾದ ಸಮೀಪಕ್ಕೆ ಬಿಟ್ಟುಕೊಳ್ಳುವುದಿಲ್ಲ. ಹಾಗಾಗಿ ಇಂತಹ ಧಾರ್ಮಿಕ ಆಚರಣೆಗಳ ಸಂದರ್ಭದಲ್ಲಿ ಸಮುದಾಯದ ಎಲ್ಲರೂ ಅತ್ಯಂತ ಭಯ ಭಕ್ತಿಯಿಂದ ದೇವರ ಕಾರ್ಯದಲ್ಲಿ ಭಾಗವಹಿಸಿ ಕಾರ್ಯ ಸುಗಮವಾಗಿ ನಡೆಯಲು ಸಹಕರಿಸುತ್ತಾರೆ.

'ಬಲಿ' ಕಾರ್ಯ ಮುಗಿಯುತ್ತಿದ್ದಂತೆ 'ಭಗತ'ನ ಮೈಯಲ್ಲಿ ದೇವರು ಬರುವುದು. ಆಗ ಭಕ್ತಾದಿಗಳೆಲ್ಲ ಕೈಮುಗಿದು, ಮಾಡಿದ ಕಾರ್ಯದಲ್ಲಿ ಲೋಪದೋಷಗಳೇನಾದರೂ ಇದ್ದಾವೆಯೇ ಅಥವಾ ದೈವಕ್ಕೇನಾದರೂ ಅಪಚಾರವಾಗಿದೆಯೇ ಎಂದು ಕೇಳುವರು. ಇನ್ನೂ ಕೆಲವರು ಮಕ್ಕಳಾಗದವರು ಮಕ್ಕಳ ಫಲ, ವ್ಯಾಪರಕ್ಕೆ ಹೋಗುವವರು ವ್ಯಾಪಾರದ ಬಗ್ಗೆ ಹೀಗೆ ಈ ಸಂದರ್ಭದಲ್ಲಿ ಹಲವು ಹತ್ತು ಪ್ರಶ್ನೆಗಳಿಗೆ 'ಭಗತ'ನಿಂದ ಉತ್ತರ ಪಡೆದು ಅದರಂತೆ ನಡೆದುಕೊಳ್ಳುವರು.

'ಬಲಿ' ಅರ್ಪಿಸಿದ ನಂತರ 'ತಲೆ' ಮತ್ತು ಕಾಲು ಭಾಗಗಳನ್ನು ಬಿಟ್ಟು ಉಳಿದೆಲ್ಲಾ ಮಾಂಸವನ್ನು ಸಾರು ಮಾಡುವರು. ದೇವರ ನೈವೇದ್ಯಕ್ಕೆ ಐದೈದು ಚಪಾತಿಯನ್ನು ತಯಾರಿಸಿ ಅದರ ಮೇಲೆ ಮಾಂಸದ ಸಾರು ಇಟ್ಟು ಎಡೆ ಅರ್ಪಿಸುವರು. ಪೂಜೆಯಾದ ನಂತರ ಭಗತ ಪ್ರಸಾದವನ್ನು ಸ್ವೀಕರಿಸಿದ ನಂತರ ಉಳಿದವರು ಪ್ರಸಾದವನ್ನು ಸ್ವೀಕರಿಸಲು ಅನುಮತಿ ನೀಡುತ್ತಾನೆ.

ಗೋಸಂಗಿಗಳು ಹೋಳಿ ಹಬ್ಬದ ಮೊದಲ ದಿನ ಮಕ್ಕಳ ರಕ್ಷಣೆ ಹಾಗೂ ದುಷ್ಟಶಕ್ತಿಗಳ ನಿವಾರಣೆಗಾಗಿ ಹೋಳಿಯನ್ನು ಸುಟ್ಟರೆ, ಮರುದಿನ ಹೋಳಿ ಸುಟ್ಟು ಕುಣಿಯ ಸುತ್ತ ನೀರನ್ನು ಹಾಕುವರು.

ಹೀಗೆ ಮಾಡುವುದರಿಂದ ಮಳೆ ಸಮೃದ್ಧಿಯಾಗಿ ಆಗುತ್ತದೆ ಎಂಬ ನಂಬಿಕೆ ಇವರಲ್ಲಿದೆ. ಕೊನೆಯ ದಿನದ 'ಕರಿ' ಆಚರಣೆಯಂದು ತಮ್ಮ ತಮ್ಮ ಮನೆ ದೇವರುಗಳಿಗೆ ಬಲಿ ಕೊಟ್ಟು ಯಾವಾಗಲೂ ಸುಖ ಸಂಪತ್ತು ನೀಡಿರೆಂದು ಬೇಡಿಕೊಳ್ಳುವರು. ಹೀಗೆ ಗೋಸಂಗಿಗಳು ಮೂರು ಮುಖ್ಯ ಆಶಯಗಳನ್ನಿಟ್ಟುಕೊಂಡು ಹೋಳಿ ಹಬ್ಬವನ್ನು ಆಚರಿಸುತ್ತಿರುವುದು ಕಂಡುಬರುತ್ತಿದೆ.

**ಗೋದಿಬತ (ಮೋಡೋ ಬಂದ್) :** ಸರ್ವಚೇತನವಾದಿಗಳಾದ ಗೋಸಂಗಿಗಳು ಯಾವುದೇ ಹಬ್ಬ ಆಚರಣೆಗಳಿರಲಿ ಅತ್ಯಂತ ಕಟ್ಟುನಿಟ್ಟಾಗಿ ಪಾಲಿಸಿಕೊಂಡು ಬರುವರು. ಇವರು ಆಚರಿಸುವ ಆಚರಣೆಗಳಲ್ಲಿ ಗೋದಿ ನಿಲ್ಲಿಸುವ (ಗೋದಿಬತ) ಆಚರಣೆ ವಿಶಿಷ್ಟವಾಗಿದೆ. ಈ ಆಚರಣೆ ಖಾಗಳ್ ಬೆಡಗಿನಲ್ಲಿ ಮಾತ್ರ ಕಂಡುಬರುತ್ತದೆ. ಇದಕ್ಕೆ ಅವರು 'ಮೋಡೋಬಂದ್' ಎಂದು ಕರೆಯುವರು. ಮದುವೆಯಾದ ಹೆಣ್ಣು ಮಕ್ಕಳು ಮಾತ್ರ ಆಚರಿಸುವ ವಿಶಿಷ್ಟವಾದ ಈ ಆಚರಣೆ ಪ್ರತಿ ವರ್ಷ ಜನವರಿ ತಿಂಗಳಿನಲ್ಲಿ ನಡೆಯುತ್ತದೆ. ಈ ತಿಂಗಳಿನಲ್ಲಿ ಬಂದ ಹೊಸಗೋದಿಯನ್ನು ಅಮವಾಸೆಯಿಂದ ಒಂದು ತಿಂಗಳಕಾಲ ತಿನ್ನುವಂತಿಲ್ಲ. ಇದಕ್ಕೆ ಅವರು ಗೋದಿ ನಿಲ್ಲಿಸುವುದು ಎನ್ನುವರು. ಮದುವೆಯಾದ ಹೊಸದರಲ್ಲಿ ಹೆಣ್ಣುಮಕ್ಕಳು ಮಕ್ಕಳ ಫಲಕ್ಕಾಗಿ, ಮಕ್ಕಳ ಸುರಕ್ಷತೆಗಾಗಿ ಈ ವ್ರತವನ್ನು ಕೈಗೊಳ್ಳುತ್ತೇವೆಂದು ಹೇಳುತ್ತಾರೆ.

ಅಲೆಮಾರಿಗಳಾದ ಗೋಸಂಗಿಗಳು ದೇವರ ಕಾರ್ಯಗಳನ್ನು ಅತ್ಯಂತ ಕಟ್ಟುನಿಟ್ಟಾಗಿ ಮಾಡುವುದರಲ್ಲಿ ನಿಸ್ಸೀಮರು. ಹೆಣ್ಣುಮಕ್ಕಳು ಮೋಡೊಬಂಧ್ ಆಚರಣೆಯಲ್ಲಿದ್ದಾಗ ಪುರುಷರು ಭಿಕ್ಷೆ ಬೇಡಿ ತಂದ ಕಾಳಿನಲ್ಲಿ ಗೋದಿ ಕಾಳು ಇದ್ದಾವೋ ಇಲ್ಲವೊ ಎಂದು ಪರೀಕ್ಷಿಸಿ ಅಡಿಗೆ ಮಾಡುವಳು. ಈ ಒಂದು ತಿಂಗಳಲ್ಲಿ ಹೊರಗಡೆ ಎಲ್ಲಿಯೂ ಊಟ ಮಾಡುವಂತಿಲ್ಲ. ಚಹಾ ಕುಡಿಯುವಂತಿಲ್ಲ. ಅತ್ಯಂತ ಎಚ್ಚರಿಕೆಯಿಂದ ವ್ರತ ಆಚರಿಸುವರು. ಆಚರಣೆಯಲ್ಲಿ ಸ್ವಲ್ಪ ದೋಷವಾದರೂ ಅಪಾಯ ತಪ್ಪಿದ್ದಲ್ಲ ಎಂದು ನಂಬಿರುವ ಇವರು ಮೈಯೆಲ್ಲಾ ಕಣ್ಣಾಗಿ, ಭಯಭಕ್ತಿಯಿಂದ ನಡೆದುಕೊಳ್ಳುವರು. ಸ್ವಲ್ಪ ವ್ಯತ್ಯಾಸದೊಂದಿಗೆ ಇದೇ ರೀತಿಯ ಆಚರಣೆ ಕಾಡುಗೊಲ್ಲರಲ್ಲೂ ಕಾಣಬಹುದಾಗಿದೆ. ಅಲ್ಲಿ ಕಾಡುಗೊಲ್ಲರು, ಜನವರಿ ನಾಲ್ಕನೇ ತಾರೀಖಿನಿಂದ ಒಂದು ತಿಂಗಳ ಕಾಲ ತಮ್ಮ ಮನೆಯಲಿದ್ದ 'ನವಣೆ' ಮತ್ತು 'ಹುರಳಿ'ಯನ್ನು ಹಟ್ಟಿಯಿಂದ ಆಚೆ ಇಡುತ್ತಾರೆ. ಇದಕ್ಕೆ ಅವರು 'ನವಣೆಬತ' ಮತ್ತು 'ಹುರಳಿಬತ' ಎಂದು ಕರೆಯುವರು.

ಮೋಡೊಬಂಧ್ ಆಚರಣೆ ಒಂದು ತಿಂಗಳು ಕಳೆದ ನಂತರ ಲಕ್ಷ್ಮೀ (ಕೊರಡಾವಳಿ)ಗೆ ಪೂಜೆಮಾಡಿ ಬತವನ್ನು ಹರಿಯುವರು. ಈ ವ್ರತವನ್ನು ಹೆಣ್ಣು ಮಕ್ಕಳೇ ಆಚರಿಸುವುದರಿಂದ ಗಂಡಸರಿಗೆ ಇಲ್ಲಿ ಪ್ರವೇಶವಿಲ್ಲ. ಯಾವತ್ತೂ ಹೆಣ್ಣುಮಕ್ಕಳನ್ನು ದೇವರ ಹತ್ತಿರಕ್ಕೆ ಬಿಟ್ಟುಕೊಳ್ಳದ ಕಾರಣ ಇಂತಹ ಸಂದರ್ಭದಲ್ಲಿ ಅವರು ಪೂಜಿಸುವ ದೇವರನ್ನು ಪ್ರತ್ಯೇಕವಾದ ಸ್ಥಳದಲ್ಲಿ ಪ್ರತಿಸ್ಥಾಪಿಸುವರು. ಈ ಸಂದರ್ಭದಲ್ಲಿ ಹೆಣ್ಣು ಮಕ್ಕಳು ಮುಟ್ಟಿ ಪೂಜೆಮಾಡುವಂತಿಲ್ಲ. ದೂರದಿಂದಲೇ ಎಡೆಯನ್ನು ಅರ್ಪಿಸಬೇಕು. ತಿಂಗಳ ಕೊನೆಯ ದಿನ ಹೊಸಗೋದಿಯನ್ನು ತಂದು ಬೀಸಿ ಬಾಯಿಗೆ ಬಟ್ಟೆಯನ್ನು ಕಟ್ಟಿಕೊಂಡು ಐದು

ಚಪಾತಿ ಮಾಡಿ, ದೇವರಿಗೆ ಚಿಕ್ಕ ಕೋಳಿಮರಿಯನ್ನು ಸುಟ್ಟು ನೈವೇದ್ಯ ಮಾಡಿ ಪ್ರಸಾದವನ್ನು ವ್ರತ ಇರುವವರು ಮೊದಲು ತಿಂದು ಉಳಿದವರಿಗೆ ಕೊಡಬಹುದು. ತಿಂದ ಕೈಗಳನ್ನು, ಹೆಚ್ಚಾದ ಪ್ರಸಾದವನ್ನು ಹೊರಗೆ ಚೆಲ್ಲುವಂತಿಲ್ಲ. ಅಲ್ಲೆ ಒಂದು ಚಿಕ್ಕ ಗುಂಡಿಯನ್ನು ತೆಗೆದು ಮುಚ್ಚುವರು. ಇದರ ಒಂದಗುಳು ಹೊರ ಹೋದರೆ ದೇವರು ಕೋಪಿಸಿಕೊಳ್ಳುತ್ತಾರೆಂಬ ನಂಬಿಕೆ ಇವರಲ್ಲಿದೆ. ಹಾಗಾಗಿ ಚಪಾತಿ ನೈವೇದ್ಯಕ್ಕೆ ಸಿದ್ಧಪಡಿಸುವಾಗಿನಿಂದ ಹಿಡಿದು ಅದರ ಮುಕ್ತಾಯದವರೆಗೂ ಅತ್ಯಂತ ಕಟ್ಟೆಚ್ಚರವಹಿಸಿ ಈ ವ್ರತವನ್ನು ಮಾಡುವರು. ಹೀಗೆ ಮಾಡಿದ ಮೇಲೆ ಗೋದಿಯನ್ನು ಬಳಸಬಹುದು. ಪೂಜೆಯಾದ ನಂತರ ದೇವರ ಬಾವುಟವನ್ನು ತೆಗೆದು ಮೊದಲಿನ ಸ್ಥಾನಕ್ಕೆ ಸೇರಿಸಿ ಅಲ್ಲಿರುವ ಮಣ್ಣನ್ನು ನೀರಿನಲ್ಲಿ ಬಿಟ್ಟು ಬರುತ್ತಾರೆ.

**ಸಾಂದರ್ಭಿಕ ಆಚರಣೆಗಳು**

**೧. ಅಮ್ಮ (ಸಿಡುಬು) :** ಚಿಕ್ಕ ಮಕ್ಕಳನ್ನು ಕಾಡುವ ಈ ರೋಗಕ್ಕೆ ದಡಾರ, ಸಿಡುಬು, ಗೊಬ್ಬರ, ಸಿತಳಾ, ಮಾರಿಹುಣ್ಣು ಗೋರ್ ಎಂಬ ಪರ್ಯಾಯ ನಾಮಗಳಿವೆ. ಶಕ್ತಿ ದೈವಗಳ ಬಗ್ಗೆ ಅಪಾರ ಭಯ, ಭಕ್ತಿ, ನಂಬಿಕೆಗಳನ್ನಿಟ್ಟುಕೊಂಡಿರುವ ಭಾರತದಲ್ಲಿನ ಬಹುತೇಕ ಬುಡಕಟ್ಟು ಸಮುದಾಯಗಳು ಪ್ರಕೃತಿಯ ವೈಪರಿತ್ಯಗಳಿಂದಾದ ಇಂತಹ ಎಷ್ಟೋ ಕಾಯಿಲೆಗಳನ್ನು ಗುಣಪಡಿಸಲು ಆಚರಿಸುವ ಆಚರಣಾ ಕ್ರಮಗಳು ಧಾರ್ಮಿಕ ಚೌಕಟ್ಟನ್ನು ಮೀರುವುದಿಲ್ಲ. ಹರಕೆ ಬಲಿಗಳಿಂದ ದೇವರನ್ನು ಸಂತೃಪ್ತಿ ಪಡಿಸಿದರೆ ಕಾಯಿಲೆಗಳು ವಾಸಿಯಾಗುತ್ತವೆ ಎಂಬ ನಂಬಿಕೆ ವೈಜ್ಞಾನಿಕವಾಗಿ ಸುಳ್ಳಾದರೂ 'ಅಮ್ಮ'[೧೧] ಎಂದು ಕರೆಯುವ ಸಿಡುಬು ರೋಗಕ್ಕೆ ನೀಡುವ ಚಿಕಿತ್ಸೆಯ ಕ್ರಮದ ಹಿಂದೆ ವೈಜ್ಞಾನಿಕ ಅಂಶಗಳಿರುವುದನ್ನು ಯಾರು ಅಲ್ಲಗಳೆಯುವಂತಿಲ್ಲ. ಹಾಗಾಗಿ ದೈವೀ ಹಿನ್ನೆಲೆಯಲ್ಲಿ ಇಂತಹ ರೋಗಗಳಿಗೆ ಚಿಕಿತ್ಸೆಯನ್ನು ಕಂಡುಕೊಂಡಿರುವ ನಮ್ಮ ಬುಡಕಟ್ಟು ಸಮುದಾಯಗಳ ಎಲ್ಲಾ ಸಂಪ್ರದಾಯಗಳನ್ನು ಮೂಢ ನಂಬಿಕೆ ಎನ್ನಲು ಬರುವುದಿಲ್ಲ.

**ಅಮ್ಮ ಆಚರಿಸುವ ವಿಧಾನ :** ಮಾತೃ ದೇವತಾರಾಧಕರಾದ ಗೋಸಂಗಿಗಳು ಮಕ್ಕಳಿಗೆ ಅಮ್ಮ ಬಂದರೆ (ಸಿತಳಾ ದೇವಿ, ಮರಿಯಮ್ಮ ಮರಿ ಆಯಿ, ಮಾರೆಮ್ಮ) ನಾವು ಮಾಡಿದ ಪೂಜೆಗಳಲ್ಲಿ ಏನೋ ದೋಷ ಉಂಟಾಗಿ ಅಮ್ಮ ನಮ್ಮ ಮೇಲೆ ಮುನಿಸಿಕೊಂಡಿದ್ದಾಳೆಂದು ಭಾವಿಸುವರು. ಇಂತಹ ಸಂದರ್ಭದಲ್ಲಿ 'ಅಮ್ಮ' ಬಂದ ಮಗುವನ್ನು ಅತ್ಯಂತ ಭಯ ಭಕ್ತಿಯಿಂದ ನೋಡಿಕೊಳ್ಳುವರು.

ಮಗುವಿನ ಮೇಲೆ ಮೂಡಿದ ಗುಳ್ಳೆ (ಅಮ್ಮ)ಗಳ ಗಾತ್ರವನ್ನು ನೋಡಿ ಇದು 'ಬುಡಿಆಯಿ' (ದೊಡ್ಡಮ್ಮ), 'ಸೀತಾಳ' (ಸಣ್ಣಮ್ಮ)[೧೨] ಎಂದು ಗುರ್ತಿಸುವರು. ಕ್ರಮವಾಗಿ ಮೊದಲನೆಯದು ಬಂದರೆ ಒಂಬತ್ತು ದಿನ ಎರಡನೆಯದು ಬಂದರೆ ಏಳು ದಿನದವರೆಗೆ ಮುಟ್ಟನ್ನಾಗಿ ಆಚರಿಸುವರು. ಈ ದಿನಗಳಲ್ಲಿ ಇಡೀ ಸಮುದಾಯದವರು ಅತ್ಯಂತ ಕಟ್ಟುನಿಟ್ಟಿನ ಜೀವನ ಸಾಗಿಸುವರು. 'ಅಮ್ಮ' ತಮ್ಮ ಗುಂಪಿನಲ್ಲಿ ಯಾವ ಮಗುವಿಗೇ ಬಂದಿರಲಿ, ಇಡೀ ಸಮುದಾಯಕ್ಕೆ ಇದರ ಮುಟ್ಟು ತಟ್ಟುತ್ತದೆ. ಈ ಸಂದರ್ಭದಲ್ಲಿ ಎಲ್ಲರೂ ಆಚರಣಾ ನಿಯಮಗಳನ್ನು ಪಾಲಿಸಿಕೊಂಡು ಬರುತ್ತಾರೆ. ಅಮ್ಮಬಂದ ದಿನದಿಂದ ಯಾರ

ಡೇರಾದಲ್ಲೂ ಸಾರಿಗಾಗಲಿ, ಅನ್ನಕ್ಕಾಗಲಿ ವಗ್ಗರಣೆಯನ್ನು ಹಾಕುವಂತಿಲ್ಲ. (ಹೊರಗಡೆ ಸ್ವಲ್ಪ ದೂರದಲ್ಲಿ ಬೇಕಾದರೆ ಈ ಕೆಲಸ ಮಾಡಬಹುದು) ಪದಾರ್ಥಗಳನ್ನು ಕರಿಯುವುದಾಗಲಿ, ಮನೆ ಸಾರಿಸುವುದಾಗಲಿ, ದೀಪ ಹಚ್ಚುವುದಾಗಲಿ, ದೇವರ ಪೂಜೆ ಮಾಡುವುದಾಗಲಿ, ರೊಟ್ಟಿಯನ್ನು ಬಡಿಯುವುದಾಗಲಿ (ಕೈಗಳಲ್ಲೇ ಬೇಕಾದರೆ ತಟ್ಟಿಕೊಳ್ಳಬಹುದು) ಸ್ನಾನಕ್ಕೆ ನೀರು ಬಿಸಿಮಾಡುವುದಾಗಲಿ ಮಾಡುವಂತಿಲ್ಲ (ನೀರು ಬಿಸಿಮಾಡಬೇಕಾಗಿ ಬಂದಲ್ಲಿ ಯಾವುದಾದರು ಸ್ವಲ್ಪ ಹಿಟ್ಟನ್ನು ನೀರಿನಲ್ಲಿ ಹಾಕಿ ಬಿಸಿಮಾಡಬಹುದು, ಇಲ್ಲಿದಿದ್ದರೆ ಬಿಸಿಲಿನಲ್ಲಿ ಕಾಯಿಸಿ ಉಪಯೋಗಿಸಬಹುದು.) ಹೀಗೆ ಇಡೀ ಸಮುದಾಯವು 'ಅಮ್ಮ'ನ ಮುಟ್ಟು ಮುಗಿಯುವವರೆಗೆ ಅತ್ಯಂತ ಭಯಭಕ್ತಿಯಿಂದ, ಕಟ್ಟುನಿಟ್ಟಾಗಿ ಆಚರಣೆಯಲ್ಲಿ ಪಾಲ್ಗೊಳ್ಳುತ್ತಾರೆ.

ಡೇರಾ ವಾಸಿಗಳಾದ ಇವರು ಡೇರಾದ ಒಂದು ಮೂಲೆಗೆ ಕೌದಿಯನ್ನು ಅಡ್ಡ ಬಿಟ್ಟು 'ಅಮ್ಮ' ಬಂದ ಮಗು ಮತ್ತು ತಾಯಿ ಇರಲು ವ್ಯವಸ್ಥೆ ಮಾಡುವರು. ಡೇರಾದ ಸುತ್ತಾ ಬೇವಿನ ಸೊಪ್ಪು ಸಿಕ್ಕಿಸುವರು. ತಾಯಿಯನ್ನು ಬರೀ ನೆಲದ ಮೇಲೆ ಮಲಗಿಸಿ ಆಕೆಯ ಪಕ್ಕ ಬೇವಿನ ಸೊಪ್ಪಿನ್ನು ಹಾಕಿ ಅದರ ಮೇಲೆ ಒಂದು ತುಂಡು ಬಟ್ಟೆಯನ್ನು ಹಾಸಿ ಅದರ ಮೇಲೆ ಮಗುವನ್ನು ಮಲಗಿಸುವರು ಇವರ ಪಕ್ಕ ಒಂದು ನೀರು ತುಂಬಿದ ಕೊಡವನ್ನಿಡುವರು. ಆ ಕೊಡದ ಮೇಲೆ ಕಡ್ಡಿಗಳಿರುವ ಒಂದು ಹಿಡಿ ಬೇವಿನ ಸೊಪ್ಪನ್ನು ಇಟ್ಟಿರುತ್ತಾರೆ. ಮಗುವನ್ನು ನೋಡಲು ಬಂದವರಿಗೆ ಆ ಸೊಪ್ಪನ್ನು ನೀರಲ್ಲಿ ಅದ್ದಿ ನೀರಿನಿಂದ ಚಿಮುಕಿಸಿ ಮಗವನ್ನು ನೋಡಲು ಅನುಮತಿ ನೀಡುತ್ತಾರೆ. ಅಮ್ಮ ಬಂದ ದಿನಗಳಲ್ಲಿ ಅಮ್ಮನ ಮಹಿಮೆಯನ್ನು ಕುರಿತ ಹಾಡುಗಳನ್ನು ಹಾಡುತ್ತಾರೆ.

ತಾಯಿಗೆ ಆಹಾರವಾಗಿ ಜೋಳದ ರೊಟ್ಟಿ, ತಾಳಿಸದೇ ಇರುವ ಸೊಪ್ಪಿನ ಪಲ್ಯ ಹಾಗೂ ಈರುಳ್ಳಿಯನ್ನು ತಾಟಿನಲ್ಲಿಟ್ಟುಕೊಡದೆ ಬರಿ ನೆಲದ ಮೇಲೆ ಇಡುವರು. ಅದನ್ನು ಆಕೆ ಹಾಗೆಯೇ ಊಟ ಮಾಡಬೇಕು. (ಹಾಸಲು ಹೊದೆಯಲು ಆಕೆಗೆ ಏನೂ ಕೊಡುವುದಿಲ್ಲ) ಮುಟ್ಟು ಮುಗಿಯುವವರೆಗೆ ಈಕೆ ಹಾಲು, ಮೊಸರು, ಮಜ್ಜಿಗೆ, ಹಾಗೂ ಹಾಲಾಕಿದ ಕಾಫಿ, ಟೀಯನ್ನು ಸಹ ಕುಡಿಯುವಂತಿಲ್ಲ. (ಬಹುಶಃ ಸಿತಳಾಗೆ ಇವರು ಆಕಳೆಂದು ಕರೆಯುವುದರಿಂದ ಈ ಸಂದರ್ಭದಲ್ಲಿ ಹಾಲಿನ ಬಳಕೆ ನಿಷೇಧವಿರಬೇಕು)

**ನೀರಾಕುವುದು**

**ಸಿತಳಾ (ಸಣ್ಣಮ್ಮ) :** 'ಸಣ್ಣಮ್ಮ' ಬಂದರೆ ಏಳು ದಿನಗಳವರೆಗೆ ಮುಟ್ಟು ಇರುತ್ತದೆ. ಮಕ್ಕಳ ಮೈಮೇಲೆ ಚಿಕ್ಕ ಚಿಕ್ಕ ಗುಳ್ಳೆಗಳು ಮಾಡಿದರೆ ಅದನ್ನು ಸಣ್ಣಮ್ಮ ಎಂದು ಕರೆಯುವರು. 'ಅಮ್ಮ'ನನ್ನು ಕಳುಹಿಸುವ ಹಿಂದಿನ ದಿನ ಹದಿನಾಲ್ಕು ಆಕಳ ಸಗಣಿಯ ಕುಳ್ಳನ್ನು ತೆಗೆದುಕೊಂಡು ಅದರಲ್ಲಿ ಏಳು ಕುಳ್ಳನ್ನು ಸುಟ್ಟು ಬೂದಿ ಮಾಡಿ, ಉಳಿದ ಏಳು ಸಗಣಿ ಕುಳ್ಳನ್ನೂ ಪುಡಿ ಮಾಡಿ ಅದರಲ್ಲಿ ಒಂದು ಹಿಡಿ ಜೋಳವನ್ನು ಬೆರೆಸಿಡುವರು. ಮರುದಿನ ಬೆಳಗಿನ ಜಾವ (ಸುಮಾರು ನಾಲ್ಕು ಅಥವಾ ಐದು ಗಂಟೆಗೆ) ಯಾರಿಗೂ

ಕಾಣದಂತೆ, ಶಬ್ದವನ್ನು ಸಹ ಮಾಡದೆ 'ಅಮ್ಮ' ಬಂದ ಮಗುವನ್ನು ಕರೆದುಕೊಂಡು ಬಂದು ಸೂರ್ಯನ ಕಡೆ ಮುಖಮಾಡಿ ಕೂರಿಸಿ ತಲೆಯನ್ನು ಬಿಳಿ ಬಟ್ಟೆಯಿಂದ ಮುಚ್ಚಿ ಒಂದೊಂದೇ ಹಿಡಿಯಂತೆ ಏಳು ಹಿಡಿ ಜೋಳ ಬೆರೆಸಿದ ಸಗಣಿ ಪುಡಿಯನ್ನು ಮಗುವಿನ ತಲೆಯ ಮೇಲೆ ಹಾಕುವರು. ಹೀಗೆ ಮಾಡಿದ ನಂತರ ಕೆಳಗೆ ಬಿದ್ದ ಆ ಪುಡಿಯನ್ನು ತೆಗೆದುಕೊಂಡು ಯಾರೂ ಸಂಚರಿಸದೆ ಇರುವ ಸ್ಥಳದಲ್ಲಿ ಇರುವ 'ತಂಗಡಿ' ಗಿಡದ ಬುಡಕ್ಕೆ ಹಾಕಿ ಹಿಂತಿರುಗಿ ನೋಡದಂತೆ ಬರುವರು. ನಂತರ ಏಳು ಸಗಣಿ ಕುಳ್ಳನ್ನು ಸುಟ್ಟು, ಅದರ ಸ್ವಲ್ಪ ಬೂದಿಯನ್ನು ತೆಗೆದುಕೊಂಡು ಅಮ್ಮ ಬಂದ ಮಗುವಿನ ಮೈಗೆಲ್ಲ ಸವರಿ ಸ್ನಾನಮಾಡಿಸುವರು. ಉಳಿದ ಬೂದಿಯನ್ನು ಸುರಕ್ಷಿತವಾಗಿ ತೆಗೆದಿಟ್ಟು 'ಅಮ್ಮ' ಬಂದ ಮಗುವಿಗೆ ಮೂರು ದಿನಗಳವರೆಗೆ ಮೈಗೆ ಹಚ್ಚಿ ಸ್ನಾನ ಮಾಡಿಸುವರು. ಹೀಗೆ ಮಾಡುವದರಿಂದ 'ಅಮ್ಮ' ಸಂತೃಪ್ತಳಾಗಿ ಹೋಗುವಳೆಂಬ ನಂಬಿಕೆ ಇವರಲ್ಲಿದೆ.

**ಬುಡಿ ಆಯಿ (ದೊಡ್ಡಮ್ಮ) :** ಇದು ಮಿಕ್ಕೆಲ್ಲ 'ಅಮ್ಮ'ಗಳಿಗಿಂತ ತೀವ್ರತರವಾದದ್ದು. ಈ ರೋಗ ಬಂದಾಗ ಜನ ತುಂಬಾ ಹೆದರುತ್ತಾರೆ. ದೊಡ್ಡಮ್ಮ ಬಂದಾಗ ಒಂಬತ್ತು ದಿನಗಳವರೆಗೆ ಸೂತಕ ಎಂದು ಭಾವಿಸುತ್ತಾರೆ. ಒಂಬತ್ತು ದಿನಗಳ ನಂತರ ದೊಡ್ಡಮ್ಮನನ್ನು ಕಳುಹಿಸುತ್ತಾರೆ. (ತಣ್ಣಗೆ ಮಾಡುತ್ತಾರೆ) ಅಮ್ಮನನ್ನು ಕಳುಹಿಸುವ ಹಿಂದಿನ ದಿನ ಹದಿನೆಂಟು ಆಕಳು ಸೆಗಣಿಯ ಕುಳ್ಳನ್ನು ಕೂಡಿಸಿ ಅದರಲ್ಲಿ ಒಂಬತ್ತು ಕುಳ್ಳನ್ನು ಸುಟ್ಟು ಬೂದಿಮಾಡಿ ಉಳಿದ ಒಂಬತ್ತು ಸೆಗಣಿ ಕುಳ್ಳನ್ನು ಪುಡಿಮಾಡಿ ಅದರಲ್ಲಿ ಒಂದು ಹಿಡಿ ಜೋಳವನ್ನು ಬೆರೆಸಿಡುವರು. ಮರುದಿನ, ಬೆಳಿಗ್ಗೆ (ಸುಮಾರು ನಾಲ್ಕೈದು ಗಂಟೆಗೆ) ಯಾರಿಗೂ ಕಾಣದಂತೆ, ಶಬ್ದ ಮಾಡದೆ 'ಅಮ್ಮ' ಬಂದ ಮಗುವನ್ನು ಕರೆದುಕೊಂಡು ಬಂದು ಸೂರ್ಯನ ಕಡೆ ಮುಖ ಮಾಡಿ ಕೂರಿಸಿ ತಲೆಯನ್ನು ಬಿಳಿ ಬಟ್ಟೆಯಿಂದ ಮುಚ್ಚಿ, ಜೋಳ ಬೆರೆಸಿದ ಸಗಣಿ ಪುಡಿಯನ್ನು ಮಗುವಿನ ತಲೆಯ ಮೇಲೆ ಒಂದೊಂದೆ ಹಿಡಿಯಂತೆ ಒಂಬತ್ತು ಹಿಡಿ ಹಾಕಿ, ಹಣೆಗೆ ಬಲಗೈ ಬೆರಳಿನಿಂದ ನಾಮವಿಟ್ಟು ಕೆಳಗೆ ಬಿದ್ದ ಪುಡಿಯನ್ನು ತೆಗೆದುಕೊಂಡು 'ತಂಗಡಿ' ಗಿಡದ ಬುಡಕ್ಕೆ ಹಾಕಿ ಹಿಂತುರುಗಿ ನೋಡದಂತೆ ಬರುವರು. ನಂತರ ಸುಟ್ಟ ಒಂಬತ್ತು ಕುಳ್ಳಿನ ಬೂದಿಯನ್ನು ಅಮ್ಮ ಬಂದ ಮಗುವಿನ ಮೈಗೆ ಸವರಿ ಸ್ನಾನ ಮಾಡಿಸುವರು. ಹೀಗೆ ಒಂಬತ್ತು ದಿನಗಳ ಕಾಲ ಬೂದಿಯನ್ನು ಸವರಿ ಸ್ನಾನ ಮಾಡಿಸಿದರೆ ಅಮ್ಮ ಶಾಂತಳಾಗುತ್ತಾಳೆ. ಆಗ ಮಗುವಿಗೆ ಯಾವುದೇ ರೀತಿಯ ತೊಂದರೆ ಇಲ್ಲ ಎಂಬ ಭಾವನೆ ಇವರಲ್ಲಿದೆ. ಈ ಆಚರಣೆಯನ್ನು ಇಡೀ ಸಮುದಾಯದ ಜನ ಅತ್ಯಂತ ಕಟ್ಟು ನಿಟ್ಟಾಗಿ ಪಾಲಿಸುತ್ತಾರೆ. ಯಾವುದೇ ಕಾರಣಕ್ಕೂ ಯಾರಿಂದಲೂ ದೇವಿಗೆ ಅಪಚಾರವಾಗದಂತೆ ಎಚ್ಚರ ವಹಿಸುತ್ತಾರೆ. ಆಚರಣೆಯಲ್ಲಿ ಏನಾದರು ಲೋಪದೋಷಗಳಾದರೆ ಮಗುವಿಗೆ ಸಾವು ತಪ್ಪಿದ್ದಲ್ಲ ಎಂಬ ನಂಬಿಕೆ ಇವರಲ್ಲಿದೆ.

**ಕಟ್ಟಂಬಲಿ :** ಅಮ್ಮ ಬಂದ ಸಂದರ್ಭದಲ್ಲಿ ತಯಾರಿಸಿದ ವಿಶಿಷ್ಟ ರೀತಿಯ ಪದಾರ್ಥ. ಜೋಳದ ಹಿಟ್ಟಿನಲ್ಲಿ ಮೊಸರನ್ನು ಕಲೆಸಿ ಸಿದ್ಧಪಡಿಸಿದ ಈ ಪದಾರ್ಥಕ್ಕೆ 'ಕಟ್ಟಂಬಲಿ' ಎನ್ನುವರು. ಇದನ್ನು ಅಮ್ಮನನ್ನು

ಕಳುಹಿಸುವ ಹಿಂದಿನ ದಿನವೇ ಸಿದ್ಧಪಡಿಸಿರುತ್ತಾರೆ. ಹೀಗೆ ಸಿದ್ಧ ಪಡಿಸಿದ ಪದಾರ್ಥವನ್ನು ಬೆಳಿಗ್ಗೆ ಎಂಟು ಅಥವಾ ಒಂಬತ್ತು ಗಂಟೆಗೆ 'ಸಿತಳಾ' ದೇವಿಗೆ ಪೂಜೆಮಾಡಿ, ಮಕ್ಕಳು, ಮುತ್ತೈದೆಯರಿಗೆ ಅದರ ಪ್ರಸಾದವನ್ನು ಹಂಚುವರು. ಅದರಲ್ಲಿಯ ಸ್ವಲ್ಪ ಎಡೆಯನ್ನು 'ಅಮ್ಮ' ಬಂದ ಮಗುವಿನ ತಾಯಿಗೆ ನೆಲದ ಮೇಲೆ ಹಾಕುವರು. ಆಕೆ ಅದನ್ನು ನಾಲಿಗೆಯಿಂದ ನೆಕ್ಕುವಳು, ಹೀಗೆ ಮಾಡುವಾಗ ಅತ್ತಿಗೆಯಾಗಲಿ ಅಥವಾ ನಾದಿನಿಯಾಗಲಿ ಕೋಲನ್ನು ಹಿಡಿದು ಹಚಾ, ಹಚಾ ಎಂದು ನಾಯಿಯನ್ನು ಹೊಡೆಯುವಂತೆ ಹೊಡೆಯುವ ಕ್ರಿಯೆ ನಡೆಯುತ್ತದೆ. ಹೀಗೆ ಅಮ್ಮನನ್ನು ಶಾಂತಿಮಾಡಿದ ನಂತರ ಹಾಲು, ಮೊಸರು, ಮಜ್ಜಿಗೆಯನ್ನು ಕುಡಿಯಬಹುದು.

**೨. ಖವೀಸ್ ಮಹರಾಜ್ (ಬೇಟೆರಂಗ)ನ ಆಚರಣೆ :** ಬೇಟೆಯ ಸಂದರ್ಭದಲ್ಲಿ ಪೂಜಿಸುವ ವಿಶಿಷ್ಟ ದೈವ. ಈತನಿಗೆ ಖವೀಸ್ ಮಹಾರಾಜ್ ಎಂದು ಕರೆಯುವರು. ಮರಾಠಿ-ಇಂಗ್ಲಿಷ್ ನಿಘಂಟುವಿನಲ್ಲಿ 'ಖವೀಸ್' (Deveil) ಎಂದರೆ ಪಿಶಾಚಿ, ರಾಕ್ಷಸ, ದುಷ್ಟ, ಕೇಡಿಗ, ಕ್ರೂರ, ತಂತ್ರಿ, ಭೂತದಂತೆ ಕೆಲಸಮಾಡುವ ವ್ಯಕ್ತಿ ಎಂಬ ಅರ್ಥವಿದೆ. ಗೋಸಂಗಿಗಳು ಖವೀಸ್ ಎಂದರೆ ದುಷ್ಟ ಶಕ್ತಿಗಳನ್ನು ಹೋಗಲಾಡಿಸುವವನು ಎಂದು ಅರ್ಥೈಸಿಕೊಂಡಿದ್ದಾರೆ. ಹಾಗಾಗಿ ಮರಾಠಿ ನಿಘಂಟುವಿನಲ್ಲಿನ ಕೊನೆಯ ಅರ್ಥಕ್ಕೂ ಗೋಸಂಗಿಗಳು ಅರ್ಥೈಸಿಕೊಂಡಿರುವುದಕ್ಕೂ ಸ್ವಲ್ಪ ಸಾಮ್ಯವಿದೆ. ಅಲೆಮಾರಿಗಳಾದ ಇವರಲ್ಲಿ ಬೇಟೆಗಾರಿಕೆಯೇ ಹೆಚ್ಚಾಗಿರುವುದರಿಂದ ತಮಗೆ ಬಂದ ಕಷ್ಟಗಳಿಗೆ ಖವೀಸ್ ಮಹಾರಾಜನನ್ನು ನೆನೆದರೆ ಎಲ್ಲವೂ ಪರಿಹಾರವಾಗುತ್ತದೆ ಎಂದು ನಂಬಿರುವರು.

ಖವೀಸ್ ಮಹಾರಾಜ (ದುಷ್ಟ ಶಕ್ತಿಗಳನ್ನು ಹೊಡೆದೋಡಿಸುವವನು)ನ ಪೂಜೆಯನ್ನು 'ಯುಗಾದಿ'ಯ ನಂತರ ತಮ್ಮ ಅನುಕೂಲಗಳನ್ನು ನೋಡಿಕೊಂಡು ಯಾವಾಗ ಬೇಕಾದರೂ ಮಾಡಬಹುದಂತೆ. ಹಬ್ಬ ಆಚರಿಸುವ ಬಗ್ಗೆ ಹಿರಿಯರ ಸಮ್ಮುಖದಲ್ಲಿ ಚರ್ಚಿಸಿ, ನಿಗದಿಪಡಿಸಿದ ದಿನದಂದು ಹಬ್ಬ ಮಾಡಲು ಆರಂಭಿಸುವರು. ಹಬ್ಬದ ದಿನದಂದು ಸಮುದಾಯದ ಎಲ್ಲರಿಂದಲೂ ಹಣವನ್ನು (ವರಗಣಿ) ಸಂಗ್ರಹಿಸಿ ಬಾಲ ಡೊಂಕಾಗಿರುವ ಕುರಿಯೊಂದನ್ನು ತಂದು, ಅವರು ವಾಸಿಸುವ ಪ್ರದೇಶವನ್ನು ಬಿಟ್ಟು ಮೂರ್‍ನಾಲ್ಕು ಕಿಲೋಮೀಟರ್ ದೂರ ಹೋಗಿ ಒಂದು ಜಾಲಿಗಿಡವನ್ನು ಹುಡುಕಿ, ಅದರ ಸುತ್ತಲಿನ ಪ್ರದೇಶವನ್ನು ಸಗಣಿಯಿಂದ ಸಾರಿಸಿ, ಕುಂಕುಮ ಭಂಡಾರ ಹಾಕಿ, ಧೂಪ ಹಾಕುವರು. ಹಾಗೆಯೇ ಅದರ ಮತ್ತೊಂದು ಪಕ್ಕಕ್ಕೆ ಸಗಣಿಯಿಂದ ಸಾರಿಸಿ ತ್ರಿಬುಜಾಕಾರದ ಕಲ್ಲನಿಟ್ಟು ಅದಕ್ಕೆ ಕುಂಕುಮ ಭಂಡಾರ ಹಾಕಿ ಅದರ ಹತ್ತಿರಕ್ಕೆ 'ಬಲಿ' ಕುರಿಯನ್ನು ತಂದು ನಿಲ್ಲಿಸಿ, ಅದರ ಹಣೆಗೆ ಕುಂಕುಮ, ಭಂಡಾರ ಹಚ್ಚಿ ತಲೆಗೆ ನೀರನ್ನು ಚಿಮುಕಿಸುವರು. ಆಗ ಅದು ತಲೆಯಾಡಿಸಿದರೆ (ಕೊಡವಿದರೆ) ಬಲಿ ಕೊಡಲು ಏನೂ ತೊಂದರೆ ಇಲ್ಲವೆಂದು ನಂಬುವರು. (ಚಿಮುಕಿಸಿದಾಗ ನೀರು ಕಿವಿಯಲ್ಲಿ ಬಿದ್ದು ಸಹಜವಾಗಿಯೇ ತಲೆಯಾಡಿಸುತ್ತದೆ) ತಲೆ ಯಾಡಿಸದಿದ್ದರೆ ದೇವರಿಗೆ ಈ ಬಲಿ ಇಷ್ಟವಿಲ್ಲವೆಂದು, ತಂದಿರುವ ಈ ಬಲಿಯಲ್ಲಿ ಏನೋ ಲೋಪದೋಷಗಳಿವೆಯೆಂದು ಅರ್ಥೈಸಿಕೊಳ್ಳುವರು. ಆಗ ಲೋಪದೋಷಗಳಿರುವ ಬಲಿಯನ್ನು ಬಿಟ್ಟು

ಬೇರೊಂದು ಬಲಿಯನ್ನು ತರುವರು. ಹೀಗೆ ಪರೀಕ್ಷಿಸಿ ತಂದ ಬಲಿ ಕುರಿಯನ್ನು ಮಲಗಿಸಿ ಕಾಲು, ತಲೆಯನ್ನು ಒಬ್ಬೊಬ್ಬರು ಹಿಡಿದು ಕೊಳ್ಳುವರು. ಆಗ ಭಗತ ಕುರಿಯ ಕುತ್ತಿಗೆಯನ್ನು ಕೊಯ್ದು, ತ್ರಿಭುಜಾಕಾರವಿರುವ ಕಲ್ಲಿಗೆ (ಖವಾಸ್ ಮಹಾರಾಜನಿಗೆ) ರಕ್ತವನ್ನು ಚಿಮ್ಮಿಸಿ ಅದರ ಬಲಗಾಲನ್ನು ಮೊಳಕಾಲಿಗೆ ಕತ್ತರಿಸಿ ಬಾಯಲ್ಲಿಡುವರು. ನಂತರ ಅದರ ಎದೆಯ ಭಾಗ (ಕರೋಯಿ)ದ ಮಾಂಸವನ್ನು, ತುಂಡರಿಸಿದ ಕುರಿಯ ರುಂಡದ ಮೇಲಿಡುವರು. ಉಳಿದ ಮಾಂಸವನ್ನು ಅಡಿಗೆ ಮಾಡುವರು. ಇದಾದ ನಂತರ ಗಂಡು ಮಕ್ಕಳೇ ಗೋದಿಯನ್ನು ಬೀಸಿ (ಬಾಯಿಗೆ ಬಟ್ಟೆಯನ್ನು ಕಟ್ಟಿಕೊಂಡು) ತಯಾರಿಸಿದ ಐದು ಚಪಾತಿ ಅದರ ಮೇಲೆ ಸಜ್ಜೆಯಿಂದ ತಯಾರಿಸಿದ ಚುರುಮ ಹಾಗೂ ಸ್ವಲ್ಪ ಮಾಂಸವನ್ನಿಟ್ಟು ಎಡೆ ಅರ್ಪಿಸುವರು. ಈ ಸಂದರ್ಭದಲ್ಲಿ ಪ್ರಾರಂಭದಿಂದ ಹಿಡಿದು ಪೂಜೆ ಮುಗಿಸಿ ಮನೆಗೆ ಹಿಂತಿರುಗಿ ಬಂದು ದೇವರನ್ನು ನೋಡುವವರೆಗೆ ಯಾರೂ ಮಾತಾಡುವಂತಿಲ್ಲ. ಈ ಎಲ್ಲಾ ಕಾರ್ಯವನ್ನು ಸಂಜ್ಞೆಗಳ ಮೂಲಕ (ನಾನೀ ತೀನ್ ಬೋಲ್‌ನೂ)ವೇ ಮಾಡಿ ಮುಗಿಸಬೇಕು. ಈ ಕಾರ್ಯಕ್ಕೆ ಚಿಕ್ಕಮಕ್ಕಳಾಗಲಿ, ಹೆಂಗಸರಾಗಿಲಿ ಬರುವಂತಿಲ್ಲ. (೬೦ ವರ್ಷ ಮೇಲ್ಪಟ್ಟ ಮುದುಕಿಯರು ಬೇಕಾದರೆ ಹೋಗಬಹುದು.) ಎಡೆ ಕೊಟ್ಟ ನಂತರ ಭಗತ ಪ್ರಸಾದವನ್ನು ಸ್ವೀಕರಿಸಿ (ಈ ಸಂದರ್ಭದಲ್ಲಿ ಭಗತನ ಮೈಯಲ್ಲಿ ದೇವರು ಬರುವುದಿಲ್ಲವಂತೆ) ಉಳಿದವರು ಪ್ರಸಾದವನ್ನು ಸ್ವೀಕರಿಸಲು ಅನುಮತಿ ನೀಡುವನು. ಅದರಂತೆ ಎಲ್ಲರೂ ಊಟಮಾಡಿ ಉಳಿದದ್ದನ್ನು ಅಲ್ಲೇ ಒಂದು ಕುಣಿ ತೋಡಿ ಅದರಲ್ಲಾಕಿ ಮುಚ್ಚಿ ಬರುವರು. ಈ ರೀತಿಯಾಗಿ ಖವೀಸ್ ಮಹಾರಾಜನಿಗೆ ಪೂಜೆ ಮಾಡುವುದರಿಂದ (ಖವೀಸ್ ಮಹರಾಜ್ ತೋ ದನ್‌ರೋ ಮುಂಜಿಯೋ) 'ಖವೀಸ್ ಮಹಾರಾಜ ಸಂಪತ್ತು ಕೊಡುವ ಅಕ್ಷಯ ಪಾತ್ರೆ ಇದ್ದಂತೆ' ಎಂಬ ನಂಬಿಕೆ ಇರುವುದರ ಜೊತೆಗೆ ಈ ಆಚರಣೆ ಮಾಡಿದರೆ ನಮಗೆ ಬಡತನವೇ ಇಲ್ಲವೆಂದು ಹೇಳುವರು. ಸದಾ ಇವರು ಅಡವಿಯಲ್ಲೆ ಹೆಚ್ಚು ಸಂಚರಿಸುವುದರಿಂದ ಯಾವಾಗಲೂ ಈತ ತಮ್ಮ ಜೊತೆಗಿರುತ್ತಾನೆ. 'ಸದಾ ಟೋಪ್‌ಲಾಮ ಬೇಟಿಯೋಚ್ ಖವೀಸ್ ಮಹಾರಾಜ್' (ಸದಾ ಬುಟ್ಟಿಯಲ್ಲೇ ಇರುತ್ತಾನೆ ಖವೀಸ್ ಮಹಾರಾಜ) ಎಂದು ಭಾವಿಸುತ್ತಾರೆ. ತಮ್ಮ ಪ್ರಯಾಣದ ಮಾರ್ಗದಲ್ಲಿ ಮುಂದೆ ನಮಗೆ ತೊಂದರೆಗಳೇನಾದರು ಸಂಭವಿಸುವುದಿದ್ದರೆ 'ಸೀಟಿ' ಹೊಡೆದು ಎಚ್ಚರಿಸುವನು. ಆಗ ನಾವು ಮಾರ್ಗವನ್ನು ಬದಲಿಸುತ್ತೇವೆ ಎಂದು ವಕ್ತೃಗಳು ಹೇಳುತ್ತಾರೆ. ಹೀಗೆ ಖವೀಸ್ ಮಹಾರಾಜನು ಸದಾ ತಮ್ಮ ಜೊತೆಗಿದ್ದು ಪ್ರಯಾಣ, ಹಾಗೂ ಬೇಟೆ ಸಂದರ್ಭದಲ್ಲಿನ ಕಷ್ಟಗಳಿಂದ ಪಾರುಮಾಡಿ ರಕ್ಷಿಸುತ್ತಾನೆಂಬ ನಂಬಿಕೆ ಬಲವಾಗಿ ಬೇರೂರಿದೆ. ಮಲೆನಾಡು, ಕೊಪ್ಪ, ಕೊಡಗು, ಶೃಂಗೇರಿ ಸುತ್ತಲಿನ ಪ್ರದೇಶಗಳಲ್ಲಿ ಖವೀಸ್ ಮಹಾರಾಜನಿಗೆ (ಮುನಿಸ್ವಾಮಿಗೆ) 'ಬೇಟೆರಂಗ' (ಬೇಟೆ ದೇವರು) ಎಂತಲೂ ಸಹ ಕರೆಯುವರು. ಅಲ್ಲಿ ಮರದಿಂದ ಮಾಡಿದ ಹಂದಿಯ ಮೂರ್ತಿಯನ್ನೇ ಬೇಟೆ ದೇವರೆಂದು ಬಗೆದು, ಬೇಟೆಯಲ್ಲಿ ದೊರೆತ ಹಂದಿಯನ್ನು ತಂದು ಆಮೂರ್ತಿಗೆ ಬಲಿಕೊಟ್ಟು 'ನಿನ್ನ ಹಾಗೇ ನಿನ್ನ ಮಕ್ಕಳು, ಮರಿ ಮಕ್ಕಳು, ಸಿಕ್ತಾ ಇದ್ರೆ ನಿನಗೆ ಹೀಗೆ ಪೂಜೆ ಮಾಡ್ತೀವಿ ಎಂದು ಹೇಳಿ ಮಾಂಸವನ್ನು ಅರ್ಪಿಸಿ, ಪ್ರಸಾದ ಸ್ವೀಕರಿಸುವರಂತೆ,

ಹೀಗೆ ಸಮುದಾಯದಿಂದ ಸಮುದಾಯಕ್ಕೆ ಪ್ರದೇಶದಿಂದ ಪ್ರದೇಶಕ್ಕೆ ಖವೀಸ್ ಮಹಾರಾಜ (ಬೇಟೆರಂಗ)ನ ಆಚರಣೆಗಳಲ್ಲಿ ಭಿನ್ನತೆಗಳನ್ನು ಕಂಡುಕೊಂಡಿದ್ದರೂ ಸಹ ಅವರೆಲ್ಲರ ಉದ್ದೇಶ, ಬೇಟೆ ಸುಗಮವಾಗಲಿ, ನಮ್ಮನ್ನು ಕಾಡು ಪ್ರಾಣಿಗಳಿಂದ ರಕ್ಷಿಸಲಿ ಎಂಬುದಾಗಿದೆ.

ಗೋಸಂಗಿಗಳು ಈ ಆಚರಣೆಯನ್ನು ಸಾಂದರ್ಭಿಕವಾಗಿ ಹಾಗೂ ಸಾಂಪ್ರದಾಯಿಕವಾಗಿಯೂ ಸಹ ಆಚರಿಸಿಕೊಂಡು ಬರುತ್ತಿದ್ದಾರೆ. ನಿಶಸ್ತ್ರದಾರಿಗಳಾದ ಈ ಅಲೆಮಾರಿಗಳಿಗೆ ಕಷ್ಟಗಳಿಂದ ಪಾರುಮಾಡುವ ಏಕೈಕ ಅಸ್ತ್ರವೆಂದರೆ ದೇವರೊಬ್ಬನೆ, ಹಾಗಾಗಿ ದೇವರಿಗೆ ಸಂಬಂಧಿಸಿದ ಆಚರಣೆಗಳನ್ನು ಅತ್ಯಂತ ಕಟ್ಟುನಿಟ್ಟಾಗಿ, ಎಚ್ಚರಿಕೆಯಿಂದ ಮಾಡಿಕೊಂಡು ಬರುತ್ತಿರುವುದು ತಿಳಿದುಬರುತ್ತದೆ. 'ನೀನ್ಯಾಕೋ ನಿನ್ನ ಹಂಗ್ಯಾಕೋ ನಿನ್ನ ನಾಮದ (ದೇವರ) ಬಲವೊಂದಿದ್ದರೆ ಸಾಕೋ' ಎನ್ನುವಂತ ಬದುಕು ಗೋಸಂಗಿಗಳದ್ದು

೩. ಮಳೆ ತರಿಸುವ ಆಚರಣೆ

ಅಲೆಮಾರಿಗಳಾದ ಗೋಸಂಗಿಗಳು ಪ್ರಕೃತಿದತ್ತವಾಗಿ ಸಿಗುವ ಆಹಾರ ಉತ್ಪಾದನೆಗಳನ್ನೇ ಹೆಚ್ಚು ಅವಲಂಬಿಸಿರುವುದರಿಂದ, 'ಮಳೆ' ಅವರ ಬದುಕಿಗೆ ಪೂರಕವಾಗಿ ಸಹಕರಿಸುವುದು. ಯಾವುದೇ ಸ್ಥಿರಾಸ್ತಿಯನ್ನು ಹೊಂದದ ಇವರು ಹೊಟ್ಟೆಪಾಡಿಗಾಗಿ ಅವಲಂಬಿಸಿರುವ ಮುಖ್ಯ ಕಸುಬುಗಳೆಂದರೆ, ಬೇಟೆ ಮತ್ತು ಭಿಕ್ಷಾಟನೆ. ಹಾಗಾಗಿ 'ಮಳೆ ಬಂದರೆ ಬೆಳೆ, ಬೆಳೆ ಬಂದರೆ ಭಿಕ್ಷೆ' ಇವೆರಡಕ್ಕೂ ಪೂರಕವಾದ ಸಂಬಂಧಗಳಿವೆ. 'ಮಳೆ'ಗಾಗಿ ಇತರ ಸಮುದಾಯಗಳು ಆಚರಿಸುವ ಆಚರಣಾ ವಿಧಾನಗಳು ಇವರಲ್ಲಿ ಕಾಣಬಹುದಾದರೂ ಸಮಯ, ಸಂದರ್ಭ, ವಿಧಾನಗಳು ಬೇರೆ ಬೇರೆಯಾಗಿರುತ್ತವೆ.

ಹೋಳಿ ಹಬ್ಬದ ಸಂದರ್ಭದಲ್ಲಿ ಗೋಸಂಗಿಗಳು ಮಳೆಯನ್ನು ಕರೆಯುವ ಆಚರಣೆಯನ್ನು ಆಚರಿಸುತ್ತಾರೆ. ಹೋಳಿ ಸುಟ್ಟು ಮರುದಿನ ಸಮುದಾಯದ ಅವಿವಾಹಿತ ಮಹಿಳೆಯರು ಬೆಳಿಗ್ಗೆ ಐದು ಗಂಟೆಯೊಳಗೆ ಎದ್ದು ಸ್ನಾನಾದಿಗಳನ್ನು ಮುಗಿಸಿಕೊಂಡು ಮನೆಗೊಬ್ಬರಂತೆ ತುಂಬಿದ ಕೊಡ ನೀರನ್ನು ತೆಗೆದುಕೊಂಡು ಹೋಳಿ ಸುಟ್ಟ ಕುಣಿಯ ಸುತ್ತ ಚೆಲ್ಲಿ ಅದರಲ್ಲಿ ಹೂತಿದ್ದ ಅಡಿಕೆ ಚೂರೊಂದನ್ನು ಹೊರತೆಗೆದು, "ತಡ ಕಾರ್‌ದನ್ ಜಾ ಪಾಣೀರೋದನ್ ಆವ್" (ಬಿಸಿಲು ಕಾಲ ಹೋಗಲಿ ಮಳೆಗಾಲ ಬರಲಿ) ಎಂದು ಅಡಿಕೆ ಚೂರೊಂದನ್ನು ತಿನ್ನುವರು. ಹೀಗೆ ಮಾಡುವುದರಿಂದ ಮಳೆ ಬಂದೇ ಬರುತ್ತದೆ ಎಂಬ ನಂಬಿಕೆ ಇವರಲ್ಲಿದೆ. ಮಳೆ ಕರೆಯುವ ಆಚರಣೆ ಜಾನಪದರಲ್ಲಿ ಇದಕ್ಕೂ ಭಿನ್ನವಾಗಿರುವುದನ್ನು ನೋಡಬಹುದು. ಕೆಲವು ಪ್ರದೇಶಗಳಲ್ಲಿ ಕತ್ತೆ ಮೆರವಣಿಗೆ ಮಾಡಿದರೆ ಮಳೆ ಬರುತ್ತದೆಂದು ನಂಬಿದರೆ ಇನ್ನೂ ಕೆಲವು ಕಡೆ ಕಪ್ಪೆಗಳಿಗೆ ಮದುವೆ ಮಾಡಿದರೆ ಮಳೆ ಬರುವುದೆಂದು ನಂಬುವರು.

> ಕಟ್ಟೇಯ ಹತ್ಯಾನೆ ಹೊತ್ತುಗಳ ನೋಡ್ಯಾನೆ
> ಹತ್ಯಾನೆ ನೀಲ ಕುದರೆಯ | ನಮ ಕೋಮಾರ
> ಕೈ ಬೀಸಿ ಮಳೆಯ ಕರುದಾನೆ
> ಏರೀಯ ಹತ್ಯಾನೆ ಹೇಳ್ಳೇವು ನೋಡ್ಯಾನೆ

ಏರ್‍ಯಾನೆ ನೀಲ ಕುದುರೆಯ | ನಮ ಕೋಮಾರ
ಶಲ್ಯಾವ ಬೀಸಿ ಕುದಾನೆ

ಹೀಗೆ ಜೋಕುಮಾರ ನೀಲಿ ಕುದುರೆ ಹತ್ತಿ ಒಮ್ಮೆ ಕೈಬೀಸಿ ಮತ್ತೊಮ್ಮೆ ಸೆಲ್ಲೆಯನ್ನು ಬೀಸಿ ಮಳೆಯನ್ನು ಕರೆಯುತ್ತಾನೆ ಎಂಬ ವರ್ಣನೆ ಈ ಮೇಲಿನ ಪದ್ಯಗಳಲ್ಲಿ ಕಂಡುಬರುತ್ತದೆ. ಇನ್ನೂ "ಶಿವಮೊಗ್ಗ ಹಾಗೂ ಚಿತ್ರದುರ್ಗ ಜಿಲ್ಲೆಯ ಕೆಲವು ಭಾಗಗಳಲ್ಲಿ ಮಳೆ ಬಾರದಿದ್ದಾಗ ಹಂದಿಯೊಂದನ್ನು ಕತ್ತಿನವರೆಗೂ ಜೀವಂತವಾಗಿ ಹೂಳಿ, ಅದಕ್ಕೆ ನೀರು ಕೊಡದೆ ಅದು ಅರಚಾಡಿ ಹಾಗೇ ಪ್ರಾಣ ಬಿಡವಂತೆ ಮಾಡುವ ಒಂದು ಪದ್ಧತಿಯೂ ಇದೆ. ಇಂಥ ಸಮಾನಾಂತರ ಆಚರಣೆಗಳು ವಿದೇಶಗಳಲ್ಲೂ ಇವೆ. ಪ್ರಾಣಿಗಳು ಹೀಗೆ ಅಕ್ರಂದಿಸುವ ಹಾಗೆ ಮಾಡುವುದರ ಮೂಲಕ ಮಳೆ ದೇವರ ಕರುಣೆಯನ್ನು ಕೆದಕುವುದು ಸಾಧ್ಯವೆಂಬ ನಂಬಿಕೆಯಿಂದ ಇಂಥ ಆಚರಣೆಗಳು ಹುಟ್ಟುತ್ತವೆ ಎಂದು ಫ್ರೇಜರ್ ಅಭಿಪ್ರಾಯ ಪಡುತ್ತಾರೆ."[೨೨] ಹೀಗೆ 'ಮಳೆ' ತರಿಸುವ ಕುರಿತಾಗಿ ದೇಶದಾದ್ಯಂತ ವಿವಿಧ ಬಗೆಯ ನಂಬಿಕೆ-ಆಚರಣೆಗಳು ಹುಟ್ಟಿಕೊಂಡಿರುವುದು ತಿಳಿದು ಬರುತ್ತದೆ.

### ೪. ಮಳೆ ನಿಲ್ಲಿಸುವ ಆಚರಣೆ

'ಮಳೆ ಬಂದ್ರೆ ಕೇಡಲ್ಲ, ಮಗ ಉಂಡ್ರೆ ಕೇಡಲ್ಲ' ಎಂಬ ಗಾದೆಯಂತೆ ಮಳೆ ಹೆಚ್ಚಾಗಿ ಸುರಿದರೂ ಅಷ್ಟೇನು ನಷ್ಟವಿಲ್ಲ. ಆದರೆ ಅದು ತೀರಾ ಜಾಸ್ತಿಯಾದಾಗ ಅದು ನಿಲ್ಲಲಿ ಎಂಬ ಕಾರಣಕ್ಕಾಗಿ ಕೆಲವು ಆಚರಣೆಗಳು ರೂಢಿಯಲ್ಲಿರುವುದು ಕಂಡುಬರುತ್ತದೆ. ಅಲೆಮಾರಿಗಳಾದ ಗೋಸಂಗಿಗಳು ಇಂದೂ ಸಹ ಡೇರಾ ವಾಸಿಗಳಾಗಿದ್ದು, ಅವರ ಬದುಕು ಪ್ರಕೃತಿ ಮಡಿಲಲ್ಲಿ ತೆರೆದಿಟ್ಟಿದೆ. ಪ್ರಕೃತಿ ಸಹಜ ದಾಳಿಗಳನ್ನು ನಿಯಂತ್ರಿಸಲು ಕೆಲವು ಭ್ರಮನಾತ್ಮಕ ಆಚರಣೆಗಳನ್ನು ಮಾಡುತ್ತಿದ್ದು ಅದರಲ್ಲಿ ಮಳೆಯನ್ನು ನಿಲ್ಲಿಸುವ ಆಚರಣೆಯೂ ಒಂದಾಗಿದೆ. ಹಾಗೆ ನೋಡಿದರೆ ಮಳೆಯನ್ನು ತರಿಸುವ ಕರೆಯುವ ಆಚರಣೆಗಳೇ ಹೆಚ್ಚಾಗಿ ಕಂಡುಬರುತ್ತಿದ್ದು, ಮಳೆ ನಿಲ್ಲಿಸುವ ಆಚರಣೆಗಳು ತೀರ ವಿರಳವೆಂದೇ ಹೇಳಬಹುದು. ಅಲೆಮಾರಿಗಳಾದ ಇವರ ಬದುಕು ಪ್ರಕೃತಿಯಲ್ಲಿ ತೆರೆದಿಟ್ಟಿರುವುದರಿಂದ ಇಂತಹ ಆಚರಣೆಗಳು ಅನಿವಾರ್ಯವಾಗಿ ರೂಢಿಗೆ ಬಂದಿರಬೇಕು.

ದಿನಗಟ್ಟಲೆ ಸತತವಾಗಿ ಮಳೆ ಸುರಿಯುತ್ತಿದ್ದರೆ, ಅವರ ನಿತ್ಯದ ಬದುಕಿಗೆ ತುಂಬಾ ತೊಂದರೆಯಾಗುತ್ತದೆ. ಅಂತಹ ಸಂದರ್ಭದಲ್ಲಿ ಒಂದು ಕಪ್ಪೆಯನ್ನು ತಂದು, ಅದರ ಹೊಟ್ಟೆ ಮೇಲ್ಮಾಡಿ, ಅರಿಶಿಣ, ಕುಂಕುಮ, ಹಚ್ಚಿ ಛತ್ರಿಳಿ ಕುಳಿ ತೆಗೆದು ಅದರಲ್ಲಿ ಮುಚ್ಚಿಟ್ಟರೆ ಮಳೆ ನಿಂತೇ ನಿಲ್ಲುತ್ತದೆ ಎಂಬ ನಂಬಿಕೆ ಇವರಲ್ಲಿದೆ.

ಸತತವಾಗಿ ಸುರಿಯುವ ಮಳೆಯನ್ನು ನಿಲ್ಲಿಸಲು ಇನ್ನೊಂದು ರೀತಿಯ ಆಚರಣೆಯನ್ನು ನಾವಿಲ್ಲಿ ನೋಡಬಹುದು. ಪ್ರತೀ ಡೇರಾದಿಂದ ಒಬ್ಬೊಬ್ಬರಂತೆ ಹೆಣ್ಣುಮಕ್ಕಳು ರೊಟ್ಟಿ ಮಾಡುವ ಹಂಚಿನಲ್ಲಿ ಬೆಂಕಿ ಕೆಂಡವನ್ನು ತುಂಬಿಕೊಂಡು 'ಪಾಣಿ ಜಾ' (ಮಳೆ ಹೋಗು/ನಿಲ್ಲು) ಎಂದು ಐದು ಸಲ ಹೇಳಿ

ಹಂಚಿನಲ್ಲಿನ ಕೆಂಡಗಳನ್ನು ಆಕಾಶದ ಕಡೆಗೆ ಎಸೆದರೆ ಮಳೆ ಕಡಿಮೆಯಾಗುತ್ತದೆ, ಇಲ್ಲವೆ ನಿಲ್ಲುತ್ತದೆ ಎಂಬ ನಂಬಿಕೆ ಇವರಲ್ಲಿದೆ. ಹೀಗೆ ಮಳೆಯನ್ನು ನಿಲ್ಲಿಸುವ ಆಚರಣೆಗಳು ಸಹ ಕರ್ನಾಟಕದ ಅನೇಕ ಕಡೆಗಳಲ್ಲಿವೆ. ಮಳೆ ಕರೆಯುವ ಆಚರಣೆಗಳಿಗೆ ಹೋಲಿಸಿದರೆ ಮಳೆ ತಡೆಯುವ ಆಚರಣೆಗಳು ಕಡಿಮೆಯೆಂದೇ ಹೇಳಬಹುದು.

**೫. ಮಳೆ ದಿಕ್ಕನ್ನು ಬದಲಿಸುವ ಆಚರಣೆ**

'ಮಳೆ' ಬರಿಸುವ ಆಚರಣೆಗಳಿಗೆ ಹೋಲಿಸಿದರೆ ಮಳೆ ತಡೆಯುವ ಆಚರಣೆಗಳು ತೀರಾ ವಿರಳ ಅದರಲ್ಲೂ ಮಳೆಯ ದಿಕ್ಕನ್ನು ಬದಲಿಸುವ ಆಚರಣೆಗಳಂತೂ ತುಂಬಾನೇ ವಿರಳವೆಂದು ಹೇಳಬಹುದು. ಇಂತಹ ಅಪರೂಪವಾದ ಆಚರಣೆ ಅಲೆಮಾರಿ ಸಮುದಾಯವಾದ ಗೋಸಂಗಿಗಳಲ್ಲಿ ಕಾಣಬಹುದು.

ಗೋಸಂಗಿಗಳು ಒಂದೂರಿನಿಂದ ಇನ್ನೊಂದೂರಿಗೆ ಪ್ರಯಾಣ ಬೆಳೆಸುವ ಸಂದರ್ಭದಲ್ಲಿ ಡೇರಾಗಳನ್ನು ಕೀಳುವಾಗಾಗಲಿ ಅಥವಾ ಡೇರಾಗಳನ್ನು ನಿರ್ಮಿಸುವಾಗಾಗಲಿ ಅಥವಾ ಅಡಿಗೆ ಮಾಡುವ ಸಂದರ್ಭದಲ್ಲಾಗಲಿ ಮಳೆ ಬರಲು ಪ್ರಾರಂಭಿಸಿದರೆ, ತಮ್ಮ ಸಮುದಾಯದಲ್ಲಿನ ದಂಪತಿಗಳ ಕೊನೆಯ ಮಗ (ಏಳು ಅಥವಾ ಹತ್ತು ವರ್ಷದ ಒಳಗಿರಬೇಕು) ಬೆತ್ತಲೆಯಾಗಿ ನಿಲ್ಲಿಸಿ. ಮಳೆಯನ್ನು ತಮ್ಮ ಡೇರಾದ ಕಡೆಗೆ ಬರದಂತೆ ಮಾಡು ಎಂದು ಕೇಳಿಕೊಳ್ಳುವರು. ಆಗ ಆ ಹುಡುಗ ಮಳೆರಾಯನ ಕಡೆ ಕೈಮಾಡಿ 'ಪಾಣಿ ನೂಜಾ' 'ಪಾಣಿ ನೂಜಾ' (ಮಳೆಯೇ ನೀ ಆ ಕಡೆ ಹೋಗು, ಮಳೆಯೇ ನೀ ಆ ಕಡೆ ಹೋಗು) ಎಂದು ಐದು ಸಲ ಕೈಬೀಸಿ ಹೇಳುವನು. ಇಷ್ಟೇಳಿದರೂ ಮಳೆ ಮತ್ತೆ ಡೇರಾದ ಕಡೆ ಬರುತ್ತಿದ್ದರೆ ಇಡೀ ಸಮುದಾಯದ ಜನ ಸೇರಿ ಒಕ್ಕೋರಲಿನಿಂದ 'ಮತ್ ಬುಲಾವ ಪಾಣಿ' (ಮತ್ತೆ ಮಳೆಯನ್ನು ಕರೆಯಬೇಡ) ಎಂದು ಆ ಹುಡುಗನಿಗೆ ವಿನಂತಿಸಿಕೊಳ್ಳುವರು. ಆಗ ಆ ಬಾಲಕ 'ಪಾಣಿ ನೂಜಾ, ಪಾಣಿ ನೂಜಾ' ಎಂದು ಕೈಬೀಸಿ ಮಳೆರಾಯನಲ್ಲಿ ಭಿನ್ನವಿಸಿಕೊಳ್ಳುವನು. ಇಷ್ಟೆಲ್ಲಾ ಪರಿಪರಿಯಾಗಿ ಕೇಳಿಕೊಂಡರೂ ಮಳೆರಾಯ ಬಿಡದಿದ್ದರೆ, ಆ ಮಗು ಮಳೆಯಲ್ಲಿ ನಿಂತು ಅಳಲು ಶುರುಮಾಡುವನಂತೆ. ಆಗ ಆ ಬಾಲಕನ ಅಳಲನ್ನು ಕಂಡ ಮಳೆರಾಯ ಕರುಣೆ ತೋರಿ ತನ್ನ ದಿಕ್ಕನ್ನು ಬದಲಿಸಿಯೇ ತೀರುತ್ತಾನಂತೆ. ಮಕ್ಕಳು ದೇವರಿಗೆ ಸಮಾನ ಎಂಬ ಭಾವನೆ ಪ್ರತಿಯೊಂದು ಸಮುದಾಯದಲ್ಲಿರುವುದರಿಂದ ದೇವರ ಕೋಪವನ್ನು ತಡೆಯುವ, ಆತನನ್ನು ನಿಯಂತ್ರಿಸುವ ಶಕ್ತಿ ಈ ಮಕ್ಕಳಿಗೆ ಮಾತ್ರ ಇರುವುದು ಎಂಬ ಭಾವನೆ ಇದ್ದಂತಿದೆ. ಹಾಗಾಗಿ ಮಳೆಯ ದಿಕ್ಕನ್ನು ಬದಲಿಸುವ ಕೆಲಸಕ್ಕೆ ಈ ಮಕ್ಕಳನ್ನೇ ಆಯ್ಕೆ ಮಾಡುತ್ತಿರಬೇಕು.

ಅಲೆಮಾರಿಗಳಾದ ಗೋಸಂಗಿಗಳು ತಮ್ಮ ದಿನಬಳಿಕೆಯ ವಸ್ತುಗಳಿಡಲು ಹಾಗೂ ನಾಲ್ಕು ಜನ ಮಲಗಲು ಮಾತ್ರ ಸ್ಥಳವಿರುವ ಡೇರಾಗಳಲ್ಲಿ ವಾಸಿಸುತ್ತಿದ್ದು, ಅಡಿಗೆ, ಸ್ನಾನ, ಇನ್ನಿತರೆ ಕೆಲಸ ಕಾರ್ಯಗಳು ಹೊರಗಡೆಯೇ ನಡೆಯಬೇಕು. ಮಳೆ ನಿರಂತರವಾಗಿ ಬರುತ್ತಿದ್ದರೆ ಸೌದೆ ಸಂಗ್ರಹಿಸುವುದು, ಅಡಿಗೆ ಮಾಡುವುದು, ತುಂಬಾ ಕಷ್ಟವಾಗುತ್ತದೆ. ಈ ಕಾರಣಕ್ಕಾಗಿ ಮಳೆಯ ದಿಕ್ಕನ್ನು ಬದಲಿಸುವ ಆಚರಣೆಗಳು

ಇಂತಹ ಅಲೆಮಾರಿ ಸಮುದಾಯಗಳು ಮಾತ್ರ ರೂಢಿಸಿಕೊಂಡು ಬಂದಿರಬೇಕು. ಇನ್ನೂ ಇಂತಹ ಎಷ್ಟೋ ಸಾಂದರ್ಭಿಕ ಆಚರಣೆಗಳು ಅಲೆಮಾರಿಗಳ ಗರ್ಭದಲ್ಲಿಡಗಿರಬಹುದು, ಅವುಗಳಿಗೆ ಅವರದೇ ಆದ ನಂಬಿಕೆ ನಡಾವಳಿಗಳಿವೆ. ಬದುಕಿನ ಭದ್ರತೆ ಇಲ್ಲದ ಇಂತಹ ಎಷ್ಟೋ ಸಮುದಾಯಗಳು ಇಂದೂ ಸಹ ಅಲೆಮಾರಿ ಜೀವನವನ್ನು ಅವಲಂಬಿಸಿದ್ದು. ಪ್ರಕೃತಿ ಸಹಜದಾಳಿಗಳ ನಿಯಂತ್ರಣಕ್ಕೆ ಇಂತಹ ಆಚರಣೆಗಳನ್ನು ರೂಢಿಸಿಕೊಂಡು ಬಂದಿರಬೇಕು.

## ಸಂಸ್ಕಾರಗಳು

ಜನನ : ಪ್ರತಿಯೊಂದು ಜಾತಿ ಮತ್ತು ಬಡುಕಟ್ಟುಗಳಲ್ಲಿ 'ಹುಟ್ಟು' ಅತ್ಯಂತ ಸಂತೋಷದಾಯಕವಾಗಿರುತ್ತದೆ. ಹೊಸಜೀವಕ್ಕೆ ಜನ್ಮ ನೀಡುವ ಗರ್ಭಿಣಿಯನ್ನು ಕುಟುಂಬ ಸದಸ್ಯರು, ಅಕ್ಕಪಕ್ಕದವರು ಪ್ರೀತ್ಯಾದಾರಗಳಿಂದ ನೋಡಿಕೊಳ್ಳುವರು. ಆಕೆಯ ಮಾನಸಿಕ ಹಾಗೂ ದೈಹಿಕ ಆರೋಗ್ಯವನ್ನು ಕಾಪಾಡುವಲ್ಲಿ ಹೆಚ್ಚು ಕಾಳಜಿ ವಹಿಸುವರು. ಶಿಷ್ಟ ಸಮುದಾಯಗಳಲ್ಲಿಯಂತೆ ಹೆರಿಗೆಗೆ ಹೆಣ್ಣನ್ನು ತವರಿಗೆ ಕಳುಹಿಸುವುದಾಗಲಿ, ಸೀಮಂತ ಕಾರ್ಯಮಾಡುವುದಾಗಲಿ ಗೋಸಂಗಿಗಳಲ್ಲಿ ಕಂಡುಬರುವುದಿಲ್ಲ. ಇದಕ್ಕೆ ಇವರ ಅಲೆಮಾರಿತನವೇ ಮುಖ್ಯ ಕಾರಣ. ಒಮ್ಮೆ ಗಂಡು ಹೆಣ್ಣು ಮದುವೆ ಮಾಡಿಕೊಂಡು ಬೇರ್ಪಟ್ಟರೆ ಮತ್ತೆ ಆ ಎರಡು ಕುಟುಂಬಗಳು ಸೇರುವ ಸಂಭವಗಳು ತೀರಾ ಕಡಿಮೆ. ಹೀಗಿರುವಾಗ ಹೆರಿಗೆ ಸಂದರ್ಭದಲ್ಲಿ ಹೆಣ್ಣಿನ ತವರು ಮನೆಯನ್ನು ಹುಡುಕಿ ಬಾಣಂತಿತನವನ್ನು ತೀರಿಸಿಕೊಂಡು ಮತ್ತೆ ಗಂಡನ ಮನೆ ಸೇರುವುದು ಕಷ್ಟ ಸಾಧ್ಯ. ಈ ಕಾರಣದಿಂದಾಗಿ ಅರೆ ಅಲೆಮಾರಿಗಳಾದ ಗೋಸಂಗಿಗಳು ಇತ್ತೀಚಿಗೆ ಹತ್ತಿರದಲ್ಲೇ ಹೆಚ್ಚಾಗಿ ಸಂಬಂಧಗಳನ್ನು ಬೆಳೆಸುವರು. ಕೆಲವೊಮ್ಮೆ ತವರಿನವರು ಹತ್ತಿರದಲ್ಲೇ ಇದ್ದರೂ ಸಹ ಹೆಂಡತಿಯನ್ನು ತವರಿಗೆ ಕಳುಹಿಸದೆ ಹಿಂದಿನ ಪದ್ಧತಿಯಂತೆ ಬಾಣಂತಿತನವನ್ನು ಗಂಡನ ಮನೆಯಲ್ಲೇ ಮಾಡಿ ಮುಗಿಸುತ್ತಿರುವುದು ಕಂಡುಬರುತ್ತದೆ.

ಲಂಬಾಣಿ, ಕಾಡುಗೊಲ್ಲರು, ಹಕ್ಕಿಪಿಕ್ಕಿ, ಬಿಲ್ಲರು, ಮೊದಲಾದ ಬುಡಕಟ್ಟುಗಳು ಗರ್ಭಿಣಿಗೆ ಪ್ರತ್ಯೇಕವಾದ ಗುಡಿಸಲನ್ನು (ಡೇರಾ) ನಿರ್ಮಿಸುತ್ತಾರೆ. ಆದರೆ ಗೋಸಂಗಿಗಳು ಪ್ರತ್ಯೇಕವಾದ ಡೇರಾವನ್ನು ನಿರ್ಮಿಸದೆ ತಾವು ವಾಸವಾಗಿರುವ ಡೇರಾವನ್ನೇ ಗರ್ಭಿಣಿಗೆ ಬಿಟ್ಟುಕೊಟ್ಟು ಕುಟುಂಬದ ಇತರ ಸದಸ್ಯರು ಹೊರಗುಳಿಯುವರು. ಮಳೆಗಾಲ ಇನ್ನಿತರೆ ತುರ್ತು ಸಂದರ್ಭಗಳಲ್ಲಿ ಮಾತ್ರ ತಾವಿರುವ ಡೇರಾದಲ್ಲೇ ಅರ್ಧಭಾಗಕ್ಕೆ ಬಟ್ಟೆಯಿಂದ ಮರೆಮಾಡಿ ಬಾಣಂತಿಗೆ ಬಿಟ್ಟುಕೊಡುವರು. ಆ ಸ್ಥಳವನ್ನು ಸೂತಕದ ಜಾಗವಾಗಿ ಪರಿಭಾವಿಸುವರು. ಗರ್ಭಿಣಿಯು ಮಲಗುವ ಸ್ಥಳದಲ್ಲಿ ಸ್ವಲ್ಪ ಹುಲ್ಲನ್ನು ಹಾಸಿ, ಊಟಮಾಡಲು, ನೀರುಕುಡಿಯಲು ಪ್ರತ್ಯೇಕವಾದ ತಟ್ಟೆ, ಚೆಂಬನ್ನು ನೀಡುವರು. ಅಷ್ಟೇ ಅಲ್ಲ ದುಷ್ಟ ಶಕ್ತಿಗಳ ನಿವಾರಣೆಗಾಗಿ ಕಬ್ಬಿಣದ ಆಯುಧವನ್ನು ಪಕ್ಕದಲ್ಲಿ ಇಟ್ಟಿರುತ್ತಾರೆ. ಡೇರಾದ ಸುತ್ತಾ ಬಲೆಯನ್ನು ಹಾಕುವರು. (ದುಷ್ಟಶಕ್ತಿಗಳು ಹತ್ತಿರ ಬರದಿರಲೆಂದು) ಗರ್ಭಿಣಿ ಸ್ತ್ರೀ ನರಿ ಮಾಂಸ ತಿಂದರೆ ಹೆರಿಗೆ ಸುಗಮವಾಗುತ್ತದೆಂಬ ಬಲವಾದ ನಂಬಿಕೆ ಇವರಲ್ಲಿದೆ. ಆದ್ದರಿಂದ ಗರ್ಭಿಣಿಗೆ ತಪ್ಪದೇ ನರಿ ಮಾಂಸವನ್ನು

ತಿನ್ನಿಸುತ್ತಾರೆ. ನರಿಮಾಂಸ ಸಿಗದಿದ್ದ ಪಕ್ಷದಲ್ಲಿ ಮೊಸಳೆ ಮಾಂಸವನ್ನು ತಿನ್ನಿಸುತ್ತಾರೆ. ಬಹುಶಃ ನರಿ ಮತ್ತು ಮೊಸಳೆ ಮಾಂಸ ಉಷ್ಣ ಪದಾರ್ಥವಾದ್ದರಿಂದ ಗರ್ಭಿಣಿಯರಗೆ ತಿನ್ನುಸುತ್ತಿರಬೇಕು. ಗರ್ಭಿಣಿಗೆ ಪ್ರಸವ ವೇದನೆಯಾಗುವುದಕ್ಕಿಂತ ಮುಂಚಿತವಾಗಿ ಅದೇ ಜನಾಂಗದ ಅನುಭವಿ ಸೂಲಗಿತ್ತಿಯನ್ನು ಕರೆತರುತ್ತಾರೆ. ಎಷ್ಟೇ ಕಷ್ಟ ಆದರೂ ಸೂಲಗಿತ್ತಿಯಿಂದಲೇ ಹೆರಿಗೆ ಮಾಡಿಸುವರೇ ವಿನಃ ಆಸ್ಪತ್ರೆಗೆ ಕರೆದುಕೊಂಡು ಹೋಗುವುದಿಲ್ಲ. (ಇತ್ತೀಚೆಗೆ ನಗರ ಪ್ರದೇಶದ ಹತ್ತಿರ ವಾಸಿಸುವ ಗೋಸಂಗಿಗಳು ಎಷ್ಟೇ ಕಷ್ಟವಾದರೂ ಹೆರಿಗೆಮಾಡಿಸಲು ಆಸ್ಪತ್ರೆಗೆ ಕರೆದುಕೊಂಡು ಹೋಗುವುದಿಲ್ಲ.) ಗರ್ಭಿಣಿಗೆ ಪ್ರಸವ ವೇದನೆ ಪ್ರಾರಂಭವಾಗುತ್ತಿದ್ದಂತೆ, ಹೆರಿಗೆ ಮಾಡಿಸಲು ಸ್ವಜಾತಿಯ ಅನುಭವಸ್ಥ ಸೂಲಗಿತ್ತಿಯು ಬಂದು ಹೆರಿಗೆ ಮಾಡಿಸುತ್ತಾಳೆ. ತಾಯ ಗರ್ಭದಿಂದ ಮಗುವನ್ನು ಹೊರತೆಗೆದು ಆ ಮಗುವಿನ ಹೊಕ್ಕಳು ಬಳ್ಳಿಯನ್ನು ಸ್ವಚ್ಛವಾದ ಕುಡುಗೋಲು, ಅಥವಾ ಚಾಕನ್ನು ಬಳಸಿ, ಕೊಯ್ದು ಬೇರ್ಪಡಿಸುತ್ತಾಳೆ. ನಂಜನ್ನು ನಿಯಂತ್ರಿಸುವ ಗುಣ ಹರಿಶಿಣದಲ್ಲಿರುವುದರಿಂದ ಮಗುವಿನ ಹೊಕ್ಕಳಿನ ಬಳ್ಳಿಯನ್ನು ಕೊಯ್ದು ಭಾಗಕ್ಕೆ ಹರಿಶಿಣ ಲೇಪಿಸುವರು. (ಈ ಹಿಂದೆ ಕುದರೆ ಇಲ್ಲವೆ ದನಗಳ ಬಾಲದ ಕೂದಲಿಂದ ಹೊಕ್ಕಳು ಬಳ್ಳಿಯನ್ನು ಕಟ್ಟಿ ಬೇರ್ಪಡಿಸುತ್ತಿವ ವಿಧಾನ ಇತ್ತೆಂದು ವಕ್ತೃಗಳು ಹೇಳುತ್ತಾರೆ) ಜನವಾದ ನಂತರ ಬಾಣಂತಿಯ ಗರ್ಭದಿಂದ ಮಾಸವನ್ನು ಬಂದ ಹೊಸ ಗಡಿಗೆಯಲ್ಲಿ ಹಾಕಿ ಅದರಲ್ಲಿ ಜೋಳ, ಗೋದಿ, ಹೆಸರಿನ ಕಾಳು, ಒಂದು ರೂಪಾಯಿ ನಾಣ್ಯವನ್ನು ಹಾಕಿ ಡೇರಾದ ಸಮೀಪ ಸುರಕ್ಷಿತ ಸ್ಥಳದಲ್ಲಿ ಕುಣಿಯೊಂದನ್ನು ತೋಡಿ ಹೂಳುತ್ತಾರೆ. ನಂತರ ಅದಕ್ಕೆ ಅರಿಶಿಣ, ಕುಂಕುಮ, ಹಚ್ಚಿ ಕಾಯಿ ಒಡೆದು ಪೂಜೆ ಸಲ್ಲಿಸಿ ಅದರ ಮೇಲೆ ಬಂಡೆಯೇರಿ ನಾಯಿ ಇತರ ಪ್ರಾಣಿಗಳು ಕೆದರದಂತೆ ಎಚ್ಚರವಹಿಸುತ್ತಾರೆ. ಒಂದು ವೇಳೆ ಬಾಣಂತಿಯ ಮಾಸವನ್ನು ನಾಯಿ ಅಥವಾ ಇನ್ನತರೆ ಪ್ರಾಣಿಗಳು ತಿಂದರೆ ತಾಯಿಯ ಎದೆಹಾಲು ಬತ್ತಿಹೋಗುವುದೆಂದು ತಾಯಿ ಹಾಗೂ ಮಗುವಿಗೆ ದೋಷ ತಟ್ಟುವುದಾಗಿ ಭಯಪಡುತ್ತಾರೆ. ಹಾಗಾಗಿ ಬಾಣಂತಿಯ ಮಾಸವನ್ನು ಅತ್ಯಂತ ಎಚ್ಚರಿಕೆವಹಿಸಿ ಸುರಕ್ಷಿತ ಭಾಗದಲ್ಲಿ ಹೂಳುವರು. ಈ ರೀತಿಯ ನಂಬಿಕೆ ಬಹುತೇಕ ಎಲ್ಲಾ ಸಮುದಾಯಗಳಲ್ಲೂ ಕಂಡುಬರುತ್ತದೆ.

ಮೊದಲ ಜನನ ಹೆಣ್ಣಾಗಲಿ-ಗಂಡಾಗಲಿ ಎರಡನ್ನು ಸಮಾನವಾಗಿ ಸ್ವೀಕರಿಸುವರು. ತೆರ ಕೊಡುವ ಪದ್ಧತಿ ಇರುವ ಇವರಲ್ಲಿ 'ಹೆಣ್ಣು' ಹುಟ್ಟಿದರೆ 'ಲಕ್ಷ್ಮಿ' ಎಂದು ಭಾವಿಸುವರು. ಆದರೆ ಪಿತೃ ಪ್ರಧಾನ ಕುಟುಂಬವಾದ ಇವರಿಗೆ ವಂಶವನ್ನು ಬೆಳೆಸಲು ಪುತ್ರ ಸಂತಾನ ಬೇಕೇ ಬೇಕು. 'ನಪುತ್ರಸ್ಯ ಗತಿರ್ನಾಸ್ತಿ' ಎಂಬ ಸಂಸ್ಕೃತ ಉಕ್ತಿಯು ಹೇಳುವಂತೆ ಪುತ್ರಸಂತಾನವಿಲ್ಲದೆ ಮೋಕ್ಷವಿಲ್ಲ ಎಂದು ನಂಬಿರುವ ಪುರುಷ ಪ್ರಧಾನ ಸಮಾಜದಲ್ಲಿ ಗಂಡುಮಗುವಿನ ಜನನಕ್ಕೆ ಹೆಚ್ಚು ಪ್ರಾಶಸ್ತ್ಯವಿದೆ. ಕೆಲವು ಸಮುದಾಯಗಳಲ್ಲಿ ಹೆಣ್ಣು ಹುಟ್ಟಿದರೆ ಬೆಲ್ಲ, ಗಂಡು ಹುಟ್ಟಿದರೆ ಸಕ್ಕರೆ ಹಂಚಿ ಸಂತೋಷ ವ್ಯಕ್ತಪಡಿಸುತ್ತಿರುವುದು ಕಂಡುಬರುತ್ತದೆ.

ಹೆರಿಗೆಯಾಗಿ ಒಂದು ತಿಂಗಳವರೆಗೆ ಬಾಣಂತಿಗೆ ಗೋದಿ ಹಾಗೂ ಜೋಳದಿಂದ ಮಾಡಿದ ಪದಾರ್ಥಗಳನ್ನೇ ಕೊಡುವರು. ಬಾಣಂತಿ ಮೈ ಹಸಿ ಇರುವ ಕಾರಣ ಉಷ್ಣವನ್ನು ಹೆಚ್ಚಿಸುವ ಗುಣವುಳ್ಳ ನರಿ ಮಾಂಸ ಸಹ ಹೆಚ್ಚಾಗಿ ಕೊಡುತ್ತಾರೆ. ಮಗುವಿಗೆ ಹಾಲು ಸಮೃದ್ಧವಾಗಿ ದೊರೆಯಲಿ ಎಂಬ ಕಾರಣಕ್ಕಾಗಿ, ಕೊಬ್ಬರಿ, ಇಪ್ಪಿ, ಮೋಡಿ, ಉತ್ತುತ್ತಿಗಳನ್ನು ಅರೆದು ಪುಡಿಮಾಡಿ ಐದು ದಿನಗಳವರೆಗೆ ಬಾಣಂತಿಗೆ ತಿನ್ನಿಸುವರು. ಕೆಲವು ಕಡೆ ಬಾಣಂತಿಯೇ ಅಡಿಗೆ ಮಾಡಿಕೊಂಡು ಊಟ ಮಾಡಿದರೆ ಮತ್ತೆ ಕೆಲವು ಕಡೆ ಕುಟುಂಬದ ಸದಸ್ಯರು ಮಾಡಿ ಬಡಿಸುವರು. ಹೀಗೆ ಆಯಾ ಪ್ರದೇಶದ ಹಾಗೂ ಅವರವರ ಅನುಕೂಲಗಳಿಗೆ ತಕ್ಕಂತೆ ಬಾಣಂತಿಗೆ ಹಾರೈಕೆಯನ್ನು ಮಾಡುವರು.

**ಸೂತಕ ಮತ್ತು ಬಾಣಂತಿ ನೀರು :** ಜನನ ಮರಣಗಳಿಂದುಂಟಾಗುವ ಮೈಲಿಗೆಗೆ ಸೂತಕವೆಂದು ಭಾವಿಸುವರು. 'ಜನನ' ಮತ್ತು 'ಋತುಮತಿ' ಶುಭಸೂತಕಗಳಾದರೆ, ಮರಣ ಅಶುಭ ಸೂತಕವೆಂದು ಪರಿಗಣಿಸಿರುವುದು ಬಹುತೇಕ ಸಮುದಾಯಗಳಲ್ಲಿ ಕಂಡುಬರುತ್ತದೆ. ಹಾಗಾಗಿ ಮಗುವಿನ ಜೀವನದ ಸೂತಕವನ್ನು ಕಳೆಯುವ ವಿಧಿಗಳು ಬೇರೆ ಬೇರೆ ಬುಡಕಟ್ಟು ಜನಾಂಗಗಳಲ್ಲಿ ಬೇರೆ ಬೇರೆ ರೀತಿಯಲ್ಲಿ ಆಚರಣೆಯಲ್ಲಿರುವುದು ಕಂಡುಬರುತ್ತದೆ.

ಅಲೆಮಾರಿಗಳಾದ ಗೋಸಂಗಿಗಳಿಗೆ ಬೇರೆಯವರಂತೆ ಹೆರಿಗೆಯ ನಂತರ ಹೆಚ್ಚು ವಿಶ್ರಾಂತಿ ದೊರೆಯುವುದಿಲ್ಲ. ಪ್ರತಿಯೊಬ್ಬರು ದುಡಿದರೂ ಹೊಟ್ಟೆ ತುಂಬುವುದು ಕಷ್ಟ ಸಾಧ್ಯವಾಗುವುದರಿಂದ, ಕೆಲವೇ ದಿನಗಳಲ್ಲಿ ಬಾಣಂತಿ ವಿಶ್ರಾಂತಿ ಪಡೆದು ತಮ್ಮ ಮುಂದಿನ ವಲಸೆ ಬದುಕಿಗೆ ಸಿದ್ಧವಾಗುತ್ತಾಳೆ. ಇದು ಪ್ರತಿಯೊಂದು ಅಲೆಮಾರಿ ಸಮುದಾಯಗಳಿಗಿರುವ ಮಿತಿಯೂ ಕೂಡ. ಇತ್ತೀಚಿಗೆ ಕೆಲವು ಪ್ರದೇಶದಲ್ಲಿನ ಗೋಸಂಗಿಗಳು ಅರೆ ಅಲೆಮಾರಿಗಳಾಗಿದ್ದು, ಕೆಲವು ದಿನಗಳ ಕಾಲ ಒಂದೆಡೆ ನೆಲೆ ನಿಲ್ಲಲು ಅವಕಾಶವಿರುವುದರಿಂದ ಬಾಣಂತಿಯರಿಗೆ ಮೊದಲಿಗಿಂತ ಇಂದು ಹೆಚ್ಚಿನ ವಿಶ್ರಾಂತಿ ಸಿಗುತ್ತಿದೆ.

ಈಗ್ಗೆ ಸುಮಾರು ೨೦-೩೦ ವರ್ಷಗಳ ಹಿಂದೆ ಸೂತಕ ಕಳೆಯುವ ದಿನದಂದು ತಾಯಿ ಮಗುವಿಗೆ ಮಲಗಲು ಕೆಳಗಡೆ ಹಾಸಿದ್ದ ಹುಲ್ಲನ್ನು ಸುಟ್ಟು, ಆಕೆ ಬಳಸಿದ ಮಡಿಕೆ-ಕುಡಿಕೆಗಳನ್ನು ಬಿಸಾಡಿ ಹೊಸ ಮಡಿಕೆಗಳನ್ನು ಬಳಸುತ್ತಿದ್ದರಂತೆ, ಆದರೆ ಇತ್ತೀಚಿಗೆ ಅಲ್ಯುಮಿನಿಯಂ, ತಾಮ್ರ, ಹಿತ್ತಾಳೆ, ಸ್ಟೀಲ್ ಪಾತ್ರೆಗಳನ್ನು ಬಳಸುತ್ತಿರುವುದರಿಂದ ಸೂತಕ ಕಳೆದ ನಂತರ ಅವನ್ನು ಬಿಸಾಡದೆ ಶಾಸ್ತ್ರದ ಪ್ರಕಾರ ಸುಟ್ಟು ಮತ್ತೆ ಬಳಸುತ್ತಿದ್ದಾರೆ. ಬಹುಶಃ ಸುಟ್ಟರೆ ದೋಷ ಪರಿಹಾರವಾಗುತ್ತದೆಂಬ ಭಾವನೆ ಒಂದು ಕಡೆಗಿದ್ದರೆ, ಬಡವರಾದ ಇವರಿಗೆ ಇಂತಹ ವಸ್ತುಗಳನ್ನು ಬಿಸಾಡಿದರೆ ಮತ್ತೆ ಕೊಳ್ಳಲು ಕಷ್ಟವಾಗುತ್ತಿರಬೇಕು. ಹೀಗೆ ಬಾಣಂತಿಯ ಸೂತಕವನ್ನು ಅತ್ಯಂತ ವಿಧಿಪೂರ್ವಕವಾಗಿ ನೆರವೇರಿಸುತ್ತಾರೆ. ಹಾಗಾಗಿ ಈ ಪದ್ಧಿತಿಯನ್ನು ಇತ್ತೀಚಿಗೆ ರೂಢಿಸಿಕೊಂಡಿದ್ದಾರೆ.

ಜನನದ ಸೂತಕ ಇಡೀ ಸಮುದಾಯಕ್ಕೆ ಸೇರಿದ್ದರಿಂದ ಎಲ್ಲಾ ಡೇರಾಗಳನ್ನು ಗೋವಿನ ಸೆಗಣಿಯಿಂದ

ಸಾರಿಸಿ ತುಂಬಿದ ಕೊಡದ ನೀರಿನಲ್ಲಿ ಸ್ವಲ್ಪ ಗೋಮೂತ್ರವನ್ನು ಬೆರೆಸಿ ಎಲ್ಲಾ ಡೇರಾಗಳಿಗೆ ಚಿಮುಕಿಸುವುದರ ಮೂಲಕ ಜನ್ಮಸೂತಕ ಕಳೆಯುವರು.

'ಮಾಸ' ಹೂತ ಗುಂಡಿಯ ಮೇಲೆ ಒಂದು ಅಗಲವಾದ ಬಂಡೆಯನ್ನು ಹಾಕಿ. ಅದರ ಮೇಲೆ ದಿನಾಲು ಬಾಣಂತಿ-ಮಗುವಿಗೆ ಸ್ನಾನಮಾಡಿಸುವಾಗ, ಐದು ಅಕ್ಕಿಯ ಅಥವಾ ಜೋಳದ ಕಾಳನ್ನು ನೀರಿನಲ್ಲಿ ಹಾಕಿ ಸ್ನಾನಮಾಡಿಸುವರು, ಸ್ನಾನ ಮಾಡಿದ ನೀರು ಹೊರ ಹೋಗದಂತೆ ಅಲ್ಲೇ ಒಂದು ಗುಂಡಿಯನ್ನು ತೋಡಿ ಅದರಲ್ಲಿ ಹೋಗುವಂತೆ ವ್ಯವಸ್ಥೆಮಾಡಿರುತ್ತಾರೆ. ತಪ್ಪಿ ನೀರು ಹೊರ ಹೋದರೆ ಬಾಣಂತಿ-ಮಗುವಿಗೆ ಹಾಗೂ ಕೇಡು ತಪ್ಪಿಲ್ಲ ಎಂಬ ಭಾವನೆ ಇರುವುದರಿಂದ ಬಾಣಂತಿ ಹಾಗೂ ಮಗು ಸ್ನಾನಮಾಡಿದ ನೀರು ಹೊರ ಹೋಗದಂತೆ ಎಚ್ಚರವಹಿಸುವರು.

**ನಾಮಕರಣ :** ಬುಡಕಟ್ಟು ಜನರ ಬದುಕು ಅರಳುವುದು ಪ್ರಕೃತಿಯ ಚಲುಮಡಿಲಿನಲ್ಲಿ ಬುಡಕಟ್ಟು ಜನರ ಹೆಸರುಗಳನ್ನು ಗಮನಸಿದಾಗ ಪ್ರಕೃತಿಯ ಹಿನ್ನೆಲೆಯಲ್ಲಿ ಬಂದವುಗಳಾಗಿರುವುದು ಕಂಡುಬರುತ್ತದೆ. ಅಲೆಮಾರಿ ಗೋಸಂಗಿ ಸಮುದಾಯವು ಪೂರ್ವಜರ ಮತ್ತು ಮನೆ ದೇವರುಗಳ ಹೆಸರುಗಳನ್ನು ಮಕ್ಕಳಿಗೆ ಇಡುವುದು ಹಿಂದಿನಿಂದಲೂ ರೂಢಿಯಲ್ಲಿದೆ. ಆದರೆ ಆಧುನಿಕ ಜಗತ್ತಿನ ನಾಗರಿಕ ಪ್ರಪಂಚದ ಪರಿಚಯದಿಂದ ಸಿನಿಮಾ ಹಾಗೂ ಕ್ರಿಕೆಟ್ ತಾರೆಗಳ ಹೆಸರುಗಳಿಡುತ್ತಿರುವುದು ಕಂಡಬರುತ್ತದೆ. ಪರಂಪರೆಯಿಂದ ಹಾಗೂ ದೇವರುಗಳ ಹೆಸರುಗಳು ಆಧುನಿಕ ಯುಗದಲ್ಲಿ ಅಪಹಾಸ್ಯಕ್ಕೆ ಗುರಿಯಾಗುತ್ತಿವೆ. ಇಂತಹ ಕೀಳಿರಿಮೆ ಮತ್ತು ಮೇಲರಿಮೆ ಮನಸ್ಥಿತಿಗಳ ನಿರ್ಮಾಣ ವಸಾಹತುಶಾಹಿ ನೀತಿಯಿಂದ ಶುರುವಾಗಿರುವುದನ್ನು ಗಮನಿಸಬಹುದು.

ಶಿಷ್ಟ ಸಮುದಾಯದಲ್ಲಿ ಜರುಗುವ ಶಾಸ್ತ್ರೀಯ ಪದ್ಧತಿಯಂತೆ ನಾಮಕರಣ ಗೋಸಂಗಿಗಳಲ್ಲಿರುವುದು ಕಂಡುಬರುವುದಿಲ್ಲ. ಬದಲಾಗಿ ಕಡುಬಡತನದಿಂದ ಜೀವಿಸುವ ಅಲೆಮಾರಿ ಗೋಸಂಗಿಗಳು ಅತ್ಯಂತ ಸರಳರೀತಿಯಲ್ಲಿ ನಾಮಕರಣಮಾಡುತ್ತಿರುವುದು ಕಂಡುಬರುತ್ತದೆ. ಮಗುವಿನ ನಾಮಕರಣಕ್ಕೆ ಇಂತಹದ್ದೆ ದಿನ ನೆರವೇರಿಸಬೇಕೆಂಬ ನಿಯಮವೇನಿಲ್ಲ. ಮನೆಯಲ್ಲಿ ಯಾವುದಾದರೂ ಶುಭಕಾರ್ಯಗಳು ನಡೆಯುತ್ತಿದ್ದರೆ. ಅದೇ ಸಂದರ್ಭದಲ್ಲಿ ಮಗುವಿನ ನಾಮಕರಣದ ಶಾಸ್ತ್ರವನ್ನು ಮಾಡಿಮುಗಿಸುತ್ತಾರೆ. ಸಾಮಾನ್ಯವಾಗಿ ಗೋಸಂಗಿಗಳು ಮಗು ಹುಟ್ಟಿದ ಐದು ದಿನಗಳಲ್ಲಿ ನಾಮಕರಣ ಮಾಡುವುದು ಸಾಮಾನ್ಯವಾಗಿದೆ. ನಾಮಕರಣದ ದಿನ ಸಮುದಾಯದ ಡೇರಾಗಳನ್ನು ಸ್ವಚ್ಛಗೊಳಿಸಿ, ಸಂಜೆ ಹೊತ್ತಿಗೆ ಸಮುದಾಯದ ಹಿರಿ-ಕಿರಿಯರೆಲ್ಲ ದೇವರ ಸನ್ನಿಧಿಯಲ್ಲಿ ಸೇರಿ ಮಗುವಿಗೆ ನಾಮಕರಣಮಾಡುವರು. ಇತರೆ ಸಮುದಾಯಗಳು ಮಗುವಿಗೆ ನಾಮಕರಣ ಮಾಡಲು ಸೋದರಮಾವ ಅಥವಾ ಸೋದರತ್ತೆಯರನ್ನು ಕರೆತರುವ ಪದ್ಧತಿ ಇವರಲಿಲ್ಲ. ಇದೇ ಸಮುದಾಯದ ಏಳು ವರ್ಷದೊಳಗಿನ ಏಳು ಜನ ಮಕ್ಕಳನ್ನು ಕರೆತಂದು, ಅವರ ಕೈಯಲ್ಲಿ ಕೊಬ್ಬರಿ, ಬೆಲ್ಲ, ಸಕ್ಕರೆಯನ್ನು ಕೊಡುವರು. ಆನಂತರ ಕೌದಿತೊಟ್ಟಿಲಲ್ಲಿರುವ ಮಗುವಿಗೆ

ಹಿರಿಯರ ನಿರ್ದೇಶನದಂತೆ ಆ ಏಳುಜನ ಮಕ್ಕಳು ಐದು ಸಲ ತೊಟ್ಟಿಲು ತೂಗಿ ಹೆಸರಿಡುವುದು ವಾಡಿಕೆ. ಮಕ್ಕಳು ದೇವರ ಸಮಾನವೆಂಬ ನಂಬಿಕೆ ಗೋಸಂಗಿಗಳಲ್ಲಿರುವುದುರಿಂದ ಮಕ್ಕಳ ಮುಖಾಂತರ ನಾಮಕರಣ ಕಾರ್ಯ ನೆರವೇರಿಸುತ್ತಾರೆ. ಹೆಣ್ಣು ಮಗುವಿಗೆ ಯಾವುದೇ ಹೆಸರಿಟ್ಟರೂ ಹೆಸರಿನ ಉತ್ತರಾರ್ದ 'ಬಾಯಿ' ಸೇರಿಕೊಳ್ಳುತ್ತದೆ. ಉದಾಹರಣೆಗೆ ಜಯಾಬಾಯಿ, ಅನಸಬಾಯಿ, ಗಿರಿಜಾಬಾಯಿ, ಮಂಜುಳಾಬಾಯಿ ಮೊದಲಾದ ಹೆಸರುಗಳನ್ನು ಗಮನಿಸಬಹುದು. ಗಂಡುಮಗುವಿಗಾದರೆ, ಬಂಧು, ಬಾಯಿಯೋ, ಭಜನಿಯೋ, ನಾನಿಯೋ, ಜಲ್ಲಿಯೋ, ಟಕಿಯೋ ಎಂದು ನಾಮಕರಣ ಮಾಡುತ್ತಾರೆ. ಹೆಂಗಸರು ಅಮ್ಮಣಿಬಾಯಿ, ರತ್ನಣಿಬಾಯಿ, ಕಂಬಳಿಬಾಯಿ, ಬಾಜಿಬಾಯಿ, ದನ್ನಿಬಾಯಿ 'ಬಾಯಿ' ಎಂಬ ಪದವನ್ನು ಗಮನಿಸಿದರೆ 'ಮರಾಠಿ'ಗರ ಪ್ರಭಾವವಿರುವುದು ಎದ್ದುಕಾಣುತ್ತದೆ.

**ಋತುಮತಿ :** ಸೃಷ್ಟಿಯ ತಾಣದೊಳಗೆ ನಿಸರ್ಗ ನಿಯಮದಂತೆ ಜೀವಸಂಕುಲಗಳು ದೈಹಿಕ ಬದಲಾವಣೆ ಹೊಂದುವುದು ಸಹಜ. ಇದಕ್ಕೆ ಮನುಷ್ಯ ಹೊರತಾಗಿಲ್ಲ. ಹೆಣ್ಣು ಪ್ರೌಢಾವಸ್ಥೆ ತಲುಪಿ ಋತುಮತಿಯಾಗುವುದು ನೈಸರ್ಗಿಕ ಕ್ರಿಯೆ. ಹೆಣ್ಣು ಋತುಮತಿಯಾಗುವುದರ ಮೂಲಕ ದೈಹಿಕವಾಗಿ ಬದಲಾವಣೆಯನ್ನು ಹೊಂದುತ್ತಾಳೆ. ಋತುಮತಿಯಾಗುವುದನ್ನು ಕೆಲವು ಪ್ರದೇಶಗಳಲ್ಲಿ 'ಮೈನೆರೆಯುವುದು' 'ಪುಷ್ಪವತಿಯಾಗುವುದು', ದೊಡ್ಡವಳಾಗುವುದು ಎಂದು ಮುಂತಾಗಿ ಕರೆಯುವುದು ರೂಢಿಯಲ್ಲಿದೆ. ಗೋಸಂಗಿಗಳು ತಮ್ಮ ಭಾಷೆಯಲ್ಲಿ ನಾಣೆ ಆವಿ, ನಾದೋಟಿ ಎಂದೆಲ್ಲಾ ಕರೆಯುವರು. ಹೀಗೆ ಮೈ ನೆರದ ಹೆಣ್ಣಿಗೆ ಶಾಸ್ತ್ರೋಕ್ತ ವಿಧಿವಿಧಾನಗಳು ಭಾರತೀಯ ಇತರ ಬಡುಕಟ್ಟುಗಳಲ್ಲಿ ಆಚರಣೆಯಲ್ಲಿರುವುದು ಸ್ಪಷ್ಟ. ಆದರೆ ಹಿಂದೆ ಗೋಸಂಗಿ ಸಮುದಾಯದಲ್ಲಿ ಇದ್ದಂತಹ ಕಟ್ಟುನಿಟ್ಟಿನ ಕ್ರಮ ಇಂದು ಇದ್ದಂತೆ ಕಾಣುತ್ತಿಲ್ಲ.

ಗೋಸಂಗಿಗಳು ಋತುಮತಿಯಾದ ಶಾಸ್ತ್ರ ಸಂದರ್ಭವನ್ನು ಸೂತಕವೆಂದೇ ಭಾವಿಸುತ್ತಾರೆ. ಈ ಹಿಂದೆ ಗೋಸಂಗಿಗಳು ಋತುಮತಿಯಾದವಳನ್ನು ಪ್ರತ್ಯೇಕವಾದ ಡೇರಾದಲ್ಲಿರಸುತ್ತಿರು. ಆಗ ಸುಮಾರು ಒಂಬತ್ತು ದಿನಗಳ ಕಾಲ ಆಕೆ ಏಕಾಂತದಲ್ಲಿರಬೇಕಾಗುತ್ತಿತ್ತು. ಆದರೆ, ಇತ್ತೀಚಿನ ದಿನಗಳಲ್ಲಿ ಈ ಪದ್ಧತಿಯಲ್ಲಿ ಸ್ವಲ್ಪ ಬದಲಾವಣೆಗೊಳಪಟ್ಟಿದೆ. ಈಚೆಗೆ ಹಾಲಿ ವಾಸ ಮಾಡುವ ಡೇರಾದ ಒಂದು ಮೂಲೆಯಲ್ಲಿ 'ಋತುಮತಿ'ಯಾದವಳಿಗೆ ಬಟ್ಟೆಯ ಪರದೆಯಿಂದ ಮರೆಮಾಡುತ್ತಾರೆ. ಸೂತಕದ ಸ್ಥಳದಲ್ಲಿ ಕುಡುಗೋಲು, ಮೆಟ್ಟು, ಪೊರಕೆ ಇಡುವುದರ ಜೊತೆಗೆ ಬೇವಿನ ಸೊಪ್ಪನ್ನು ಸಹ ಋತುಮತಿಯಾದವಳ ಪಕ್ಕಕ್ಕಿಟ್ಟಿರುತ್ತಾರೆ. ಹೀಗೆ ಮಾಡುವುದರಿಂದ ದುಷ್ಟ ಶಕ್ತಿಗಳು ಹತ್ತಿರ ಸುಳಿಯದಿಲ್ಲವೆಂಬ ನಂಬಿಕೆ ಗೋಸಂಗಿಗಗಳಲ್ಲಿ ಬಲವಾಗಿ ಬೇರೂರಿದೆ. ಋತುಮತಿಯಾದವಳಿಗೆ ಪ್ರತ್ಯೇಕವಾದ ತಟ್ಟೆ, ಚೆಂಬನ್ನು ಕೊಡುತ್ತಾರೆ. ಒಂಬತ್ತು ದಿನಗಳ ಕಾಲ ಆಕೆಯನ್ನು ಮುಟ್ಟಾದವಳೆಂದು ಭಾವಿಸುತ್ತಾರೆ. ಗೋಸಂಗಿಗಳಲ್ಲಿ ಮೈನೆರದ ಹೆಣ್ಣಿಗೆ ಜೋಳದ ಅಂಬಲಿ, ಗೋದಿಯಿಂದ ತಯಾರಿಸಿದ ಪದಾರ್ಥಗಳನ್ನು ಕೊಡುವುದು. ಸೂತಕ ಬಿಡಿಸುವ ದಿನ ಸಮುದಾಯದ ಎಲ್ಲಾ ಡೇರಾಗಳನ್ನು ಸ್ವಚ್ಛಗೊಳಿಸಿ ಗೋಮೂತ್ರದಿಂದ ಶುದ್ಧಗೊಳಿಸುವರು. ಸೂತಕ

ಬಿಡಿಸುವ ದಿನ ಋತುಮತಿಯಾದವಳಿಗೆ ಸ್ನಾನಮಾಡಿಸಿ ಅವರ ಅನುಕೂಲಗಳಿಗೆ ತಕ್ಕಂತೆ ಯಾವುದಾದರೊಂದು ಸಿಹಿ ಪದಾರ್ಥ ಮಾಡಿ ಮನೆದೇವರಿಗೆ ನೈವೇದ್ಯ ಅರ್ಪಿಸಿ ಸೂತಕ ಬಿಡಿಸುವರು. ಆನಂತರ ಆಕೆ ಬಳಸಿದ ತಟ್ಟೆ-ಚೆಂಬುಗಳನ್ನು ಸುಟ್ಟು ಗೋಮೂತ್ರದಿಂದ ಶುದ್ಧಗೊಳಿಸಿ ಒಳಗೆ ತೆಗೆದುಕೊಳ್ಳುತ್ತಾರೆ.

## ಮದುವೆ

ವಿವಾಹ ಮಾನವ ಸಮಾಜದ ಅತ್ಯಂತ ಪ್ರಾಚೀನವಾದ ಸಂಸ್ಥೆ. ಕುಟುಂಬ ವ್ಯವಸ್ಥೆಯಲ್ಲಿ ಮದುವೆಗೆ ವಿಶಿಷ್ಟವಾದ ಸ್ಥಾನವಿದೆ. ಮದುವೆ ಮನುಷ್ಯ, ಸಹಜ ಬಯಕೆ. ಲೈಂಗಿಕ ಅಗತ್ಯಗಳ ಪೂರೈಕೆಗಳನ್ನು ಸಾಕಾರಗೊಳಿಸುವಲ್ಲಿ ಮದುವೆ ಮಹತ್ತರ ಪಾತ್ರವಹಿಸುತ್ತದೆ. ಇದರ ಮೂಲ ಉದ್ದೇಶ ಸಂತಾನೋತ್ಪತ್ತಿಯಾಗಿರುತ್ತದೆ. ಎಂ. ನಂಜಮ್ಮಣ್ಣಿಯವರ ಪ್ರಕಾರ "ವಿವಾಹ ಸಂಸ್ಥೆ ಮನುಷ್ಯನಷ್ಟೇ ಪ್ರಾಚೀನವಾದುದು. ಭಾರತದಲ್ಲಿ ವಿವಾಹವನ್ನು ಒಂದು ಧಾರ್ಮಿಕ ಸಂಸ್ಕಾರವೆಂದು ಪರಿಗಣಿಸಲಾಗಿದೆ. ವಿವಾಹಗಳು ಧಾರ್ಮಿಕ ರೀತಿ ನೀತಿ, ನಡವಳಿಕೆಗಳಿಗೆ ಅನುಸಾರವಾಗಿ ಸಂಪ್ರದಾಯಬದ್ಧವಾಗಿ ನಡೆಯುತ್ತವೆ. ವ್ಯಕ್ತಿ ಜೀವನದಲ್ಲಿ ವಿವಾಹವು ಅತಿ ಮುಖ್ಯವಾದ ಸಂಸ್ಕಾರ. ಇದು ದೇವರಿಂದ ಕಟ್ಟಲ್ಪಟ್ಟ ಒಂದು ಪವಿತ್ರ ಬಂಧನವೆಂಬ ನಂಬಿಕೆಯಿದೆ. ಮದುವೆಯಿಲ್ಲದೆ ಮೋಕ್ಷವಿಲ್ಲವೆಂಬ ನಂಬಿಕೆಯಿರುವುದರಿಂದ ಹಿಂದೂಗಳಲ್ಲಿ ವಿವಾಹ ಅನಿವಾರ್ಯ."[೧೧೩] ಇಲ್ಲಿ ಗಂಡು-ಹೆಣ್ಣುಗಳು ಪರಸ್ಪರ ಹೊಂದಾಗುವುದರ ಜೊತೆಗೆ ಒಂದು ಕುಟುಂಬ ಇನ್ನೊಂದು ಕುಟುಂಬದೊಡನೆ ಸಂಬಂಧ ಬೆಳೆಸುವುದಾಗಿರುತ್ತದೆ. ವಿವಾಹವಾಗುವುದು ತಮ್ಮ ಅನುಕೂಲಕ್ಕಾಗಿ ಅಲ್ಲ. ಕುಟುಂಬವನ್ನು ಮುಂದುವರಿಸಿಕೊಂಡು ಹೋಗುವ ಉದ್ದೇಶವೂ ಇದರಲ್ಲಡಗಿದೆ. ವಿವಾಹವು ಧರ್ಮ, ಅರ್ಥ, ಕಾಮಗಳ ಸಮನ್ವಯವೂ ಹೌದು. ಹಿಂದೂಗಳಿಗೆ ಸಂಸ್ಕಾರಗಳೆಲ್ಲಲ್ಲ ಮದುವೆಯು ಬಹು ಮಹತ್ವಪೂರ್ಣವಾದದ್ದು. ಆಚಾರ-ವಿಚಾರ, ನೇಮ-ನಿಷ್ಠೆ, ಸಂಪ್ರದಾಯಗಳೆಲ್ಲವೂ, ಗೃಹಸ್ಥನ ಸುತ್ತ ಹೆಣೆದುಕೊಂಡಿರುವುದರಿಂದ, ವಿವಾಹಗಳಿಂದಲೇ ಸಂಸ್ಕಾರಗಳು ಪ್ರಾರಂಭವಾಗಿವೆ ಎಂದರೆ ತಪ್ಪಾಗಲಿಕ್ಕಿಲ್ಲ.

ಪ್ರಾಚೀನ ಕಾಲದಲ್ಲಿ ಮಾನವ ಗುಂಪು ಕಟ್ಟಿಕೊಂಡು ಕಾಡುಗಳಲ್ಲಿ ವಾಸಿಸುತ್ತಾ ಸಾಮೂಹಿಕವಾಗಿ ಆಹಾರ ಸಂಗ್ರಹಣೆಯಲ್ಲಿ ಭಾಗವಹಿಸುತ್ತಿದ್ದ. ಈ ರೀತಿಯ ಜೀವನ ಸಾಗಿಸುತ್ತಿದ್ದ ಆದಿಮ ಮನುಷ್ಯ ಇತರೆ ಪ್ರಾಣಿಗಳಂತೆ ಮುಕ್ತ ಲೈಂಗಿಕ ಸಂಬಂಧವನ್ನು ಹೊಂದಿ. ಆ ಮೂಲಕ ಸೃಷ್ಟಿ ಕ್ರಿಯಯೆಯಲ್ಲಿ ತನಗರಿವಿಲ್ಲದಂತೆಯೇ ಭಾಗಿಯಾಗುತ್ತಿದ್ದ. ನಂತರ ತನ್ನ ಜೀವಿತದಲ್ಲಿ ಹಂತಹಂತವಾಗಿ ಬದಲಾವಣೆಗಳನ್ನು ಹೊಂದುತ್ತಾ ನಿರಂತರ ಅಲೆಮಾರಿತನಕ್ಕೆ ಕಡಿವಾಣ ಹಾಕಿ, ತಾನು ತನ್ನವರು ಎಂಬ ಭಾವನೆ ಉಂಟಾಗಿ, ಮುಕ್ತ ಲೈಂಗಿಕತೆಗೆ ತೆರೆ ಎಳೆದು, ಗಂಡು-ಹೆಣ್ಣುಗಳ ಸಂಬಂಧಗಳ ಬಗ್ಗೆ ಹೊಸ ಸ್ವರೂಪವನ್ನು ಕಂಡುಕೊಂಡು 'ವಿವಾಹ'ದ ಮೂಲಕ ಪ್ರತ್ಯೇಕವಾದ ಕುಟುಂಬಗಳನ್ನು ಕಟ್ಟಿಕೊಳ್ಳುವ ಸಂಪ್ರದಾಯ ಬೆಳೆದು ಬಂದಿರಬೇಕು. ಹೀಗೆ ಪ್ರಾಚೀನ ಕಾಲದ ಸಮಾಜದಿಂದ ಹಿಡಿದು ಇಂದಿನ ಆಧುನಿಕರ ಸಮಾಜದವರೆಗೆ

ಕುಟುಂಬ ವ್ಯವಸ್ಥೆಗಳು ಮತ್ತು ವಿವಾಹ ಸಂಪ್ರದಾಯಗಳು ವಿವಿಧ ಮಾದರಿಗಳಲ್ಲಿ ಬೆಳೆದುಕೊಂಡು ಬಂದಿರುವುದನ್ನು ನಾವು ಕಾಣುತ್ತಿದ್ದೇವೆ. ಆದ್ದರಿಂದ ಟೈಲರ್‌ನ ಪ್ರಕಾರ ವಿವಾಹವೆಂದರೆ ವ್ಯಕ್ತಿವ್ಯಕ್ತಿಗಳ ನಡುವೆ ನಡೆಯುವ ಸಂಬಂಧ ಮಾತ್ರವಲ್ಲ. ಕುಟುಂಬ ಕುಟುಂಬಗಳ ನಡುವೆ ನಡೆಯುವ ಸಂಬಂಧ.

**ಮಾತುಕತೆ :** ಲಂಬಾಣಿ, ಗೊಂಡರು, ಮೊಗವೀರರು, ಸಿಂದ್‌ಮಾದಿಗರು ಇನ್ನಿತರ ಬುಡಕಟ್ಟು ಸಮುದಾಯಗಳಲ್ಲಿರುವಂತೆ ಗೋಸಂಗಿಗಳಲ್ಲೂ ಸಹ ವಧುದಕ್ಷಿಣೆ ಪದ್ಧತಿ ರೂಢಿಯಲ್ಲಿದ್ದು, ವರನ ಕಡೆಯವರೇ ವಧುವನ ಅನ್ವೇಷಣೆಯಲ್ಲಿ ತೊಡಗುತ್ತಿರುವುದು, ಇಂದೂ ಸಹ ಕಾಣಬಹುದಾಗಿದೆ. ಆದರೆ ಕೆಲವು ಮುಂದುವರಿದ ಸಮುದಾಯಗಳಲ್ಲಿ ಇದಕ್ಕೆ ವ್ಯತಿರಿಕ್ತವಾದ ಆಚರಣೆಗಳು ರೂಢಿಯಲ್ಲಿದ್ದು ವರದಕ್ಷಿಣೆ ಎಂಬ ಪಿಡುಗು ತಾಂಡವಾಡುತ್ತಿದೆ. ಹೆಣ್ಣು ಹೆತ್ತವರ ಗೋಳು ಹೇಳತೀರದು. ಇಲ್ಲಿ ಹೆಣ್ಣಿನವರೇ ವರನನ್ನು ಹುಡುಕಿಕೊಂಡು ಹೋಗುವುದು ಸಾಮಾನ್ಯ. ಇಲ್ಲಿ ಕೊಡು-ಕೊಳ್ಳುವಿಕೆಯಲ್ಲಿ ಸ್ವಲ್ಪ ವ್ಯತ್ಯಾಸವಾದರೂ ಹೆಣ್ಣಿಗೆ ಅಪಾಯ ತಪ್ಪಿದ್ದಲ್ಲ. ಬದಲಾಗಿ ಬುಡಕಟ್ಟು ಸಮುದಾಯಗಳು ಇಂತಹ ಕ್ರೂರ ಪದ್ಧತಿಗಳಿಂದ ಮುಕ್ತವಾಗಿರುತ್ತವೆ. ಇವರು ಮಾತಿಗೆ ಹೆಚ್ಚು ಬೆಲೆ ಕೊಡುತ್ತಾರೆ. ಇವರಲ್ಲಿನ ನ್ಯಾಯ ಪಂಚಾಯ್ತಿ ತುಂಬಾ ಬಿಗಿ ಇರುವುದರಿಂದ ಮಾತು ತಪ್ಪಿದವರಿಗೆ ಕೊಡುವ ಶಿಕ್ಷೆಗಳು ತುಂಬಾ ಉಗ್ರವಾಗಿರುವುದರಿಂದ ಮಾತು ಮುರಿಯುವ ಘಟನೆಗಳು ತೀರಾ ವಿರಳವೆಂದೇ ಹೇಳಬಹುದು. ಇದು ಪ್ರತಿಯೊಂದು ಬುಡಕಟ್ಟಿನ ನೀತಿಯೂ ಹೌದು.

ಗೋಸಂಗಿ ಸಮುದಾಯದಲ್ಲಿ ಗಂಡಿನವರು ಹೆಣ್ಣಿನ ಮನೆಗೆ ಮಾತುಕತೆಗೆ ಹೋಗುವಾಗ, ಐದು ಜನ ಮುತ್ತೈದೆಯರು, ಐದು ಜನ ದೈವದವರು ಕೂಡಿ ಹೋಗುವುದು ವಾಡಿಕೆ. ಕೆಲವೊಮ್ಮೆ ಎರಡು ಬೆಡಗುಗಳ ಮಧ್ಯೆ ಬೇರೊಂದು ಬೆಡಗಿನ ವ್ಯಕ್ತಿಯನ್ನು ಕರೆದುಕೊಡು ಹೋಗುವರು. ಆತನಿಗೆ 'ಗಂಗಾ' ಎಂದು ಕರೆಯುವರು. ಗೋಸಂಗಿಗಳು ಮಾಡುವ ಮದುವೆ ಕಾರ್ಯಗಳಲ್ಲಿ ದೈವ ಹಾಗೂ 'ಗಂಗಾ'ನ ಪಾತ್ರ ಬಹಳ ಮುಖ್ಯವಾಗಿರುತ್ತದೆ. ಇವರಿಲ್ಲದೆ ಮಾತುಕತೆ ನಡೆಯುವುದಿಲ್ಲ. ಇಲ್ಲಿ ಗಂಡಿನ ತಂದೆ-ತಾಯಿ ಹಾಗೂ ದೈವಗಳೇ ಹೆಣ್ಣನ್ನು ಆಯ್ಕೆ ಮಾಡುವರು. ಇವರು ಆಯ್ಕೆ ಮಾಡಿದ ಹೆಣ್ಣನ್ನು ಯಾವುದೇ ಕಾರಣಕ್ಕೂ ಗಂಡು ತಿರಸ್ಕಾರಸುವಂತಿಲ್ಲ. ಆದರೆ ವಿವಾಹವಾಗುವ ಪುರುಷನು ಆ ಹೆಣ್ಣನ್ನೊಮ್ಮೆ ನೋಡಿ ತನ್ನ ಒಪ್ಪಿಗೆ ಸೂಚಿಸುವ ಸ್ವತಂತ್ರವನ್ನು ನೀಡುವುದು ಕಂಡುಬರುತ್ತದೆ. ಮಾತುಕತೆಯ ಮೂಲಕ ಮದುವೆಯ ಮೊಟ್ಟಮೊದಲ ಕಾರ್ಯ ಆರಂಭವಾಗುತ್ತದೆ. ಎಷ್ಟೇ ಕಷ್ಟ ಬಂದರೂ ಕೊಟ್ಟ ಮಾತನ್ನು ಉಳಿಸಿಕೊಳ್ಳಲು ಪ್ರಯತ್ನಿಸುತ್ತಾರೆ. ಇದು ಈ ಜನಾಂಗವು ಒಪ್ಪಿ ಪಾಲಿಸಿಕೊಂಡು ಬಂದಿರುವ ಜೀವನ ಮೌಲ್ಯವಾಗಿದೆ.

**ನಿಶ್ಚಿತಾರ್ಥ (ಸಗಾಯಿ) :** ವಿವಾಹ ಪೂರ್ವದಲ್ಲಿ ನಡೆಯುವ ಮಹತ್ವದ ಕಾರ್ಯಗಳಲ್ಲಿ 'ನಿಶ್ಚಿತಾರ್ಥ'ವೂ ಒಂದು. ಇದನ್ನು 'ಸಗಾಯಿ' ಎಂದು ಕರೆಯುವರು. "ಸಗಾಯಿ ಎಂಬ ಪದವು 'ಸಗೋ' ಎಂಬ ಪದದಿಂದ

ಬಂದಿದೆ. ಮದುವೆ ಕಾರ್ಯದಲ್ಲಿ ಊರಿನ ಥಳಕೇರಿ (ಮುಖ್ಯಸ್ಥ)ಯ ಪಾತ್ರ ಬಹಳ ಮುಖ್ಯವಾಗಿರುತ್ತದೆ. ಉರ್ದು ಹಾಗೂ ಸಂಸ್ಕೃತ ಭಾಷೆಗಳಲ್ಲಿ 'ಸಗಾಯಿ' ಪದವು 'ಮದುವೆಯ ನಿಶ್ಚಯ' ಎಂಬರ್ಥದಲ್ಲಿ ಬಳಕೆಯಲ್ಲಿದೆ."[೧೯] ಹಾಗಾಗಿ ಗೋಸಂಗಿಗಳು ಬಳಸುವ ಸಗಾಯಿ ಎಂಬ ಪದವನ್ನು ಉರ್ದು, ಹಾಗೂ ಸಂಸ್ಕೃತ ಭಾಷೆಗಳಿಂದ ಎರವಲು ಪಡೆದಿರಬಹುದು. ಲಂಬಾಣಿ ಜನಾಂಗದಲ್ಲೂ ಈ ಪದ ಬಳಕೆಯಲ್ಲಿರುವುದು ಕಂಡುಬಂದಿದೆ. ಬಹು ಭಾಷೆಗಳನ್ನು ಬಲ್ಲ ಇಂತಹ ಅಲೆಮಾರಿ ಸಮುದಾಯಗಳಿಗೆ ಬೇರೆ ಭಾಷೆಯ ಪದಗಳು ಬಂದು ಸೇರುವುದು ಸಹಜವೇ ಆಗಿದೆ

ತಂದೆ-ತಾಯಿ ಕುಟುಂಬದ ಇತರೆ ಸದಸ್ಯರು ಹಾಗೂ ಐದು ಜನ ದೈವಗಳು ಕೂಡಿ ನಿಶ್ಚಿತಾರ್ಥಕ್ಕೆ ಹೆಣ್ಣಿನ ಮನೆಗೆ ಹೋಗುವರು. ಈ ಸಂದರ್ಭದಲ್ಲಿ ಐದು ಜನ ದೈವಗಳು ಮುಖ್ಯ ಪಾತ್ರ ವಹಿಸುವರು. ನಿಶ್ಚಿತಾರ್ಥದಿಂದ ಹಿಡಿದು ಮದುವೆ ಮುಗಿಯುವವರೆಗೆ ಎಲ್ಲಾ ಜವಬ್ದಾರಿ ದೈವಗಳದ್ದೆ, ದೈವಗಳನ್ನು ಸಾಮಾನ್ಯವಾಗಿ ವಯಸ್ಸಿನ ಆಧಾರದ ಮೇಲೆ ಆಯ್ಕೆಮಾಡುವರು. ಐದು ಜನ ದೈವಗಳು ಬೇರೆ ಬೇರೆ ಬಳಿಯ (ಬೆಡಗು)ವರಾಗಿರಬೇಕು. ಐದೂ ಜನ ಬೇರೆ ಬೇರೆ ಬಳಿಯ ದೈವಗಳು ಸಿಗದೇ ಇದ್ದ ಪಕ್ಷದಲ್ಲಿ ಕನಿಷ್ಟ ಒಬ್ಬರಾದರೂ ಬೇರೆ ಬಳಿಯುವರಿರಬೆಕು.

ಹೆಣ್ಣಿನ ಕಡೆಯವರು ಹಾಗೂ ಗಂಡಿನ ಕಡೆಯವರು ಕುಳಿತು ಸೌಹಾರ್ದಯುತವಾಗಿ ನಿಶ್ಚಿತ ಕಾರ್ಯವನ್ನು ಮಾಡುವರು ಇವರಲ್ಲಿ ತೆರ ಕೊಡುವ ಪದ್ಧತಿಯಿದ್ದು, ಇದೇ ಸಂದರ್ಭದಲ್ಲಿ ಹೆಣ್ಣಿನ ಕಡೆಯವರಿಗೆ, ಗಂಡಿನ ಕಡೆಯುವರು ಕನ್ಯಾಶುಲ್ಕವಾಗಿ ಅರವತ್ತು (೬೦) ರೂಪಾಯಿಗಳನ್ನು ಕೊಡುವರು. ಇದಕ್ಕೆ ಅವರು 'ಸಾಠರೋಕಾಯ್ದೆ' ಎಂದು ಕರೆಯುವರು. ಹೀಗೆ ತೆರವನ್ನು ಪಡೆದಂತ ಹೆಣ್ಣಿನ ತಂದೆ ಸಾಠ್ ಕಾಯ್ದಮೇ ಮಾರಿ ಬೇಟಿ ದೀದಿ (೬೦ ರೂಪಾಯಿಗಳ ಕಾಯ್ದೆಯಡಿಯಲ್ಲಿ ನನ್ನ ಮಗಳನ್ನು ಕೊಟ್ಟಿರುತ್ತೇನೆ) ಎಂದು ಒಪ್ಪಿಕೊಳ್ಳುವುದು. ನಂತರ ಈ ಕಾಯ್ದೆ ಮೇಲೆ ಎಷ್ಟು ಬೇಕಾದರೂ ಅಷ್ಟು ಹಣ ಪಡೆಯಬಹುದು. ಅದು ಗಂಡಿನವರ ಆರ್ಥಿಕ ಸ್ಥಿತಿಗತಿಯನ್ನು ಅವಲಂಬಿಸಿರುತ್ತದೆ. ಅದರಲ್ಲಿ 'ಗಂಗಾ'ಗೆ ನಾಲ್ಕು ರೂಪಾಯಿ ಕೊಟ್ಟು. ಉಳಿದ ಹಣವನ್ನು ಮದುವೆ ಖರ್ಚಿಗೆಂದು ಹೆಣ್ಣಿನ ಕಡೆಯವರು ಬಳಸುವರು. ಹೀಗೆ ತೆರೆಕೊಟ್ಟು ಮದುವೆಯಾಗುವುದಲ್ಲದೆ, ಮದುವೆ ಖರ್ಚೆಲ್ಲ ಗಂಡನವರೆ ನೋಡಿಕೊಳ್ಳಬೇಕು. "ತೆರವನ್ನು ಕೊಟ್ಟು ವಧುವನ್ನು ಪಡೆಯುವ ವಿಧಾನ ಹೆಚ್ಚು ವ್ಯಾಪಕವಾದದ್ದು. ಆದಿವಾಸಿಗಳು ಈ ವಿಧಾನವನ್ನು ಬಹಳ ಮೆಚ್ಚುತ್ತಾರೆ. ವರನ ಕಡೆಯವರು ವಧುವಿನ ತಂದೆಗೆ ಹೊಗೆಸೊಪ್ಪು, ಜೇನುತುಪ್ಪ, ಸಾಕುಪ್ರಾಣಿ, ಉಡುಪು, ಆಯುಧ ಮೊದಲಾದವುಗಳನ್ನು ಕೊಡುತ್ತಾರೆ. ಕೆಲಸಮಾಡುವ ಎರಡು ಕೈಗಳನ್ನು ಕಳೆದುಕೊಂಡದ್ದಕ್ಕಾಗಿ ವಧುವಿನ ತಂದೆಗೆ ಇಂಥ ವಸ್ತುಗಳನ್ನು ಕಾಣಿಕೆಯಾಗಿ ಕೊಡುತ್ತಾರೆ. ವಿವಾಹ ಮಾಡಿಕೊಳ್ಳುವ ವ್ಯಕ್ತಿ ನಿಶ್ಚಿತಪಡಿಸಿದ ವಸ್ತುಗಳನ್ನು ಸ್ವತಃ ಕಳುಹಿಸಿದಾಗಲೇ ವಿವಾಹ ನಡೆಯುವುದು. ತೆರ ಎಷ್ಟು ಕೊಡಬೇಕೆಂಬುದನ್ನು ಗುಂಪಿನ ಆರ್ಥಿಕ ಸ್ಥಿತಿಯ ಆಧಾರದ ಮೇಲೆ ನಿಗಧಿ ಮಾಡುತ್ತಾರೆ. ಈ ಬಗೆಯ ವಿವಾಹ ಸಂತಾಲರು, ಹೋ, ಓರಿಯಾನ್,

ಖರಿಯಾ, ಗೊಂಡಾ, ನಾಗಾ, ಕುಕಿ, ಭಿಲ್ ಮುಂತಾದವರಲ್ಲಿ ಪ್ರಚಾರದಲ್ಲಿದೆ.”[೧೫] ಇಂದು ನಾವು ಯಾವುದನ್ನು ಶಿಷ್ಟ ಸಮುದಾಯಗಳೆಂದು ಕರೆಯುತ್ತೇವೋ, ಅವುಗಳನ್ನು ಹೊರತುಪಡಿಸಿದ ಸಮುದಾಯಗಳಲ್ಲಿ ತೆರ ಕೊಟ್ಟು ವಧುವನ್ನು ಪಡೆಯುವ ಪದ್ಧತಿ ಇಂದೂ ಸಹ ಕಾಣಬಹುದಾಗಿದೆ. ವಿಚಿತ್ರವೆಂದರೆ, ವರದಕ್ಷಿಣೆ ಒಂದು ಪಿಡುಗಾಗಿ ಪರಿಣಮಿಸಿರುವ ಇಂದಿನ ಸಂದರ್ಭದಲ್ಲೂ, ಗೋಸಂಗಿಗಳು ವಧುದಕ್ಷಿಣೆ ಪದ್ಧತಿಯನ್ನೇ ಉಳಿಸಿಕೊಂಡು ಬಂದಿರುವುದು ವಿಶೇಷ. ಇಂದು ವರದಕ್ಷಿಣೆಯಲ್ಲಿ ಬೇಡಿಕೆ (Demand) ಯಿರುವಂತೆ ವಧುದಕ್ಷಿಣೆಯಲ್ಲಿ ಯಾವುದೇ ರೀತಿಯ ಬೇಡಿಕೆ ಇರುವುದಿಲ್ಲ. ಹಿಂದೆ ತಮ್ಮ ಕುಲದಲ್ಲಿ ಎಷ್ಟು ವಧುದಕ್ಷಿಣೆ ನಿರ್ಣಯವಾಗಿದೆಯೋ ಇಂದಿಗೂ ಸಹ ಅದನ್ನು ಪಾಲಿಸಿಕೊಂಡು ಬರುತ್ತಿದ್ದಾರೆ. ಪರಸ್ಪರ ಎರಡು ಕುಟುಂಬಗಳು ಒಪ್ಪಿಕೊಂಡಾದ ಮೇಲೆ ನಿಗಧಿಪಡಿಸಿದ (ಅರವತ್ತು ರೂಪಾಯಿಗಳು) ಕನ್ಯಾಶುಲ್ಕವನ್ನು ಕೊಟ್ಟು ವಿವಾಹ ವಿವಾಹವಾಗಬಹುದು. ಮದುವೆ ಮಾಡಿಕೊಡುವುದಾದರೂ ಅಷ್ಟೇ, ಗಂಡಿನ ಕಡೆಯವರು ತಮ್ಮ ಶಕ್ತ್ಯಾನುಸಾರ ಮದುವೆ ಮಾಡಿಕೊಡಬಹುದು. ಇಷ್ಟೇ ವೈಭವವಾಗಿ ಮಾಡಿಕೊಡಬೇಕೆಂಬ ನಿಯಮವಿಲ್ಲ. ಆದರೆ ಕುಲ ನಿಗಧಿಪಡಿಸಿದ ಕನ್ಯಾಶುಲ್ಕದಲ್ಲಿ ಮಾತ್ರ ಯಾವುದೇ ರಿಯಾಯಿತಿ ಇರುವುದಿಲ್ಲ. ಗಂಡಿನ ಕಡೆಯವರು ಎಷ್ಟೇ ಕಡು ಬಡವರಾದರೂ ತಮ್ಮ ಸಮುದಾಯದ ಸಹಾಯವನ್ನು ಪಡೆದು ಕನ್ಯಾಶುಲ್ಕ ತೆರಲೇಬೇಕು. ಇಂದೂ ಕೂಡಾ ಮಾಸ್ತೀಕರಲ್ಲಿ ನಿಗದಿಪಡಿಸಿದ ಕನ್ಯಾಶುಲ್ಕ ಪದ್ಧತಿ ಇರುವುದನ್ನು ಲಕ್ಷ್ಮೀಪತಿ ಕೋಲಾರವರು ದಾಖಲಿಸಿದ್ದಾರೆ. “ಸ್ಥಿತಿವಂತ ಮಾಸ್ತೀಕ ಕುಟುಂಬಗಳವರು ಕೂಡ ಇಂದಿಗೂ ೧೨ ರೂಪಾಯಿಗಳಿಗಿಂತ ಹೆಚ್ಚಿನ ‘ಓಲಿ’ಯನ್ನು ನೀಡಿಲ್ಲವಂತೆ ಮತ್ತು ಅವರು ಗಂಡಿನಕಡೆಯಿಂದ ನಿರೀಕ್ಷಿಸುವುದನ್ನೂ ಇಲ್ಲವಂತೆ ಮಾಸ್ತೀಕರ ದಾರುಣವಾದ ಆರ್ಥಿಕ ಹಿನ್ನೆಲೆಯಲ್ಲೂ ಈ ‘ಓಲಿ’ ಪದ್ಧತಿ ನಾಲ್ಕಂಕೆಯವರೆಗೂ ಬೆಳೆದು ಗಂಡಿನ ಕಡೆಯವರ ಪಾಲಿಗೆ ಸುಲಿಗೆಯಾಗಬಹುದಿತ್ತು. ಆದರೆ ಹಾಗಾಗದೇ ಉಳಿದಿರುವುದೇ ಸೋಜಿಗದ ವಿಷಯವಾಗಿದೆ. ಒಂದೋ ಬಹುಶಃ ಈ ಪದ್ಧತಿ ಕಟ್ಟುನಿಟ್ಟಾಗಿ ಈ ದಿನದವರೆಗೂ ಕೇವಲ ಸಾಂಕೇತಿಕ ಆಚರಣೆಯಾಗಿಯೇ ಉಳಿದು ಬಂದಿರಬಹುದು... ಹೀಗೆ ಸಾಂಕೇತವಾಗಿಯಾದರೂ ಸರಿಯೇ ಕನ್ಯಾಶುಲ್ಕ ತೆತ್ತು ತಂದುಕೊಂಡ ಹೆಣ್ಣನ್ನು ‘ಓಲೆಣ್ಣು’ ಎಂದೇ ಕರೆಯುವರು.”[೧೬] ಹೀಗೆ ಅನೇಕ ಬುಡಟ್ಟು ಸಮುದಾಯಗಳು ಕನ್ಯಾಶುಲ್ಕ ಕೊಡುವ ಪದ್ಧತಿಯನ್ನು ಇಂದೂ ಸಹ ಅನುಸರಿಸಿಕೊಂಡು ಬರುತ್ತಿರುವುದನ್ನು ಕಾಣಬಹುದಾಗಿದೆ.

**ಅಡಿಕೆ ಹೊಡೆಯುವುದು :** ಇದು ನಿಶ್ಚಿತಕಾರ್ಯದ ಕೊನೆಯ ಘಟ್ಟದಲ್ಲಿ ನಡೆಯುವ ಕ್ರಿಯೆ ಈ ಸಂದರ್ಭದಲ್ಲಿ ‘ಗಂಗಾ’ನ ಪಾತ್ರ ಬಹುಮುಖ್ಯವಾಗಿರುತ್ತದೆ. ನಿಶ್ಚಿತಕಾರ್ಯ ಮುಗಿದ ನಂತರ ಒಂದು ದುಂಡಡಕೆಯನ್ನು ತೆಗೆದುಕೊಂಡು ನೆಲದ ಮೇಲಿಟ್ಟು ಇಂತವರ ಹುಡುಗಿಗೆ ಇಂತವರ ಹುಡುಗನನ್ನು ಕೊಟ್ಟು ಮದುವೆ ಮಾಡಲು ಎಲ್ಲರೂ ನಿಶ್ಚಿಯಿಸಿದ್ದಾರೆ, ಇದು ಎಲ್ಲರಿಗೂ ಒಪ್ಪಿಗೆ ತಾನೇ, ಎಂದು ಹೇಳಿ ಕಲ್ಲಿನಿಂದ ಹೊಡೆದು ಚೂರು ಮಾಡುವುದು, ಆಗ ಆತನ ಸುತ್ತ ಕುಳಿತ ಚಿಕ್ಕಮಕ್ಕಳು ಅಡಿಕೆ ಚೂರುಗಳನ್ನು ಆಯ್ದುಕೊಂಡು ತಿನ್ನುವರು. ನಂತರ ಪರಾತಿನಲ್ಲಿ ಎಲೆ ಅಡಿಕೆಯನ್ನಿಟ್ಟುಕೊಂಡು

ನೆರದಂತವರೆಲ್ಲರಿಗೂ ಹಂಚಿ, ಅಕ್ಕಿ ಹಾಗೂ ಕುಂಕುಮವನ್ನು ನೀರಿನಲ್ಲಿ ಕಲಿಸಿ, ಎಲ್ಲರಿಗೂ ನಾಮ ಬಳಿಯುವರು. ಎಲ್ಲರಿಗೂ ಒಪ್ಪಿಗೆಯಾದ ನಂತರ, ಪರಸ್ಪರ ಬೀಗರೆಲ್ಲ ಸೇರಿ ಹೆಂಡ ಅಥವಾ ಸರಾಯಿಯನ್ನು ಸೇವಿಸುವರು.

ಗೋಸಂಗಿಗಳಲ್ಲಿ ನಿಶ್ಚಿತಕಾರ್ಯ ಮುಗಿದ ಮೇಲೆ ಇಂತಿಷ್ಟೆ ದಿನಗಳಲ್ಲಿ ಮದುವೆ ಮಾಡಿಕೊಡಬೇಕೆಂಬ ನಿಯಮವೇನಿಲ್ಲ. ಅವರವರ ಅನುಕೂಲಕ್ಕೆ ತಕ್ಕಂತೆ ಮಾಡಿಕೊಳ್ಳಬಹುದು. ಶಿಷ್ಟ ಸಮಾಜದವರಂತೆ ಶಾಸ್ತ್ರ ನೋಡುವ ಪದ್ಧತಿ ಇವರಲ್ಲಿಲ್ಲ, ಪರಸ್ಪರ ಎರಡು ಕುಟುಂಬಗಳ ಒಪ್ಪಿಗೆ, ಅನುಕೂಲಗಳನ್ನಾಧರಿಸಿ ವಿವಾಹ ಮಾಡಿಕೊಳ್ಳಬಹುದಾಗಿದೆ. ಎಷ್ಟೋ ಸಲ ನಿಶ್ಚಿತಕಾರ್ಯ ಮುಗಿದ ಮರುದಿನವೇ ಮದುವೆಗಳಾಗಿವೆ ಎಂದು ವಕ್ತೃಗಳು ಹೇಳುತ್ತಾರೆ. ನಿರಂತರ ಅಲೆಮಾರಿಗಳಾದ ಇವರು ವರ್ಷದಲ್ಲಿ ಒಮ್ಮೆ ಅಂದರೆ ಹಬ್ಬ ಹರಿದಿನಗಳಲ್ಲಿ ಮಾತ್ರ ಒಂದೆಡೆ ಸೇರುತ್ತಿದ್ದರು. ಹಾಗಾಗಿ ಇಂತಹ ಸಂದರ್ಭಗಳಲ್ಲಿ ಒಳ್ಳೇ ಸಂಬಂಧ ಸಿಕ್ಕರೆ ಮಾತುಕತೆ ಮುಗಿಸಿ ಮದುವೆಯನ್ನು ಮಾಡಿಬಿಡುತ್ತಿದ್ದರು. ಅಲೆಮಾರಿಗಳಾದ ಇವರಿಗೆ ಇದು ಅನಿವಾರ್ಯವೂ ಕೂಡ.

ಗೋಸಂಗಿಗಳಲ್ಲಿ ವಿವಾಹ ಸಂಬಂಧಗಳು ಮುರಿಯುವುದು ತೀರಾ ಕಡಿಮೆಯೆಂದೇ ಹೇಳಬಹುದು. ಹಾಗೇನಾದರೂ ಸಂಬಂಧವನ್ನು ಮುರಿದದ್ದೇ ಆದರೆ ಅಥವಾ ಮಾತಿಗೆ ತಪ್ಪಿದ್ದೇ ಆದರೆ 'ಪಚ್ಚೀಸ್‌ರಾ ಪಚಾಸ್' ದಂಡ ಎರಡು ಇಪ್ಪತ್ತೈದು. ಅಂದರೆ ೨೫ + ೨೫ = ೫೦ ಕೊಡಬೇಕು. ಹಾಗೆಯೇ 'ಗಂಗಾ'ಗೆ ೧೨ ರೂಪಾಯಿ ದಂಡ ತೆರಬೇಕು. ಇಲ್ಲದಿದ್ದರೆ ಮಾತಿಗೆ ತಪ್ಪಿದ ಕುಟುಂಬವನ್ನು ಕುಲದಿಂದ ಬಹಿಷ್ಕರಿಸುವರು. ಇದರಲ್ಲಿ ಕುಲಪಂಚಾಯ್ತಿ ನಿಯಮಗಳು ತುಂಬಾ ಕಟ್ಟುನಿಟ್ಟಾಗಿರುವುದರಿಂದ ಸಂಬಂಧಗಳು ಮುರಿಯುವುದು ಬಹು ವಿರಳವೆಂದೇ ಹೇಳಬಹುದು. ಒಂದು ವೇಳೆ ನಿಶ್ಚಯವಾದ ನಂತರ ಗಂಡು ಅಥವಾ ಹೆಣ್ಣು ಅಕಾಲಿಕ ಮರಣಕ್ಕೆ ತುತ್ತಾದರೆ. ಅಂತಹ ಗಂಡು ಅಥವಾ ಹೆಣ್ಣು ಬೇರೆ ಕಡೆ ಸಂಬಂಧವನ್ನು ಬೆಳೆಸಬಹುದು. ಅದು ದೈವದವರ ಅನುಮತಿಯನ್ನು ಪಡೆದು, ಈ ರೀತಿಯಾಗಿ ಗೋಸಂಗಿಗಳು ತಮ್ಮ ದೈವಗಳ ಸಮ್ಮುಖದಲ್ಲಿ ಸಮುದಾಯದ ನೀತಿ ನಿಯಮಗಳಿಗೆ ಬದ್ಧರಾಗಿ ನಿಶ್ಚಿತ ಕಾರ್ಯವನ್ನು ಮಾಡುವರು. ಅದರಂತೆ ಮುಂದುವರಿಸಿಕೊಂಡು ಹೋಗುವರು.

**ಮದುವೆ ಚಪ್ಪರ ರಚನೆ (ಮಾಂಡವೋ) :** ಗೋಸಂಗಿಗಳು ಮದುವೆ ಚಪ್ಪರಕ್ಕೆ 'ಮಾಂಡವೋ' ಎಂದು ಕರೆದರೆ, ಲಂಬಾಣಿಗರು 'ಮಂಡೇಡೋ' ಎಂದು ಕರೆಯುವರು. ಉಚ್ಚಾರಣೆಯಲ್ಲಿ ಈ ಎರಡೂ ಶಬ್ದಗಳು ಬೇರೆಯಾಗಿದ್ದರೂ ಅರ್ಥಗ್ರಹಿಕೆಯಲ್ಲಿ ಮಾತ್ರ ಇಬ್ಬರಲ್ಲೂ ಒಂದೇ ಆಗಿದೆ. ಬಹುಶಃ ಈ ಎರಡು ಸಮುದಾಯಗಳಲ್ಲಿ ಬಳಕೆಯಲ್ಲಿರುವ 'ಮಂಡವೋ', 'ಮಂಡೇಡೋ' ಶಬ್ದಗಳು ಮರಾಠಿ ಭಾಷೆಯಿಂದ ಎರವಲು ಪಡೆದಿರಬೇಕು. ಮರಾಠಿ ಇಂಗ್ಲಿಷ್ ಶಬ್ದಕೋಶದಲ್ಲಿ 'ಮಾಂಡವ' (Open Shed) ಎಂದರೆ 'ಚಪ್ಪರ', ಎಂಬ ಅರ್ಥವನ್ನು ಕೊಟ್ಟಿದ್ದಾರೆ.

ಮದುವೆ ಚಪ್ಪರವನ್ನು ಸಮುದಾಯದ ಐದು ಜನ ಹಿರಿಯ ದೈವಗಳಾಗಲಿ ಅಥವಾ ಮದುವೆಯಾದ ಅನುಭವಸ್ಥರಾಗಲಿ ನಿರ್ಮಿಸಬೇಕು. (ಚಪ್ಪರ ಕಾರ್ಯದಲ್ಲಿ ವಧು-ವರರ ಕುಟುಂಬದ ಸದಸ್ಯರು ಭಾಗವಹಿಸುವಂತಿಲ್ಲ) ಇವರಿಗೆ 'ಲಗನ್ ಮಂಡವ್ಯಾ' ಎಂದು ಕರೆಯುವರು. ಧಾರೆ ಚಪ್ಪರ ನಿರ್ಮಿಸಲು ಬೇಕಾಗುವ ಎಲ್ಲಾ ಸಲಕರಣೆಗಳನ್ನು ಇವರೇ ತೆಗೆದುಕೊಂಡು ಬರಬೇಕು. ಮುಹೂರ್ತದ ಹಿಂದಿನ ದಿನ ಹೆಣ್ಣು ಮಕ್ಕಳು 'ಡೇರಾ' ಹಾಗೂ ಅವುಗಳ ಸುತ್ತಮುತ್ತ ಸಗಣಿಯಿಂದ ನೆಲವನ್ನು ಸಾರಿಸಿ ಸ್ವಚ್ಛಗೊಳಿಸುವರು. ಮದುವೆ ಕಾರ್ಯದಲ್ಲಿ ಸಮುದಾಯದ ಎಲ್ಲರೂ ಭಾಗವಹಿಸಿ ತಮ್ಮ ಕೈಲಾದ ಸಹಾಯವನ್ನು ಮಾಡುವರು.

ಗೋಸಂಗಿಗಳು ತಾವು ಬೀಡುಬಿಟ್ಟ ಪ್ರದೇಶದ ಸುತ್ತಮುತ್ತಲ ಇನ್ನಿತರೆ ವಸ್ತು ಸಿಗುವ 'ಹೊಂಗೆ' (ಕಣಗಲು) ಇನ್ನಿತರ ಮರಗಳಿಂದ ಧಾರೆ ಚಪ್ಪರಕ್ಕೆ ಬೇಕಾಗುವ ನಾಲ್ಕು ಕಂಬಗಳನ್ನು ಸಿದ್ಧಪಡಿಸಿಕೊಳ್ಳುತ್ತಾರೆ. ಅವು ಸಿಗದೇ ಇದ್ದ ಪಕ್ಷದಲ್ಲಿ, ತಮ್ಮ 'ಡೇರಾ'ಗಳಿಗೆ ಮಧ್ಯದಲ್ಲಿ ನಿಲ್ಲಿಸಲು ಇಟ್ಟಿರುವ ಬಿದಿರುಗಳನ್ನು ಧಾರೆ ಚಪ್ಪರಕ್ಕೆ ಬಳಸುವರು. ಮೇಲೊದಿಕೆಯಾಗಿ, ಹೊಂಗೆ ಸೊಪ್ಪು, ಮಾವಿನ ಸೊಪ್ಪನ್ನು ಹೆಚ್ಚಿಗೆ ಬಳಸುತ್ತಾರೆ. ಅವು ಸಿಗದೇ ಇದ್ದ ಪಕ್ಷದಲ್ಲಿ ಯಾವುದಾದರೂ ಹಸಿರು ಸೊಪ್ಪನ್ನು ಬಳಸಲು ಅಡ್ಡಿ ಇಲ್ಲವಂತೆ. ಈಚೆಗೆ ನಗರಪ್ರದೇಶದ ಹತ್ತಿರ ವಾಸಿಸುವ ಗೋಸಂಗಿಗಳು ತೆಂಗಿನ ಗರಿಗಳನ್ನು ಹೆಚ್ಚಾಗಿ ಬಳಸುತ್ತಿರುವುದು ಕಂಡುಬರುತ್ತಿದೆ. ಹೀಗೆ ನಾಲ್ಕು ಕಂಬಗಳಿಂದ ಸಿದ್ಧಪಡಿಸಿದ ಧಾರೆ ಚಪ್ಪರದ ಸುತ್ತಲು ಮಾವಿನ ಎಲೆಗಳಿಂದ ತೋರಣ ಕಟ್ಟುವರು. ಒಂದು ಹಸಿ ತೆಂಗಿನಕಾಯಿಗೆ 'ಬೆಣೆ' (ಚೂಪಾದ ಗೂಟ) ಬಡಿದು ಚಪ್ಪರದ ಮಧ್ಯಭಾಗಕ್ಕೆ ಕಟ್ಟುವರು. ಧಾರೆ ಚಪ್ಪರದ ಬಲ ಭಾಗಕ್ಕೆ ಒಂದು ಸಣ್ಣ ಗುಂಡಿಯನ್ನು ತೋಡಿ ಅದರಲ್ಲಿ ಜೋಡು ಅರಿಷಿಣ ಕೊಂಬು, ಅಡಿಕೆ, ಕುಂಕುಮ ಹಾಗೂ ಒಂದು ನಾಣ್ಯವನ್ನು ಹಾಕಿ ಮುಚ್ಚುವರು. ಇದರ ಪಕ್ಕ ಆಕಳು ಸೆಗಣಿಯ ಕುಳ್ಳನ್ನು ಇಟ್ಟು ದೀಪ ಹಚ್ಚುವರು. ಹೊಸ ದಂಪತಿಗಳ ಜೀವನಕ್ಕೆ ಬೆಳಕನ್ನು ನೀಡುವ ಸಂಕೇತವಾಗಿ ದೀಪವನ್ನು ಹಚ್ಚುವರು. ಈ ವಿಧದ ನಂಬಿಕೆ ಬಹುತೇಕ ಎಲ್ಲಾ ಸಮುದಾಯಗಳಲ್ಲಿ ಕಂಡುಬರುತ್ತದೆ. ಧಾರೆ ಚಪ್ಪರವನ್ನು ಸಿದ್ಧಪಡಿಸಿದ ಐದು ಜನ ದೈವಗಳಿಗೆ ವಿಶೇಷ ಊಟದ ವ್ಯವಸ್ಥೆ ಇರುತ್ತದೆ. ಅಂದು ಅನ್ನ, ತುಪ್ಪ, ಬೆಲ್ಲವನ್ನು ಕಲಸಿ ಐದು ಜನ ದೈವಗಳ ತೃಪ್ತಿಯಾಗುವವರೆಗೆ ಊಟ ಮಾಡಿಸುವರು. ಇವರ ಊಟ ಆಗುವವರೆಗೆ ಯಾರೂ ಊಟ ಮಾಡುವಂತಿಲ್ಲ. ದೈವಗಳ ಊಟ ಮುಗಿದ ನಂತರ ಉಳಿದವರು ಊಟ ಮಾಡಬಹುದು.

ಅರೆ ಅಲೆಮಾರಿಗಳಾದ ಗೋಸಂಗಿಗಳು ಇಂದು ಅಲ್ಲಲ್ಲಿ ನೆಲೆ ನಿಲ್ಲಲು ಪ್ರಯತ್ನಿಸುತ್ತಿದ್ದಾರೆ. ಇಂದಿನ ಅವರ ಮದುವೆಗಳಿಗೆ ಶ್ಯಾಮಿಯಾನಗಳ ಪ್ರವೇಶವಾಗುತ್ತಿವೆ. ಅಲಂಕಾರಕ್ಕಾಗಿ ಬಣ್ಣ ಬಣ್ಣದ ಕಾಗದ ವಿವಿಧ ಚಿತ್ರಗಳನ್ನು ಕತ್ತರಿಸಿ ತೋರಣಗಳನ್ನು ಕಟ್ಟುತ್ತಾರೆ. ಜೊತೆಗೆ ವಿದ್ಯುತ್ ದೀಪಾಲಂಕಾರಗಳು, ಧ್ವನಿವರ್ಧಕಗಳನ್ನು ಸಹ ಬಳಸುತ್ತಿರುವುದು ಕಂಡುಬಂದಿದೆ. ಹೀಗೆ ಅವರ ಶಕ್ತ್ಯಾನುಸಾರ ಆಧುನಿಕ ಪರಿಕರಗಳನ್ನು ಬಳಸುತ್ತಿದ್ದಾರೆ. ಧಾರೆ ಚಪ್ಪರದ ನಿರ್ಮಾಣದಲ್ಲಿ ಮಾತ್ರ ಯಾವುದೇ ಬದಲಾವಣೆಯನ್ನು ತರದೆ ಹಿಂದಿನ ಸಂಪ್ರದಾಯವನ್ನೇ ಅನುಸರಿಸಿಕೊಂಡು ಬರುತ್ತಿರುವುದು ವಿಶೇಷ.

**ಬೀಗರನ್ನು ಎದುರುಗೊಳ್ಳುವುದು :** ಮದುವೆಗಳಲ್ಲಿ ಬೀಗರನ್ನು ಎದುರುಗೊಳ್ಳುವ ಪದ್ಧತಿ ಗೋಸಂಗಿಗಳಲ್ಲಿಲ್ಲ. ಹೆಣ್ಣಿನ ಮನೆಯಲ್ಲಿ ಮದುವೆ ನಡೆಯುವುದರಿಂದ ಗಂಡಿನ ಕಡೆಯವರು ಪರ ಊರಿನವರಾದರೆ ಧಾರೆ ಚಪ್ಪರದ ದಿನ ಸಂಜೆ ಬಂದು ಸೇರುವರು. ಬರುವಾಗ ತಮ್ಮ ಜೊತೆಗೆ 'ಡೇರಾ'ಗಳನ್ನು ತೆಗೆದುಕೊಂಡು ಬರುವರು. ಕೆಲವೊಮ್ಮೆ ಹೆಣ್ಣಿನ ಕಡೆಯವರೇ ಎರಡು ಮೂರು ಡೇರಾಗಳನ್ನು ಗಂಡಿನವರು ಉಳಿದುಕೊಳ್ಳಲು ತೆರವು ಮಾಡಿಕೊಡುವರು. ಊರ ಹೊರಗೆ 'ಡೇರಾ' ವಾಸವಾಗಿರುವ ಇವರಲ್ಲಿ ಶಿಷ್ಟ ಸಮುದಾಯಗಳಲ್ಲಿ ಇರುವಂತೆ ಬೀಗರು ಉಳಿದುಕೊಳ್ಳಲು ಪ್ರತ್ಯೇಕವಾದ 'ಬಿಡದಿಮನೆ'ಗಳ ವ್ಯವಸ್ಥೆ ಇರುವುದಿಲ್ಲ. ಹಾಗಾಗಿ ಮದುವೆ ಮುಗಿಯುವವರೆಗೆ ಹೆಣ್ಣಿನ ಊರಿನಲ್ಲಿ ಉಳಿದುಕೊಳ್ಳಲು ಬೇಕಾಗುವ ಎಲ್ಲಾ ಪರಿಕರಗಳನ್ನು ಗಂಡಿನ ಕಡೆಯವರು ತಮ್ಮ ಜೊತೆಯಲ್ಲೇ ತೆಗೆದುಕೊಂಡು ಹೋಗುವರು. ಇಂದು ಸಹ ಈ ಪದ್ಧತಿಯನ್ನು ಅನುಸರಿಸಿಕೊಂಡು ಬರುತ್ತಿದ್ದಾರೆ.

**ಲಗ್ನಕ್ಕೆ ಗೋದಿ ಗಂಟು ಕಟ್ಟುವುದು :** ಕೆಲವು ಶಿಷ್ಟ ಸಮುದಾಯಗಳಲ್ಲಿ ಲಗ್ನಕ್ಕೆ ಅಕ್ಕಿಗಂಟನ್ನು ಕಟ್ಟುವುದು ರೂಢಿಯಲ್ಲಿದ್ದರೆ, ಗೋಸಂಗಿಗಳಲ್ಲಿ ಲಗ್ನಕ್ಕೆ 'ಗೋದಿಗಂಟ'ನ್ನು ಕಟ್ಟುವುದು ರೂಢಿಯಲ್ಲಿದೆ. ಗೋಸಂಗಿಗಳು ಗೋದಿಯನ್ನು 'ಲಕ್ಷ್ಮಿ' ಎಂದು ಭಾವಿಸಿರುವುದರಿಂದ ಲಗ್ನಕ್ಕೆ ಗೋದಿಗಂಟನ್ನು ಕಟ್ಟುವುದು ರೂಢಿಸಿಕೊಂಡಿರಬೇಕು. ಅವರ ಸಾಂಸ್ಕೃತಿಕ ಆಚರಣೆಗಳಲ್ಲೆಲ್ಲಿ ಗೋದಿ ಪ್ರಮುಖ ಪಾತ್ರವಹಿಸುತ್ತದೆ.

ಸುಮಾರು ಒಂದು ಗಜ ಚಚ್ಚೌಕಾರದ ಕೆಂಪು ಬಟ್ಟೆಯನ್ನು ತೆಗೆದುಕೊಂಡು ಅದರಲ್ಲಿ ಐದು ಸೇರು ಗೋದಿ, ಏಳು ಬೆಟ್ಟಡಿಕೆ, ಏಳು ಉತ್ತತ್ತಿ, ಏಳು ಅರಿಶಿಣ ಕೊಂಬು, ಏಳು ಕುಂಕುಮ ಹಾಗೂ ಅರಿಶಿಣದ ಚಿಕ್ಕ ಚಿಕ್ಕ ಪೊಟ್ಟಣಗಳನ್ನು ಹಾಕುವರು. ಹಾಗೆಯೇ ಒಂದು ಕೊಬ್ಬರಿ ಬಟ್ಟಲಿಗೆ ಮಧ್ಯದಲ್ಲಿ ರಂಧ್ರಮಾಡಿ ಅದಕ್ಕೆ ದಾರ ಪೋಣಿಸಿ, ಒಂದು ಕವಲೊಡೆದ ಅರಶಿಣ ಕೊಬನ್ನಿಟ್ಟು ಕಟ್ಟುವರು. ಈ ಎಲ್ಲಾ ವಸ್ತುಗಳನ್ನು ಬಟ್ಟೆಯಲ್ಲಿಟ್ಟು ಕಟ್ಟುವರು. ಗಂಟುಕಟ್ಟಿದ ನಂತರ ಗಂಟಿನ ಮಧ್ಯೆ ಒಂದು ಕತ್ತಿಯನ್ನು ಒಳಸೇರಿಸುವರು. ಹೀಗೆ ಸಿದ್ಧಪಡಿಸಿದ ಗೋದಿ ಗಂಟನ್ನು ಐದು ಜನ ದೈವಗಳು ಹೊತ್ತುಕೊಂಡು ವರನ ಮನೆಗೆ ತಂದು ಆತನಿಗೆ ಕೂಡಲು ಮೀಸಲಿಟ್ಟ ಸ್ಥಳದ ಪಕ್ಕ ಇಡುವರು. ಗೋದಿ ಗಂಟು ಇಟ್ಟ ಸ್ಥಳವನ್ನು ಯಾರು ತುಳಿಯದಂತೆ ಎಚ್ಚರ ವಹಿಸುವರು. ಆ ಗೋದಿ ಗಂಟು ಕಾಣದಂತೆ ಪುಟ್ಟಿಯನ್ನಾಗಲಿ ಅಥವಾ ದೊಡ್ಡ ಪಾತ್ರೆಯನ್ನಾಗಲಿ ಬೋರಲಾಕುವರು. ಇದರ ಪಕ್ಕ ಎರಡು ಮಣ್ಣಿನ ಗೊಂಬೆಗಳನ್ನಿಟ್ಟಿರುತ್ತಾರೆ. ಈ ಗೊಂಬೆಗಳಿಗೆ ಅವರು 'ಮನಕ' ಎಂದು ಕರೆಯುವರು. ವಧು ಒಂದು ಭೋಗಸೆ ತುಂಬ ಗೋದಿಯನ್ನು ತುಂಬಿಕೊಂಡು ಒಂದು ಕಾಳು ಚೆಲ್ಲದಂತೆ ವರನ ಪಕ್ಕದಲ್ಲಿಟ್ಟಿರುವ ಗೋದಿ ಗಂಟಿನ ಹತ್ತಿರ ಇಡುತ್ತಾಳೆ. ಹೀಗೆ ಗೋದಿ ತಂದಿಟ್ಟ ಅಂದಿನಿಂದ ವಧು ವರನ ಮನೆ ಸೇರಿದಂತೆ ಎಂಬ ಭಾವನೆ ಇವರಲ್ಲಿದೆ. ಹಾಗಾಗಿ ವಧು ತಂದಿಟ್ಟ ಗೋದಿಗೆ ಇಲ್ಲಿ ಹೆಚ್ಚಿನ ಪ್ರಾಮುಖ್ಯತೆ ಇರುತ್ತದೆ.

ಇದೇ ಸಂದರ್ಭದಲ್ಲಿ ವರನೂ ಸಹ ಒಂದು ಬೊಗಸೆ ಗೋದಿಯನ್ನು ವಧುವಿನ ಮನೆಗೆ ತೆಗೆದುಕೊಂಡು ಬಂದು, ವಧು ಕೂಡಲು ನಿಗದಿ ಪಡಿಸಿದ ಸ್ಥಳದ ಪಕ್ಕ ತಂದಿಡುವುದು ರೂಢಿಯಲ್ಲಿದೆ. ವಧು ವರನ ಮನೆಗೆ ತಂದಿಟ್ಟ ಗೋದಿಗೆ ಇರುವಷ್ಟು ಪ್ರಾಮುಖ್ಯತೆ ವರ ತಂದಿಟ್ಟ ಗೋದಿಗೆ ಇರುವುದಿಲ್ಲವೆಂಬುದು ಇಲ್ಲಿ ಬಹುಮುಖ್ಯವಾದ ಅಂಶ.

ವಧು ವರನ ಮನೆಗೆ ತಂದಿಟ್ಟ ಒಂದು ಬೊಗಸೆ ಗೋದಿಯನ್ನು ವರನ ಪಕ್ಕ ಕಟ್ಟಿಟ್ಟ ಗಂಟಿನ ಗೋದಿಗೆ ಬೆರೆಸುವರು. ಹೀಗೆ ಬೆರೆಸಿದ ಗೋದಿಯನ್ನು ಬೀಸಿ ಬ್ರಹ್ಮಗಂಟು ಬಿಚ್ಚುವ ಸಂದರ್ಭದಲ್ಲಿ ದೇವರಿಗೆ ಎಡೆಮಾಡಿ ಅರ್ಪಿಸುವರು. ಅಂದಿನಿಂದ ವಧು ವರನ ಮನೆಗೆ ಸೇರಿದಂತೆ.

**ಅರಿಶಿಣ ಕಾರ್ಯ :** ತಾಳಿ ಕಾರ್ಯಕ್ಕೂ ಮುಂಚೆ ನಡೆಯುವ ಅರಿಶಿಣ ಕಾರ್ಯ ಅತ್ಯಂತ ಮಹತ್ವದ್ದು. ಅರಿಶಿಣ ಹಚ್ಚುವ ಕಾರ್ಯ ಪ್ರಾರಂಭವಾದಗಿನಿಂದ ಬ್ರಹ್ಮಗಂಟು ಬಿಚ್ಚುವವರೆಗೆ, ವಧು-ವರರು ಒಬ್ಬೊಬ್ಬರೆ ಓಡಾಡುವಂತಿಲ್ಲ. ಎಲ್ಲಿಗೇ ಹೋಗಲಿ ಜೊತೆಗೆ ಒಬ್ಬ ಜೊತೆಗಾತಿ ಜೊತೆಗಾರರನ್ನು ಕರೆದುಕೊಂಡು ಹೋಗಬೇಕು. ವರ ನಿಂಬೆಹಣ್ಣು ಸಿಕ್ಕಿಸಿದ ಕತ್ತಿಯನ್ನು ಯಾವಾಗಲೂ ಜೊತೆಯಲ್ಲಿಟ್ಟುಕೊಂಡಿರುತ್ತಾನೆ. ಹೀಗೆ ಹಿಡಿದುಕೊಂಡರೆ ದುಷ್ಟ ಶಕ್ತಿಗಳು ಹತ್ತಿರ ಬರುವುದಿಲ್ಲವೆಂಬ ನಂಬಿಕೆ ಇವರಲ್ಲಿದೆ. ಇನ್ನೂ ಕೆಲವು ಸಮುದಾಯಗಳಲ್ಲಿ, ಯುದ್ಧಕ್ಕೆ ಹೊರಟ ವೀರನ ಸಂಕೇತವೆಂದೂ ಸಹ ಭಾವಿಸುತ್ತಾರೆ. ಹಿಂದೆ ಅರಿಶಿಣ ಹಚ್ಚುವ ಕಾರ್ಯ ಮೂರು ದಿನಗಳವರೆಗೆ ನಡೆಯುತ್ತಿತ್ತೆಂದು ಹಿರಿಯರು ನೆನೆಯುತ್ತಾರೆ. ಇತ್ತೀಚಿಗೆ, ಹಣ ಹಾಗೂ ಸಮಯದ ಅಭಾವದಿಂದಾಗಿ ಒಂದು ದಿನಕ್ಕೆ ಸೀಮಿತಗೊಳಿಸಿಕೊಂಡಿದ್ದಾರೆ.

ಖರ್ಚು ವೆಚ್ಚವೆಲ್ಲ ಗಂಡಿನವರದ್ದಾಗಿರುವುದರಿಂದ ಹೆಣ್ಣಿಗೂ ಸಹ ಅರಿಶಿಣವನ್ನು ಗಂಡಿನವರೇ ಕಳುಹಿಸಿಕೊಡಬೇಕು. ಕೆಲವೊಮ್ಮೆ ಪರಸ್ಪರ ಇಬ್ಬರಲ್ಲೂ ಅರಿಶಿಣ ಕೊಡು-ಕೊಳ್ಳುವಿಕೆ ನಡೆಯುತ್ತದಾದರೂ ಗಂಡಿನವರೇ ಹೆಣ್ಣಿಗೆ ಅರಿಶಿಣ ಕಳುಹಿಸುವುದು ಹೆಚ್ಚು ರೂಢಿಯಲ್ಲಿದೆ. ಇತ್ತೀಚಿಗೆ ಅರಿಶಿಣ ಹಚ್ಚುವ ಕಾರ್ಯ ಒಂದು ದಿನಕ್ಕೆ ಮಾತ್ರ ಸೀಮಿತವಾಗಿರುವುದರಿಂದ ತಾಳಿ ಕಾರ್ಯಕ್ಕೂ ಒಂದು ದಿನ ಮುಂಚಿತವಾಗಿ ನಡೆಯುವುದು. ಅಂದು ಸಮುದಾಯದ ಪ್ರತಿಯೊಬ್ಬರೂ ವಧು-ವರರಿಗೆ ಅರಿಶಿಣ ಹಚ್ಚುವ ಕಾರ್ಯದಲ್ಲಿ ತೊಡಗುವರು. ಯಾರಾದರೂ ಅರಿಶಿಣ ಕಾರ್ಯದಲ್ಲಿ ಭಾಗವಹಿಸದೆ ಸುಮ್ಮನೆ ಹರಟೆ ಹೊಡೆಯುತ್ತಾ ಕೂತಿದ್ದರೆ ಅಂತವರನ್ನು ಹಿರಿಯರು ಕರೆದು 'ಪಾಂಚ್ ಬೋಟ್ ಹಳದ್ರಾ ಚೋಳ್‌ನೂ' (ಐದು ಬೆರಳು ಅರಿಶಿಣ ಹಚ್ಚಿಬಾ ಹೋಗ್ರಿ) ಎಂದು ಕಳುಹಿಸುವರು. ಹೀಗೆ ಅರಿಶಿಣ ಹಚ್ಚುವ ಕಾರ್ಯ ಬೆಳಿಗ್ಗೆಯಿಂದ ಸಂಜೆಯವರೆಗೆ ನಡೆಯುತ್ತದೆ.

**ಸುರಿಗೆ ನೀರು ಹಾಕುವುದು :** ಮದುವೆ ಸಂದರ್ಭದಲ್ಲಿ ಅರಿಶಿಣ ಹಚ್ಚುವ ಕಾರ್ಯ ಮುಗಿದ ನಂತರ ವಧು-ವರರಿಗೆ ಮಾಡಿಸುವ ವಿಶಿಷ್ಟ ಸ್ನಾನ. ಸುರಿಗೆ ನೀರು ಹಾಕುವ ಶಾಸ್ತ್ರ ಬಹುತೇಕ ಎಲ್ಲಾ

ಸಮುದಾಯಗಳಲ್ಲಿ ಕಂಡುಬರುತ್ತದೆ. ಅರಿಶಿಣ ಹಚ್ಚಿಕೊಂಡ ವಧು-ವರರಿಗೆ ದಿನದಲ್ಲಿ ಎರಡು ಸಲ (ಮಧ್ಯಾಹ್ನ ಮತ್ತು ಸಂಜೆ) ಸುರಿಗೆ ನೀರನ್ನು ಹಾಕುವರು. ಸುರಿಗೆ ನೀರು ಹಾಕಲು ಪ್ರತ್ಯೇಕವಾದ ಸ್ಥಳವನ್ನು ನಿಗಧಿಪಡಿಸಿರುತ್ತಾರೆ. ಆ ಸ್ಥಳದಲ್ಲಿ ನೀರು ತುಂಬಿದ ನಾಲ್ಕು ಮಣ್ಣಿನ ಮಗಿ ಅಥವಾ ಸ್ಟೀಲ್ ಚೆಂಬುಗಳನ್ನು ಚೌಕಾಕಾರವಾಗಿ ಇಟ್ಟು, ಆ ಚೆಂಬುಗಳಿಗೆ ಐದು ಅಥವಾ ಒಂಬತ್ತು ಸಲ ಸುರಗಿದಾರವನ್ನು ಸುತ್ತುವರು. ನಂತರ ಹಿಟ್ಟನ್ನು ಕಲಿಸಲು ಮಾಡಿದ ಪರಾತಿನಂತೆ ಅಗಲವಾದ ಕಟ್ಟಿಗೆಯ 'ಕಣಗಿ'ಯನ್ನು ಚೌಕಾಕಾರದ ನಾಲ್ಕು ಚೆಂಬುಗಳ ಮಧ್ಯೆ ಬೋರಲಾಗಿ ಇಟ್ಟು ಅದರ ಮೇಲೆ ವಧು-ವರರನ್ನು ಒಬ್ಬರಾದ ಮೇಲೆ ಒಬ್ಬರನ್ನು ಕೂಡಿಸಿ ಸ್ನಾನಮಾಡಿಸುವರು. ಮೊದಲು ವರನಿಗೆ ಸ್ನಾನ ಮಾಡಿಸಿ ಹೊಸ ಬಟ್ಟೆ ಉಡಿಸುವರು. ನಂತರ ಆತ ಸ್ನಾನ ಮಾಡಿ ಬಿಟ್ಟು ಪಂಚೆಯನ್ನು ವಧು ಸುತ್ತಕೊಂಡು ಸ್ನಾನಮಾಡಬೇಕು. ಈ ರೀತಿಯಾಗಿ ವಧು-ವರರಿಗೆ ಅರಿಶಿಣ ಹಚ್ಚುವ ಕಾರ್ಯಮುಗಿದ ನಂತರ ಸುರಿಗೆ ನೀರು ಹಾಕುವರು. ಹಿಂದೆ ಮೂರ್ನಾಲ್ಕು ದಿನಗಳ ಕಾಲ ನಡೆಯುತ್ತಿದ್ದ ಈ ಕಾರ್ಯ ಇಂದು ಒಂದು ದಿನಕ್ಕೆ ಸೀಮಿತವಾಗಿದೆ. ಇದಕ್ಕೆ ಮುಖ್ಯಕಾರಣ ಕೆಳಸ್ಥಳದಲ್ಲಿರುವ ಅವರ ಆರ್ಥಿಕಸ್ಥಿತಿ.

**ತಾಳಿಕಾರ್ಯ :** ಅರಿಶಿಣ ಹಚ್ಚುವ ಹಾಗೂ ಸುರಿಗೆ ನೀರು ಹಾಕುವ ಕಾರ್ಯ ಮುಗಿದ ಮರುದಿನ ತಾಳಿಕಾರ್ಯ ನಡೆಯುವುದು ಗೋಸಂಗಿಗಳಲ್ಲಿ ವಿಶೇಷ. ಅಂದು ಬೆಳಗಿನ ಜಾವ ಸುಮಾರು ಐದುಗಂಟೆಗೆ ಗಂಡಿನ ಕಡೆಯ ಐದು ಜನ ಮುತ್ತೈದೆಯರು ಹಾಗೂ ದೈವಗಳು ಕೂಡಿಕೊಂಡು ಹೆಣ್ಣಿನ ಮನೆಗೆ ಹೊರಡುವರು. ಹೊರಡುವಾಗ ಮೂರು ಅಥವಾ ಐದೆಳೆ ಕರಿಮಣಿ ಸರ, ಇಪ್ಪತ್ತೆರಡರಂತೆ ಎರಡೂ ಕೈಗಳಿಗೆ ನಲವತ್ನಾಲಕ್ಕು ಹಸಿರು ಬಳೆಗಳು, ಕೆಂಪು ಬಣ್ಣದ ಕುಪ್ಪಸ, ಕೊಬ್ಬರಿ ಬಟ್ಟಲುಗಳಿಂದ ತಯಾರಿಸಿದ ಮೂರೆಳೆ ಹಾರ, ಕಾಲುಂಗುರ ಈ ಎಲ್ಲಾ ವಸ್ತುಗಳನ್ನು ಹಿತ್ತಾಳೆ ಪರಾತಿನಲ್ಲಿಟ್ಟುಕೊಂಡು ಅದಕ್ಕೊಂದು ಮೇಲೆ ಕೆಂಪು ಬಟ್ಟೆಯನ್ನು ಮುಚ್ಚಿಕೊಂಡು ಹೆಣ್ಣಿನ ಮನೆಗೆ ಹೋಗುತ್ತಾರೆ. ಹೀಗೆ ಹೋಗುವವರಿಗೆ 'ಲಗನ್ ಮಾಂಡವ್ಕಾರೆ' ಎಂದು ಕರೆಯುವರು. ನಂತರ ತಂದಂತಹ ವಸ್ತುಗಳನ್ನು ವಧುವಿಗೆ ಸಿಂಗರಿಸಿ ಹಿರಿಯರಾದ ಮುತ್ತೈದೆ ಒಬ್ಬಳು ವಧುವಿನ ಹಲ್ಲುಗಳಿಗೆ ಮಸಿ (ಹಲ್ಕಪ್ಪು)ಯನ್ನು ಸವರುತ್ತಾರೆ. ಇದೇ ರೀತಿಯ ಆಚರಣೆಯನ್ನು ಪಾತರದವರಲ್ಲೂ ಕಾಣಬಹುದು. "ಪಾತರದವರ 'ಕಾರಣ'ದಲ್ಲಿ ಪ್ರದಾನವಾಗಿ ಕಾಣುವ 'ಹಲ್ಲಿಟ್ಟಿನ ಕಾರ್ಯ'ವನ್ನು ಬಹು ಎಚ್ಚರಿಕೆಯಿಂದ ಗಮನಿಸಿಬೇಕು. ಭಾರತೀಯ ಸಂಸ್ಕೃತಿಯಲ್ಲಿ ಹಲ್ಕಪ್ಪು ಮುತ್ತೈದೆತನದ ಲಕ್ಷಮವಾಗಿ ನಿಂತಿದೆ. ಮೇಲ್ವರ್ಗದ ವಿವಾಹಿತ ಹೆಣ್ಣುಮಕ್ಕಳು ತಾವು ಸದಾ ಮುತ್ತೈದೆಯರಾಗಿರಬೇಕೆಂದು ಪಲ್ಕಪ್ಪನ್ನು ಹಚ್ಚಿಕೊಳ್ಳುವರು. ಹಲ್ಕಪ್ಪು ಹಲ್ಲು ಹಾಗೂ ವಸಡುಗಳ ಆರೋಗ್ಯವನ್ನು ಕಾಪಾಡುತ್ತದೆ ಎಂದು ಅದಕ್ಕೆ ವೈದ್ಯಕೀಯ ಅರ್ಥವನ್ನು ಕಲ್ಪಿಸಿದರೂ ಈ ಸಂಪ್ರದಾಯದ ಹಿಂದಿನ ಪುರುಷರ ವಿಕೃತ ಮನಸ್ಸುನ್ನು ಅವರು ನಿರ್ಮಿಸಿದ ಸಂಸ್ಕೃತಿಯನ್ನು ಬಯಲಿಗೆಳೆಯುವುದು ಅಷ್ಟು ಸುಲಭವಲ್ಲವಾದರೂ ಸೂಕ್ಷ್ಮಸಂವೇದಕರಿಗೆ ಅದು ಅರ್ಥವಾದಿರಲಾರದು. ಭಾರತೀಯ ಸಂಸ್ಕೃತಿಯಲ್ಲಿ ಸ್ತ್ರೀ ಭೋಗದ ವಸ್ತುವಾಗಿ ಕಂಡಿರುವಳು. ತನ್ನ ಭೋಗವಸ್ತು ಬೇರೆಯವರಿಗೆ ಆಕರ್ಷಣೀಯವಾಗಿ

ಕಾಣದಿರಲಿ ಎಂದು ಅವಳನ್ನು ಹಲ್ಲುಪ್ಪಿನಿಂದ ವಿರೂಪಗೊಳಿಸಿರುವರು."[೧೭] ಆದರೆ ಗೋಸಂಗಿಗಳು ಹಲ್ಲುಗಳಿಗೆ ಮಸಿ ಸವರಿದ ಹೆಣ್ಣನ್ನು ಮುತ್ತೈದೆ ಹಾಗೂ ಮದುವೆಯಾಗಿದೆ ಎಂದು ಭಾವಿಸುವರು. ಹೀಗೆ ಹಲ್ಲುಗಳಿಗೆ ಮಸಿ ತಿಕ್ಕಿದ ನಂತರ ಗಂಡಿನ ಸಹೋದರಿ ಅಥವಾ ಆತನ ರಕ್ತ ಸಂಬಂಧಿಗಳು ವಧುವಿಗೆ ತಾಲಿ ಕಟ್ಟುವರು. ಈ ರೀತಿಯ ಆಚರಣೆಯನ್ನು ಪಿಂಜಾರ ಸಮುದಾಯದಲ್ಲೂ ಕಾಣಬಹುದು.

**ಧಾರೆ ಚಪ್ಪರಕ್ಕೆ ವಧುವರರನ್ನು ಕರೆತರುವುದು :** ವಧುವಿನ ಮನೆಯಿಂದ ವಧುವನ್ನು, ಬಿಡದಿ ಡೇರಾದಿಂದ ವರನನ್ನು ಧಾರೆ ಚಪ್ಪರಕ್ಕೆ ಕರೆತರುವರು. ಹೀಗೆ ಕರೆತರುವಾಗ ವಧು-ವರರ ಬಂಧುಗಳು ಅವರಿಬ್ಬರ ಕೈ ಹಿಡಿದುಕೊಂಡು ಕರೆತರುತ್ತಾರೆ. ಹಿಂದೆ ವಧುವರರನ್ನು ಹೊತ್ತು ತರುತ್ತಿದ್ದವೆಂದು ಗೋಸಂಗಿ ಹಿರಿಯರು ನೆನೆಯುತ್ತಾರೆ. ಹಿಂದೆ ಈ ಸಮುದಾಯದಲ್ಲಿ ಬಾಲ್ಯವಿವಾಹ ಹೆಚ್ಚಾಗಿ ನಡೆಯುತ್ತಿದ್ದುದರಿಂದ ವಧು-ವರರನ್ನು ಧಾರೆ ಚಪ್ಪರಕ್ಕೆ ಹೊತ್ತು ತರುತ್ತಿದ್ದಿರಬೇಕು. ಭೈರರು, ಪಿಂಜಾರ ಇನ್ನಿತರೆ ಸಮುದಾಯಗಳು ಕೆಲವು ಪ್ರದೇಶಗಳಲ್ಲಿ ಈಗಲೂ ಸಹ ವಧು-ವರರನ್ನು ಧಾರೆ ಚಪ್ಪರಕ್ಕೆ ಹೊತ್ತು ತರುತ್ತಿರುವ ಅಥವಾ ಕೈಹಿಡಿದು ತರುವ ಪದ್ಧತಿ ರೂಢಿಯಲ್ಲಿರುವುದು ತಿಳಿದುಬಂದಿದೆ. ಇನ್ನು ಕೆಲವು ಸಮುದಾಯಗಳಲ್ಲಿ ಸೋದರಮಾವ ಅಥವಾ ಅಕ್ಕನ ಗಂಡನೇ ಧಾರೆ ಚಪ್ಪರಕ್ಕೆ ಕರೆತರುವ ಪದ್ಧತಿ ರೂಢಿಯಲ್ಲಿದೆ. ಹೀಗೆ ವಿಭಿನ್ನ ಜನಾಂಗ, ವಿಭಿನ್ನ ಸಂಸ್ಕೃತಿ, ಸಂಪ್ರದಾಯಗಳನ್ನು ಹೊಂದಿರುವ ಭಾರತದಲ್ಲಿ ಆಯಾ ಪರಿಸರದ ಒತ್ತಡಗಳಿಗೆ ತಕ್ಕ ಬದಲಾವಣೆಗಳಿರುವುದು ಸಹಜ.

ಗೋಸಂಗಿ ಸಮುದಾಯದಲ್ಲಿ ಅರಿಶಿಣ ಕಾರ್ಯ ಮುಗಿದ ಮರುದಿನ ಬೆಳಿಗ್ಗೆ ಕೋಳಿ ಕೂಗುವುದಕ್ಕಿಂತ ಮುಂಚೆ ಐದು ಗಂಟೆಯೊಳಗೆ ತಾಳಿ ಕಾರ್ಯ ಮುಗಿದಿರುತ್ತದೆ. ಹಾಗಾಗಿ ಧಾರೆ ಚಪ್ಪರಕ್ಕೆ ಬರುವಾಗ ತಾಳಿ ಕಾರ್ಯದ ಸಂದರ್ಭದಲ್ಲಿ ಧರಿಸಿದ ಉಡುಪುಗಳನ್ನೇ ಧರಿಸಿರುತ್ತಾರೆ. ಕೈಗೆ ಎಲೆ ಕಂಕಣ, ತಲೆಗೆ ಬಾಸಿಂಗವನ್ನು ಕಟ್ಟಿಕೊಂಡು ಧಾರೆ ಚಪ್ಪರಕ್ಕೆ ಬರುವರು. ಈ ಸಂದರ್ಭದಲ್ಲಿ ವಧುವರರನ್ನು ಸೋದರಮಾವ ಅಥವಾ ಅಕ್ಕನ ಗಂಡ ಧಾರೆ ಚಪ್ಪರಕ್ಕೆ ಕರೆತರುವ ಪದ್ಧತಿ ಇವರಲ್ಲಿಲ್ಲ. ಅವರ ರಕ್ತ ಸಂಬಂಧಿಕರ್‍ಯಾರಾದರೂ ಕರೆತರುವರು.

ವರ ಧಾರೆ ಚಪ್ಪರಕ್ಕೆ ಬರುವಾಗ ಧರಿಸುವ ಉಡುಪುಗಳೆಂದರೆ ಬಿಳಿ ಪಂಚೆ, ಕೆಂಪು ಅಂಗಿ (ಕೆಲವು ಕಡೆ ಬಿಳಿ ಅಂಗಿಯನ್ನು ಬಳಸುವರು) ಹಳದಿ ಅಥವಾ ಕೆಂಪು ಬಣ್ಣದ ರುಮಾಲು, ಕೈಯಲ್ಲಿ ನಿಂಬೆಹಣ್ಣು ಸಿಕ್ಕಿಸಿದ ಕತ್ತಿಯನ್ನು ಹಿಡಿದಿದ್ದು, ಬಲಗೈಗೆ ಕಂಕಣ, (ವಿಳ್ಯೆದೆಲೆ, ಜೋಡು ಅರಿಶಿಣ ಕೊಂಬುಗಳನ್ನು ದಾರದಿಂದ ಕಟ್ಟಿ ಕೈಗೆ ಕಟ್ಟುವರು) ತಲೆಗೆ ಬಾಸಿಂಗವನ್ನು ಕಟ್ಟಿಕೊಂಡಿರುತ್ತಾನೆ. ಈತನ ರಕ್ತಸಂಬಂಧಿಗಳು ಧಾರೆಚಪ್ಪರದ ಮುಂದೆ ಹಸಿ ಆಕಳು ಸೆಗಣಿಯನ್ನು ಅದರ ಮೇಲೆ ನಾಲ್ಕಾಣೆ ಅಥವಾ ಒಂದು ರೂಪಾಯಿ ಇಟ್ಟಿರುತ್ತಾರೆ. ಧಾರೆ ಚಪ್ಪರದ ಪ್ರವೇಶದಲ್ಲಿ ಮಾವಿನೆಲೆಯ ತೋರಣವನ್ನು ಎರಡೂ ಕಡೆಗೆ ಇಬ್ಬರು ಹಿಡಿದಿರುತ್ತಾರೆ. ಧಾರೆ ಚಪ್ಪರವನ್ನು ವಧು ಪ್ರವೇಶಿಸುವಾಗ ಕತ್ತಿಯಿಂದ ಒಂದೇ ಏಟಿಗೆ ಕತ್ತರಿಸಿ ಧಾರೆ

ಚಪ್ಪರದ ಕೆಳಗೆ ಪಂಚ ಕಳಶಗಳು ಹತ್ತಿರ ಬಂದು, ಸೂರ್ಯನ ಕಡೆ ವರ ಮುಖಮಾಡಿ ಕುಳಿತರೆ ಅದಕ್ಕೆ ವಿರುದ್ಧ ದಿಕ್ಕಿನಲ್ಲಿ ವಧು ಕೂಡುವಳು.

**ಪಂಚಕಲಶ ಸ್ಥಾಪನೆ :** ಅಕ್ಷತಾರೋಹಣದ ದಿನ ಬೆಳಿಗ್ಗೆ ಧಾರೆ ಚಪ್ಪರದ ಸ್ಥಳವನ್ನು ಆಕಳು ಸೆಗಣಿಯಿಂದ ಸಾರಿಸಿ, ಕೌದಿಯನ್ನು ಪಂಚಕಲಶಗಳನ್ನು ಸ್ಥಾಪಿಸಲು ಸಿದ್ಧಪಡಿಸುವರು. ಈ ಕಾರ್ಯವನ್ನು 'ಜಾತಿಭಟ್ಟ' ನಿರ್ವಹಿಸುವನು. ಪ್ರತಿಯೊಂದು ಬುಡಕಟ್ಟು ಸಮುದಾಯದವರು ತಮ್ಮ ಮದುವೆ, ಹುಟ್ಟು, ಸಾವು ಮೊದಲಾದ ಸಾಂಸ್ಕೃತಿಕ ಸಂದರ್ಭಗಳಲ್ಲಿ ಬ್ರಾಹ್ಮಣ ಪೌರೋಹಿತ್ಯಕ್ಕೆ ಅವಕಾಶ ಕೊಡದೇ ಅವುಗಳನ್ನು ತಾವೇ ನಡೆಸಿಕೊಂಡು ಹೋಗುತ್ತಾರೆ. ಇದು ಪ್ರತಿಯೊಂದು ಬುಡಕಟ್ಟಿನ ಲಕ್ಷಣವೂ ಹೌದೆಂದು ಅನೇಕ ವಿದ್ವಾಂಸರು ಒಪ್ಪಿಕೊಂಡಿದ್ದಾರೆ. ಈ ನಿಟ್ಟಿನಲ್ಲಿ ಗೋಸಂಗಿಗಳು ಸಹ ಬ್ರಾಹ್ಮಣ ಪೌರೋಹಿತ್ಯಕ್ಕೆ ಒಳಗಾಗದೆ ತಮ್ಮಲ್ಲೇ ಒಬ್ಬ ಅನುಭವಸ್ಥನನ್ನು ಜಾತಿಭಟ್ಟ (ಪುರೋಹಿತ)ನನ್ನಾಗಿ ನೇಮಿಸಿಕೊಳ್ಳುವರು. ಮದುವೆಯಲ್ಲಿ ನಡೆಯುವ ಎಲ್ಲಾ ಶಾಸ್ತ್ರ ಕಾರ್ಯಗಳನ್ನು ಈತನೇ ಮಾಡಿ ಮುಗಿಸುವನು.

ಮದುವೆ ಸಂದರ್ಭದಲ್ಲಿ ಭಟ್ಟನಾದವನು ಐದು ಚೆಂಬುಗಳನ್ನು ತೆಗೆದುಕೊಂಡು ಚೌಕಾಕಾರವಾಗಿ ನಾಲ್ಕು ಮೂಲೆಗಳಿಗೆ ನಾಲ್ಕು ಚೆಂಬುಗಳನ್ನಿಟ್ಟು, ಆ ನಾಲ್ಕು ಚೆಂಬುಗಳ ಮಧ್ಯೆ ಮತ್ತೊಂದು ಚೆಂಬನ್ನು ಇಡುವರು. ಈ ಐದು ಚೆಂಬುಗಳಿಗೆ ಐದೈದು ಮಾವಿನ ಎಲೆ ಅಥವಾ ವೀಳ್ಯದೆಲೆಗಳನ್ನಿಟ್ಟು ಅದರ ಮೇಲೆ ಒಂದೊಂದು ತೆಂಗಿನ ಕಾಯಿಯನ್ನಿಟ್ಟು ಪಂಚಕಳಸ ಸ್ಥಾಪನೆ ಮಾಡುವರು.[೨೮] ನಂತರ ಐದು ಕಳಸದ ಚೆಂಬುಗಳಿಗೆ ಐದೆಳೆ ಸೂತ್ರ ದಾರ ಸುತ್ತಲಾಗುತ್ತದೆ. ಈ ರೀತಿಯಾಗಿ ಪಂಚಕಲಶ ಸ್ಥಾಪನೆ ಮಾಡಿದ ನಂತರ, ಧಾರೆ ಚಪ್ಪರಕ್ಕೆ ಕರೆತಂದ ವಧು-ವರರನ್ನ ಪಂಚಕಳಸಗಳ ಎದಿರು-ಬದಿರು ಕೂಡಿಸುವರು. (ವಧು ತನ್ನ ಮನೆಗೆ ಬೆನ್ನುಮಾಡಿ ಕುಳಿತರೆ, ವರ ವಧುವಿನ ಮನೆಗೆ ಮುಖಮಾಡಿ ಕುಳಿತು ಕೊಳ್ಳುವನು) ಜಾತಿ ಭಟ್ಟ ವಧುವಿನ ಸೀರೆಯ ಸೆರಗಿನ ತುದಿಯನ್ನು, ವರನ ರುಮಾಲಿನ (ಟವಲ್ಲಿನ) ತುದಿಯನ್ನು ಸೇರಿ ಅದರಲ್ಲಿ ಜೋಡು ಅರಶಿಣಕೊಂಬು, ಅಡಿಕೆ, ಒಂದು ನಾಣ್ಯವನ್ನು ಹಾಕಿ ಗಂಟು ಕಟ್ಟುವವರು ಇದಕ್ಕೆ ಅವರು 'ಬ್ರಮ್ಮರಿಗಾಂಟು' (ಬ್ರಹ್ಮಗಂಟು) ಎಂದು ಕರೆಯುವರು. ನವದಂಪತಿಗಳಿಬ್ಬರು ಎಂದೆಂದಿಗೂ ಒಂದಾಗಿ ಬಾಳಲಿ, ಅವರ ದಾಂಪತ್ಯ ಜೀವನ, ಯಾರಿಂದಲೂ ಬೇರ್ಪಡಿಸಲಾಗದಷ್ಟು ಗಟ್ಟಿಯಾಗಿರಲಿ ಎಂಬ ಆಶಯ ಈ ಬ್ರಹ್ಮಗಂಟಿಗಿದೆ.

"ಕಂಚಿನ ಪಥದ ಗಂಡಿಗೆ ಪದುಮಜಾತದ ಹೆಣ್ಣಿಗೆ
ಬ್ರಹ್ಮಕಟ್ಟಿದ ಬ್ರಹ್ಮಗಂಟಿದು ಎಂದೆಂದಿಗೂ ಬಿಡದಯ್ಯಾ ಸೋಬಾನವೆ'

ಎಂಬ ಕಲ್ಪನೆ ಜಾನಪದರದ್ದು, ಸೃಷ್ಟಿಕರ್ತನಾದ ಬ್ರಹ್ಮ ಹುಟ್ಟುವ ಪೂರ್ವದಲ್ಲಿ ಯಾವ ಹೆಣ್ಣಿಗೆ ಯಾವ ಗಂಡು ಎಂದು ನಿಶ್ಚಯಿಸಿ ಕಳುಹಿಸಿರುತ್ತಾನೆ. ಹಾಗಾಗಿ ಇಂತಹ ಜೋಡಿಗಳನ್ನು ತಪ್ಪಿಸಲು ಯಾರಿಂದಲೂ ಸಾಧ್ಯವಿಲ್ಲ. ಹೀಗೆ ಹೆಣ್ಣಿಗೂ ಗಂಡಿಗೂ ಹಾಕಿರುವ ಗಂಟೇ ಬ್ರಹ್ಮಗಂಟಾಗಿದೆ ಎಂಬ ಭಾವನೆ ಜನಸಾಮಾನ್ಯರಲ್ಲಿದೆ. ಈ ರೀತಿಯ ಆಚರಣೆ ಬಹುತೇಕ ಎಲ್ಲಾ ಸಮುದಾಯಗಳಲ್ಲೂ

ಕಂಡುಬರುತ್ತದೆ. ಬ್ರಹ್ಮಗಂಟಿನ ಕಾರ್ಯ ಮುಗಿದ ನಂತರ, ಕಳಸದ ಎದಿರುಬದಿರು ಕುಳಿತುಕೊಂಡು ದಂಪತಿಗಳು ಐದು ಸಲ ಪಂಚ ಕಳಸಗಳನ್ನು ಸುತ್ತುತ್ತಾ ತಮ್ಮ ಸ್ಥಾನಗಳನ್ನು ಬದಲಿಸಿಕೊಂಡು ಕುಳಿತುಕೊಳ್ಳುವರು.

ಅಕ್ಷತಾಕಾರ್ಯ : ಬಹುತೇಕ ಸಮುದಾಯಗಳಲ್ಲಿ ತಾಳಿ ಕಾರ್ಯ ಮುಗಿದ ನಂತರವೇ ಅಕ್ಷತಾಕಾರ್ಯ ನಡೆಯುತ್ತದೆ. ಆದರೆ ಗೋಸಂಗಿಗಳಲ್ಲಿ ಹಾಗಲ್ಲ. ತಾಳಿಕಟ್ಟುವ ಶಾಸ್ತ್ರ ಬೆಳಿಗ್ಗೆ ಐದು ಗಂಟೆಯೊಳಗೆ ನಡೆಯುವುದರಿಂದ ಆ ಸಂದರ್ಭ ಅಕ್ಷತಾಕಾರ್ಯ ನಡೆಯುವುದಿಲ್ಲ. ಹಾಗಾಗಿ ತಾಳಿಕಾರ್ಯ ಮುಗಿದ ದಿನದಂದು ಸಂಜೆ ನಡೆಯುತ್ತದೆ. ಐದು ಗಂಟೆ ಅಕ್ಷತಾಕಾರ್ಯ ನಡೆಯುತ್ತದೆ. ಇದು ಗೋಸಂಗಿ ಸಮುದಾಯದ ವಿಶೇಷತೆ.

ತಾಳಿಕಟ್ಟು ಕಾರ್ಯ ಮಾತ್ರ ಬೆಳಗಿನ ಜಾವ ನಡೆಯಬೇಕೆಂಬ ನಿಯಮವಿದೆ. ಅಕ್ಷತೆ ಕಾರ್ಯ ಬೇಕಾದರೆ ತಾಳಿ ಕಟ್ಟಿದ ದಿನ ಸಂಜೆಯೊಳಗೆ ಅವರವರ ಅನುಕೂಲಕ್ಕೆ ತಕ್ಕಂತೆ ಯಾವಾಗ ಬೇಕಾದರೂ ಮಾಡಿಕೊಳ್ಳಬಹುದು. ಅಕ್ಷತೆಕಾರ್ಯದಲ್ಲಿ ಬಂಧುಬಳಗದವರೆಲ್ಲ ಸೇರಿದ ನಂತರ, ಜಾತಿಭಟ್ಟ ಎಲ್ಲರ ಒಪ್ಪಿಗೆಯನ್ನು ಪಡೆದು (ಗಂಡು ಹೆಣ್ಣಿನ ಕಡೆಯುವರು ತಂಟೆತಕರಾರುಗಳೇನಾದರೂ ಇದ್ದರೆ ಈ ಸಂದರ್ಭದಲ್ಲಿ ಬಗೆಹರಿಸಿಕೊಳ್ಳುವರು)

ಗಂಗಾ ಗೋದಾವರಿ

ಕುಳಿರಾ ಕುಳಿದೇವ್

ಇವಾರೋ ಜೋಗೆ ಜಲೂಮ್ ಬಾಯಿ

ಇವಾನ್ ಬಾಲ್ ಬಚ್ಚಾನ್

ಆನಂದ ರಾಕೋ

ಸಾಂ ದೊಂ ಎಂದು ಐದು ಸಲ ಮಂತ್ರ ಘೋಷಣೆ ಮಾಡಿ ಅಕ್ಷತೆ ಹಾಕಲು ಅನುಮತಿ ನೀಡುತ್ತಾನೆ. ಹೀಗೆ ಪ್ರತಿಯೊಂದು ಸಲ ಮಂತ್ರ ಘೋಷಣೆ ಮಾಡಿದ ಮೇಲೆ ಸ್ವಲ್ಪ ಅಕ್ಷತೆಯನ್ನು ಕೈಯಲ್ಲಿ ಹಿಡಿದು ಐದು ಸಲ ಹಾಕುವರು. ಅಕ್ಷತೆಯ ಕಾರ್ಯ ಮುಗಿದ ನಂತರ ವಿನೋದದ ಆಟಗಳು ಪ್ರಾರಂಭವಾಗುತ್ತವೆ.

### ವಿನೋದದ ಆಟಗಳು

ಅಕ್ಷತಾರೋಹಣ ಮುಗಿದ ನಂತರ ವಧುವರರಲ್ಲಿ ಸಲಿಗೆ ಬೆಳೆದು ಒಬ್ಬರಿಗೊಬ್ಬರು ಪರಸ್ಪರ ಸರಿಯಾಗಿ ಅರ್ಥಮಾಡಿಕೊಂಡು ಸಂಸಾರ ಸುಖವಾಗಿ ಸಾಗಿಸಲಿ ಎಂಬ ಉದ್ದೇಶದಿಂದ. ವಿವಿಧ ರೀತಿಯ ವಿನೋದದ ಆಟಗಳನ್ನಾಡಿಸುತ್ತಿರುವುದು ಗೋಸಂಗಿಗಳಲ್ಲಿ ಕಂಡು ಬರುತ್ತದೆ.

೧. **ಕಂಕಣ ಬಿಡಿಸುವುದು (ಡೇರಾಲ್ ಚೋಡ್)** : ಅರಿಶಿಣ ಹಚ್ಚಿದ ದಾರಕ್ಕೆ ಒಂದು ಉಂಗುರ, ಒಂದು ಅರಿಶಿಣ ಕೊಂಬನ್ನು ಕಟ್ಟಿರುತ್ತಾರೆ. ಹೀಗೆ ಸಿದ್ಧಪಡಿಸಿದ ದಾರವನ್ನು 'ಡೋರ್‌ಲಾ' ಎಂದು

ಕರೆಯುವರು. ಹೀಗೆ ಸಿದ್ಧಪಡಿಸಿದ ಡೋರ್‌ಲಾವನ್ನ ವಧುವರರಿಗೆ ಕಟ್ಟಿ ಬಿಡಿಸುವ ಶಾಸ್ತ್ರಕ್ಕೆ 'ಡೋರ್‌ಲಾ ಚೋಡ್' ಎಂದು ಕರೆಯುವರು. ಅಕ್ಷತೆ ಕಾರ್ಯ ಮುಗಿದ ನಂತರ ಇಂತಹ ದಾರವನ್ನು ವಧುವರರ ಕೈಕಾಲುಗಳಿಗೆ ಕಟ್ಟಿ ಬಿಡಿಸುವ ವಿಶಿಷ್ಟ ಆಟ ಗೋಸಂಗಿಗಳಲ್ಲಿದೆ. ಇದೇ ರೀತಿಯ ಆಟವನ್ನು ಹಕ್ಕಿಪಿಕ್ಕಿ ಸಮುದಾಯದಲ್ಲೂ ಕಾಣಬಹುದು. ಇದಕ್ಕೆ ಅವರು 'ಕಂಕಣಬಿಚ್ಚು'ವುದು ಎಂದು ಕರೆಯುತ್ತಾರೆ. "ಕಂಕಣಕ್ಕೆ ಹಾಕಿದ್ದ ಏಳುಗಂಟುಗಳನ್ನು ಗಂಡು ಹೆಣ್ಣಿನದನ್ನೂ, ಹೆಣ್ಣು ಗಂಡಿನದನ್ನೂ ಬಿಚ್ಚುತ್ತಾ ಈ ಆಟವನ್ನು ಆಡುತ್ತಾರೆ."

'ಡೋರ್‌ಲಾ'ವನ್ನು ಮೊದಲು ವಧುವಿನ ಕಾಲಿಗೆ ಕಟ್ಟುತ್ತಾರೆ. ವರನಾದವನು ತನ್ನ ಎಡಗೈಯನ್ನು ಬೆನ್ನ ಹಿಂದೆ ಮಡಚಿಕೊಂಡು ಬಲಗೈ ಒಂದರಿಂದಲೇ, ವಧುವಿಗೆ ಕಟ್ಟಿದ ಡೋರ್‌ಲಾವನ್ನು ಬಿಚ್ಚಬೇಕು. ವರ ಮೊದಲ ಸಲ ಒಂದು ಗಂಟು ಬಿಚ್ಚಿದ ನಂತರ, ಎರಡನೇ ಸಲ ಎರಡು ಗಂಟು ಹಾಕುವರು. ಆಗ ವರ ಎರಡೂ ಗಂಟನ್ನು ಒಂದೆ ಕೈಯಲ್ಲಿ ಬಿಚ್ಚಬೇಕು. ಹೀಗೆ ಏಳು ಸಲ ಏಳು ಗಂಟುಗಳನ್ನು ವರ ಆ ಏಳು ಗಂಟುಗಳನ್ನು ಬಿಚ್ಚಬೇಕು. ಒಂದು ವೇಳೆ ಬಿಚ್ಚಲು ಸಾಧ್ಯವಾಗದೇ ಇದ್ದಾಗ ನೆರೆದಂತ ಜನ ಕೈಲಾಗದವನೆಂದು ರೇಗಿಸುತ್ತಾರೆ. (ಇದೇ ಸಂದರ್ಭದಲ್ಲಿ ಹೆಣ್ಣುಮಕ್ಕಳು 'ಡೋರ್‌ಲಾ ಚೋಡ್' ಎಂಬ ಹಾಡೊಂದನ್ನು ಹಾಡುತ್ತಾರೆ. ಹಾಡಿನ ಸಂಪೂರ್ಣ ವಿವರಣೆ ಅನುಬಂಧದಲ್ಲಿ ಕೊಟ್ಟಿದೆ) ಹೀಗೆ ವರ ಡೋರಾಲ್‌ವನ್ನು ಬಿಚ್ಚಿದ ನಂತರ ವಧುವರನಿಗೆ ಕಟ್ಟಿದ ಡೋರ್‌ಲಾವನ್ನು ಬಿಚ್ಚಬೇಕು. ಆಕೆ ತನ್ನ ಬಲಗೈಯನ್ನು ಬೆನ್ನಹಿಂದೆ ಮಡಚಿಡಿದು ಎಡಗೈಯಿಂದ ಡೋರ್‌ಲಾವನ್ನು ಬಿಚ್ಚಬೇಕು. ಆಕೆಗೆ ಬಿಚ್ಚಲು ಸಾಧ್ಯವಾಗದೆ ಇದ್ದಾಗ ಅಲ್ಲಿ ನೆರೆದಂತ ಜನ ಹಾಡಿನ ಮೂಲಕ ಈ ರೀತಿಯಾಗಿ ಹೇಳುತ್ತಾರೆ. ನಿನ್ನ ಕೈಲಾಗದೇ ಇದ್ದರೆ ನಿಮ್ಮಪ್ಪನ ಕರೆ, ಇಲ್ಲ ನಿಮ್ಮಮ್ಮನನ್ನು ಕರೆ, ಇಲ್ಲ ನಿಮ್ಮಣ್ಣನನ್ನು ಕರೆ.... ಹೀಗೆ ತಮ್ಮ ತವರು ಮನೆಯ ಬಳಗವನ್ನೆಲ್ಲ ಕರೆದು 'ಡೋರ್‌ಲಾ'ವನ್ನು ಬಿಡಿಸು ಎಂದು ಆಕೆಯನ್ನು ರೇಗಿಸುತ್ತಾರೆ. ಹೀಗೆ ಪರಸ್ಪರ ವಧು-ವರರಿಬ್ಬರಿಗೂ ಕಟ್ಟಿದ 'ಡೋರ್‌ಲಾ' ಶಾಸ್ತ್ರ ಅತ್ಯಂತ ವಿನೋದದಿಂದ ಕೂಡಿರುತ್ತದೆ. ಹೀಗೆ ಮಾಡುವುದರಿಂದ ಪರಸ್ಪರ ಇಬ್ಬರಲ್ಲಿ ಸಲಿಗೆ ಹೆಚ್ಚಿ ಪ್ರೀತಿಯಿಂದ ಜೀವನ ಸಾಗಿಸುತ್ತಾರೆ ಎಂಬುದು ಗೋಸಂಗಿಗಳ ಅಭಿಪ್ರಾಯ.

**೨ ಉಂಗುರ ಹುಡುಕಿಸುವುದು :** ಉಂಗುರ ಹುಡುಕಿಸುವ ಈ ಆಟಕ್ಕೆ ಗೋಸಂಗಿಗಳು 'ವಿಟ್ಟಿ ಕೇಲವೆ' ಎಂದು ಕರೆಯುತ್ತಾರೆ. ಒಂದು ದೊಡ್ಡ ಹಿತ್ತಾಳೆ ಪರಾತಿನಲ್ಲಿ ಗೋದಿ ಅಥವಾ ಜೋಳದ ಹಿಟ್ಟನ್ನು ನೀರಿನಿಂದ ಕಲೆಸಿ ಹಾಲನ್ನು ತಯಾರಿಸುವರು. (ಕೆಲವು ಸಮುದಾಯಗಳ ಹಾಲಿನಲ್ಲಿ ಉಂಗುರವನ್ನು ಹುಡುಕಿಸುತ್ತಾರೆ) ಹೀಗೆ ತಯಾರಿಸಿದ ಹಾಲಿನಲ್ಲಿ ಒಂದು ಬೆಳ್ಳಿ, ಒಂದು ತಾಮ್ರದ ಉಂಗುರವನ್ನು ಮುಚ್ಚಿಡುವರು. ನಂತರ ವಧು-ವರರಿಗೆ ಅವುಗಳಲ್ಲಿ ಬೆಳ್ಳಿಯುಂಗರವನ್ನು ಹುಡುಕಲು ಜಾತಿಭಟ್ಟ ಸೂಚಿಸುವನು. ಅವನು ಸೂಚಿಸಿದಂತೆ ವಧುವರರು ಉಂಗುರವನ್ನು ಹುಡುಕಲು ಪೈಪೋಟಿ ನಡೆಸುವರು. ಅವರಿಬ್ಬರಲ್ಲಿ ಯಾರು ಬೆಳ್ಳಿಯುಂಗರ ಹುಡುಕುವರೋ ಅವರು ಗೆದ್ದಂತೆ. ತಾಮ್ರ ಉಂಗುರ ಹುಡುಕಿದವರು ಸೋತಂತೆ ಹೀಗೆ ಐದು ಸಲ ಉಂಗುರ ಹುಡುಕಿಸುವ ಆಟವನ್ನು ಆಡಿಸಿ ವಧು-

ವರರಲ್ಲಿ ಸಲಿಗೆ ಹೆಚ್ಚಾಗುವಂತೆ ಮಾಡುತ್ತಾರೆ. ಈ ರೀತಿಯ ಉಂಗುರ ಹುಡುಕಿಸುವ ಆಟ ಇತರೆ ಸಮುದಾಯಗಳಲ್ಲೂ ಕಾಣಬಹುದಾಗಿದೆ.

೩. **ಹತ್ತಿ ತೆಗೆಯುವ ಆಟ :** ಈ ರೀತಿಯ ಆಟಕ್ಕೆ ಗೋಸಂಗಿಗಳು 'ಕಾಫೂಸ್ ಕೇಲವೆ' ಎಂದು ಕರೆಯುವರು. ವಧು-ವರರಿಬ್ಬರು ಎದಿರುಬದಿರು ಕೂತಿರುತ್ತಾರೆ. ನಂತರ 'ಜಾತಿಭಟ್ಟ' ಮೊದಲು ವರನಿಗೆ ಕಟ್ಟಿದ ಕಟ್ಟಿನ ಬಾಸಿಂಗದ ಮುಂದೆ, ಹಿಂದೆ ಹಾಗೂ ಎರಡು ಪಕ್ಕೆಗಳಿಗೂ ಚಿಕ್ಕ ಚಿಕ್ಕ ಹತ್ತಿ ಉಂಡೆಗಳನ್ನು ಸಿಕ್ಕಿಸುತ್ತಾನೆ. ಹೀಗೆ ಸಿಕ್ಕಿಸಿದ ಉಂಡೆಗಳನ್ನು ತೆಗೆಯಲು ಮೊದಲು ವಧುವಿಗೆ ಹೇಳುತ್ತಾನೆ. ಆಗ ಆಕೆ ಅವುಗಳನ್ನು ತೆಗೆಯಲು ಮುಂದಾಗುವಾಗ ವರ ಆಕೆಗೆ ಸಿಗದಂತೆ ತಲೆಯನ್ನು ದೂರ ಸರಿಸುವನು. ಹೀಗೆ ವಧುವರನ ಬಾಸಿಂಗದಲ್ಲಿನ ಉಂಡೆಗಳನ್ನು, ವರ-ವಧುವಿನ ಬಾಸಿಂಗದಲ್ಲಿನ ಉಂಡೆಗಳನ್ನು ತೆಗೆಯುವ ಆಟವನ್ನು ಐದೈದು ಸಲ ಆಡಿಸುತ್ತಾರೆ. ಈ ಆಟದಲ್ಲಿ ಯಾರು ಹೆಚ್ಚಿನ ಉಂಡೆಗಳನ್ನು ತೆಗೆಯಲು ಸಾಧ್ಯವಾಗಿರುತ್ತೊ ಅಂತವರು ಗೆದ್ದಂತೆ. ತೆಗೆಯಲಾಗದವರು ಸೋತಂತೆ. ಹೀಗೆ ಗೋಸಂಗಿಗಳು ವಧು-ವರರಿಗೆ ವಿವಿಧ ರೀತಿಯ ವಿನೋದದ ಆಟಗಳನ್ನು ಆಡಿಸುತ್ತಾ ಅವರಿಬ್ಬರಲ್ಲಿ ಪರಸ್ಪರ ಸಲಿಗೆ ಬೆಳೆಯುವಂತೆ ಮಾಡುವುದೇ ಒಟ್ಟು ಈ ಆಟಗಳ ಉದ್ದೇಶ.

ವಿನೋದದ ಆಟಗಳು ಮುಗಿದ ನಂತರ ಜಾತಿಭಟ್ಟ ವಧುವರರನ್ನು ಧಾರೆ ಚಪ್ಪರದ ಪೂರ್ವ ದಿಕ್ಕಿಗೆ ನಿಲ್ಲಿಸಿ, ಇಬ್ಬರ ಕೈಗೆ ಎರಡು ಬೊಗಸೆ ಗೋದಿಯನ್ನು ಕೊಟ್ಟು, ಹಿಮ್ಮುಖನಾಗಿ ಧಾರೆ ಚಪ್ಪರದ ಮೇಲೆ ಎಸೆಯಲು ಸೂಚಿಸುವನು. ಒಬ್ಬನ ನಿರ್ದೇಶನದಂತೆ ವಧುವರರು ಗೋದಿಯನ್ನು ಧಾರೆ ಚಪ್ಪರದ ಮೇಲೆ ಎಸೆದ ನಂತರ ದೇವರುಗಳಿಗೆ ಕೈಮುಗಿದು ಮನೆ ಸೇರಿಕೊಳ್ಳುವರು. ಇಲ್ಲಿಗೆ ತೊಂಬತ್ತರಷ್ಟು ಭಾಗ ಮದುವೆ ಪೂರ್ಣಗೊಂಡಂತೆ. ಉಳಿದ ಹತ್ತು ಭಾಗದ ಕಾರ್ಯವೆಂದರೆ ಬ್ರಹ್ಮಗಂಟು ಬಿಡಿಸುವ ಕಾರ್ಯ.

೪. **ಮಗುವಿನ ಆಟ :** ಮಗವನ್ನು ಎತ್ತಿಕೊಳ್ಳುವ ಆಟಕ್ಕೆ ಗೋಸಂಗಿಗಳು 'ಟಂಬರ್ ಆತ್‌ಮೋದೆ' ಎಂದು ಕರೆಯುವರು. ಇದು ನವದಂಪತಿಗಳಿಗೆ ಆಡಿಸುವ ವಿನೋದದ ಆಟಗಳಲ್ಲಿ ಒಂದು. ಇಲ್ಲಿ ವಧು-ವರರಿಬ್ಬರಿಗೂ ಒಂದು ಮಗುವನ್ನು ಕೊಡುವರು. ಆಗ ವಧುವರನಿಗೆ ಹೇಳುತ್ತಾಳೆ. ಈ ಮಗುವನ್ನು ಎತ್ತಿಕ್ಕೊಳ್ಳಿ ನಾನು ಕಟ್ಟಿಗೆ ತಂದು ಜೋಳ ಬೀಸಿ ಅಡಿಗೆ ಮಾಡಬೇಕೆಂದು. ಆಗ ವರ ಹೇಳುತ್ತಾನೆ, ಈ ಮಗುವನ್ನು ಎತ್ತಿಕೋ ನಾನು ವ್ಯಾಪಾರಕ್ಕೆ ಹೋಗಿ ಹಣ ಸಂಪಾದನೆ ಮಾಡಬೇಕು. ಹೀಗೆ ಮಗುವನ್ನು ಎತ್ತಿಕೊಂಡ ಇವರಿಬ್ಬರು ಪರಸ್ಪರ ವಾದಕ್ಕಿಳಿಯುತ್ತಾ, ವಧುವರ ದಿನಕ್ಕೆ ಐದು ಸಲ, ವರವಧು ದಿನಕ್ಕೆಗ ಐದು ಸಲ ಮಗುವನ್ನು ಹಸ್ತಾಂತರಿಸುವ ಈ ಆಟ ತುಂಬಾ ತಮಾಷೆಯಾಗಿರುತ್ತದೆ. ಮಕ್ಕಳ ಫಲದ ಸಂಕೇತವಾಗಿಯೂ ಸಹ ಆ ಆಟವನ್ನು ಆಡಿಸುತ್ತಾರೆ.

೫. **ಅನ್ನದ ಆಣೆ :** ಈ ರೀತಿಯ ಆಟಕ್ಕೆ ಗೋಸಂಗಿಗಳು 'ಫಾಟಾರಿ ಮಿರಿಕಿ' ಎಂದು ಕರೆಯುವರು. ಈ ಸಂದರ್ಭದಲ್ಲಿ ಹೆಣ್ಣಿನ ಕಡೆಯುವರು, ಒಂದು 'ಮುಟಗಿ' (ಮುಷ್ಠಿ) ಅನ್ನವನ್ನು ವರನ ಕೈಗೆ

ಕೊಡುವರು. ವರ ಆ 'ಮುಟಗಿ' ಅನ್ನವನ್ನು ವಧುವಿನ ಕೈಗೆ ಕೊಟ್ಟು, 'ನೀನು ಇನ್ನು ಮೇಲೆ ನನ್ನನ್ನು ಬಿಟ್ಟು ಬೇರೆಯವರನ್ನು ನೋಡಕೂಡದು' ಎಂದು ಭಾಷೆ ತೆಗೆದುಕೊಳ್ಳುತ್ತಾನೆ. ಅದೇ ರೀತಿ ವಧು ವರನ ಕೈಗೆ ಒಂದು ಮುಟಗಿ ಅನ್ನವನ್ನು ಕೊಟ್ಟು 'ಇನ್ನೂ ಮೇಲೆ ನೀನು ನನ್ನನ್ನು ಬಿಟ್ಟು ಬೇರೆಯಾರನ್ನು ನೋಡಕೂಡದು' ಎಂದು ಭಾಷೆ ತೆಗೆದುಕೊಳ್ಳುತ್ತಾಳೆ. ಹೀಗೆ ಪರಸ್ಪರ ಇಬ್ಬರು ಒಬ್ಬರ ಕೈಗೆ ಒಬ್ಬರು ಅನ್ನದ 'ಮುಟಗಿ'ಯನ್ನು ಕೊಟ್ಟು ಭಾಷೆ ತೆಗೆದುಕೊಳ್ಳುವ ವಿಶಿಷ್ಟ ಆಟವೊಂದು ಗೋಸಂಗಿಗಳಲ್ಲಿ ನಡೆಯುತ್ತದೆ.

೬. **ಬಲ ಪ್ರದರ್ಶನ :** ಈ ಸಂದರ್ಭದಲ್ಲಿ ಎರಡು ಕುಟುಂಬಗಳ ನಡುವೆ ನಡೆಯುವ ವಿಶಿಷ್ಟ ರೀತಿಯ ಆಟವಿದು. ವಧು-ವರರನ್ನು ಎದುರುಬದಿರು ಕೂಡಿಸಿ, ವರನ ಕಡೆ ನಾಲ್ಕೈದು ಜನ ಗಂಡು ಮಕ್ಕಳು ಹಾಗೆಯೇ ವಧುವಿನ ಕಡೆ ನಾಲ್ಕೈದು ಜನ ಹೆಣ್ಣುಮಕ್ಕಳು ಸೇರಿಕೊಂಡು ವಧುವರರನ್ನು ಮೇಲಕ್ಕೆತ್ತಿ ಕೂಡಿಸುವ ಆಟವನ್ನಾಡುತ್ತಾರೆ. ಇಲ್ಲಿ ಪರಸ್ಪರ ಎರಡು ಗುಂಪುಗಳ ಶಕ್ತಿ ಪ್ರದರ್ಶನವಾಗುತ್ತದೆ. ಎರಡೂ ಗುಂಪಿನವರು ವಧು-ವರರನ್ನು ಮೇಲೆತ್ತಲು ಸಿದ್ಧವಾಗಿ ನಿಂತಾಗ ಜಾತಿಭಟ್ಟ ಒಂದು ಸೂಚನೆಯನ್ನು ನೀಡುತ್ತಾನೆ. ಆಗ ಭಟ್ಟನ ಸೂಚನೆಯ ಮೇರೆಗೆ ಆ ಎರಡು ಗುಂಪಿನವರು ವಧುವರರನ್ನು ಮೇಲೆತ್ತುವರು. ಯಾರು ಮೊದಲು ವಧು-ವರರನ್ನು ಮೇಲೆತ್ತುವರೋ ಅವರು ಗೆದ್ದಂತೆ, ತಡವಾಗಿ ಎತ್ತಿದವರು ಸೋತಂತೆ. ಹೀಗೆ ಐದು ಸಲ ವಧು-ವರರನ್ನು ಮೇಲೆತ್ತಿ ಕೂಡಿಸುವ ಆಟ ತುಂಬಾ ಮನರಂಜನೆಯಿಂದ ಕೂಡಿರುತ್ತದೆ.



ವಿನೋದದ ಆಟವಾಡುತ್ತಿರುವ ಗೋಸಂಗಿ ವಧು-ವರರು

**ಬ್ರಹ್ಮಗಂಟು ಬಿಡಿಸುವ ಕಾರ್ಯ :** ಗೋಸಂಗಿಗಳಲ್ಲಿ ಬ್ರಹ್ಮಗಂಟು ಬಿಡಿಸುವ ಕಾರ್ಯ ವಿಶೇಷವಾದದ್ದು. ಮದುವೆಯಾದ ನಂತರ ನಡೆಯುವ ಈ ಕಾರ್ಯ ಇಂತಿಷ್ಟೇ ದಿನದಲ್ಲಿ ನಡೆಯಬೇಕೆಂಬ ನಿಯಮವಿಲ್ಲ. ಅವರವರ ಅನುಕೂಲಕ್ಕೆ ತಕ್ಕಂತೆ ಯಾವಾಗ ಬೇಕಾದರೂ ಮಾಡಬಹುದು. ಬ್ರಹ್ಮಗಂಟು ಬಿಡಿಸಿದ ನಂತರವೇ ವಧು ತಮ್ಮ (ವರನ) ಕುಟುಂಬದ ಸದಸ್ಯಳಾಗುವಳು. ಹಾಗಾಗಿ ಆ ಕಾರ್ಯ ನೆರವೇರಲೇ ಬೇಕು.

ಬ್ರಹ್ಮಗಂಟು ಬಿಡಿಸುವ ಕಾರ್ಯದ ಖರ್ಚು ವೆಚ್ಚವೆಲ್ಲ ಗಂಡಿನವರದ್ದೆ ಆದ್ದರಿಂದ ಅವರೇ ಅನುಕೂಲಕ್ಕೆ ತಕ್ಕಂತೆ ದಿನವನ್ನು ನಿಗಧಿ ಪಡಿಸಿಕೊಂಡು 'ಜಾತಿಭಟ್ಟ'ನಿಗೆ ಹೇಳಿಕಳುಹಿಸುವರು. ಅಂದು ಲಗ್ನದ ದಿನ ಕಟ್ಟಿದ ಗೋದಿ ಗಂಟನ್ನು (ಗೋದಿಗಂಟು) ಬಿಚ್ಚಿ ಅದಕ್ಕೆ ಮತ್ತೊಂದಿಷ್ಟು ಗೋದಿಯನ್ನು ಬೆರೆಸುವರು. ವಧು ಆ ಗೋದಿಯನ್ನು ಸಾಂಕೇತಿಕವಾಗಿ ಐದು ಸಲ ಬೀಸಬೇಕು. ನಂತರ ವರನ ಕಡೆಯ ಗಂಡುಮಕ್ಕಳು ಉಳಿದ ಗೋದಿಯನ್ನು ಬೀಸಿ ಹಿಟ್ಟನ್ನು ಸಿದ್ಧಪಡಿಸುವರು. ಈ ಸಂದರ್ಭದಲ್ಲಿ ಹೆಣ್ಣು ಮಕ್ಕಳು ಗೋದಿ ಬೀಸುವಂತಿಲ್ಲ. ಹೀಗೆ ಸಿದ್ಧಪಡಿಸಿದ ಹಿಟ್ಟಿನಲ್ಲಿ ವಧು ಸಾಂಕೇತಿಕವಾಗಿ ಐದು ಚಪಾತಿಯನ್ನು ಮಾಡಿದ ನಂತರ ಉಳಿದ ಹಿಟ್ಟನ್ನು ವರನ ಕಡೆಯವರು ಚಪಾತಿ ಮಾಡಿ ಎಡೆಗೆ ಸಿದ್ಧಪಡಿಸುವರು.

ಹೀಗೆ ಗಂಡುಮಕ್ಕಳೇ ಗೋದಿಯನ್ನು ಬೀಸಿ ದೇವರ ಎಡೆಗೆ ಚಪಾತಿಯನ್ನು ಸಿದ್ಧಪಡಿಸುವರು. ನಂತರ ಸಿದ್ಧಪಡಿಸಿದ ಚಪಾತಿಗಳಲ್ಲಿ ರಂಧ್ರಗಳನ್ನು ಪರೀಕ್ಷಿಸಿ ತುಪ್ಪವನ್ನು ಎರಡೂ ಬದಿಗೆ ಸವರಿಡುವರು. ಈ ಸಂದರ್ಭದಲ್ಲಿ ಆಯಾ ವರನ ಮನೆ ದೇವರುಗಳನ್ನು ಪ್ರತ್ಯೇಕವಾದ ಡೇರಾದಲ್ಲಿ ಸ್ಥಾಪಿಸಿ ಪೂಜೆ ಸಲ್ಲಿಸುವರು. ಹೀಗೆ ಪ್ರತಿಷ್ಠಾಪಿಸಿದ ದೇವ ಬಾವುಟದ ಸುತ್ತ ಏಳು ಗುಡ್ಡೆ ಚಪಾತಿಗಳನ್ನಿಟ್ಟಿರುತ್ತಾರೆ. ಪ್ರತಿಯೊಂದು ಗುಡ್ಡೆಯಲ್ಲಿ ಏಳೇಳು ಚಪಾತಿಗಳಿರುತ್ತವೆ. ಹೀಗೆ ಇಟ್ಟಂತ ಚಪಾತಿ ಗುಡ್ಡೆಗಳ ಮೇಲೆ ಸ್ವಲ್ಪ ಅನ್ನ, ಬೆಲ್ಲವನ್ನಿಟ್ಟು ಅದರ ಮೇಲೆ ತುಪ್ಪವನ್ನಾಕುವರು. ನಂತರ ಧೂಪವನ್ನಾಕಿ ಎಡೆ ಅರ್ಪಿಸಿ, ವಧು-ವರರನ್ನ ದೇವರ ಡೇರಾದ ಹತ್ತಿರ ಕರೆತರುವರು. ನಂತರ ಬ್ರಹ್ಮಗಂಟನ್ನು ಬಿಚ್ಚಿಸಲು ಕರೆತಂದ ಮುತ್ತೈದೆಯಿಂದ (ಹೆಚ್ಚು ಮಕ್ಕಳನ್ನು ಪಡೆದ ಸ್ತ್ರೀಯನ್ನು) ವಧು-ವರರ ಬ್ರಹ್ಮಗಂಟನ್ನು ಬಿಚ್ಚಿಸುವರು. ಬ್ರಹ್ಮಗಂಟನ್ನು ಬಿಚ್ಚಿದ ಮುತ್ತೈದೆ ನವ ವಧು-ವರರಿಗೆ ಹೆಚ್ಚು ಮಕ್ಕಳನ್ನು ಪಡೆಯುವಂತೆ ಆಶೀರ್ವಾದ ನೀಡಿ ಪ್ರಸಾದವನ್ನು ಸ್ವೀಕರಿಸುವಳು. ಮುತ್ತೈದೆ ಪ್ರಸಾದ ಸ್ವೀಕರಿಸಿದ ನಂತರ ಉಳಿದವರು ಪ್ರಸಾದವನ್ನು ಸ್ವೀಕರಿಸಬಹುದು. ದೇವರ ಎಡೆಗಿಟ್ಟ ಚಪಾತಿ, ಬೆಲ್ಲ, ತುಪ್ಪವನ್ನು ಒಂದು ದೊಡ್ಡ ಹಿತ್ತಾಳೆ ಪರಾತಿನಲ್ಲಿ ಹಾಕಿ ಏಳು ವರ್ಷದೊಳಗಿನ ಏಳು ಜನ ಚಿಕ್ಕ ಮಕ್ಕಳನ್ನು ಹಾಗೂ ವಧು-ವರರನ್ನು ಜೊತೆಗೆ ಕೂಡಿಸಿ ಊಟ ಮಾಡಿಸುವರು. ಹೀಗೆ ಬ್ರಹ್ಮಗಂಟು ಬಿಡಿಸಿದ ನಂತರ ವಧುವರನ ಮನೆಯ ಸದಸ್ಯೆಯಾಗಿ ಸೇರಿಕೊಳ್ಳುವಳು. ಅಲ್ಲಿಯವರೆಗೆ ವಧುವನ್ನು ತವರುಮನೆಯ ಹೆಣ್ಣೆಂದೇ ಪರಿಗಣಿಸುವರು. ಹಾಗಾಗಿ ಬ್ರಹ್ಮಗಂಟು ಕಾರ್ಯ ಅತ್ಯಂತ ಮಹತ್ವದ್ದಾಗಿದೆ. ಈ ಸಂದರ್ಭದಲ್ಲಿ ದೇವರ ಪ್ರಸಾದವನ್ನು ಹೆಣ್ಣಿನ

ತವರುಮನೆಯವರಿಗೆ ಕೊಡುವುದಿಲ್ಲ. ವರನ 'ಬಳಿ'ಯವರು ಮಾತ್ರ ಪ್ರಸಾದವನ್ನು ಸ್ವೀಕರಿಸಬೇಕೆಂಬ ನಿಯಮ ಇವರಲ್ಲಿದೆ. ಒಂದು ವೇಳೆ ಪ್ರಸಾದ ಉಳಿದರೆ ಅದನ್ನು ಒಂದು ಗುಂಡಿನಲ್ಲಿ ಹಾಕಿ ಮುಚ್ಚುವರು. ಮರು ದಿನಕ್ಕೆ ಉಳಿಸುವುದಿಲ್ಲ. ದೇವರ ಕಾರ್ಯ ಮಾಡುವಾಗಿನಿಂದ ಮುಗಿಯುವವರೆಗೆ ಕೈಗಳನ್ನು ಹೊರಗಡೆ ತೊಳೆಯುವಂತಿಲ್ಲ. ಚಪಾತಿ ಮಾಡಿದ ನಂತರ, ಊಟ ಮಾಡಿದ ನಂತರ, ಕೈಗಳನ್ನು ಎಲ್ಲರೂ ಗುಂಡಿಯಲ್ಲೇ ತೊಳದುಕೊಳ್ಳಬೇಕು. ನಂತರ ನಾಯಿಗಳು ಕೆದರದಂತೆ ಗುಂಡಿಯನ್ನು ಮುಟ್ಟಿ ಮುಳ್ಳಿನ ರಂಬೆಯನ್ನೋ ಅಥವಾ ಬಂಡೆಯನ್ನೋ ಗುಂಡಿಯ ಮೇಲಿಡುವರು. ಹೀಗೆ ಗೋಸಂಗಿಗಳು ಯಾವುದೇ ದೇವರ ಕಾರ್ಯ ಮಾಡಲಿ ಅತ್ಯಂತ ಎಚ್ಚರಿಕೆಯಿಂದ, ನೇಮ-ನಿಷ್ಠೆಯಿಂದ ಮಾಡುತ್ತಿರುವುದನ್ನು ಇಂದಿಗೂ ಸಹ ಕಾಣಬಹುದು. ತಮ್ಮ ಅಲೆಮಾರಿತನದ ತೆರೆದ ಬದುಕಿನಲ್ಲಿ ದೇವರೇ ಸರ್ವಸ್ವ. ಆತನೊಬ್ಬನೇ ನಮ್ಮನ್ನು ರಕ್ಷಿಸಬಲ್ಲನು. ಅಷ್ಟೇ ಅಲ್ಲ ವೈಜ್ಞಾನಿಕವಾದ ಎಷ್ಟೋ ಸತ್ಯಗಳಿಗೆ ದೇವರಿಂದಲೇ ಪರಿಹಾರ ಸಾಧ್ಯ ಎಂದು ಬಲವಾದ ನಂಬಿಕೆ ಇವರಲ್ಲಿದೆ.

ಗೋಸಂಗಿ ಸಮುದಾಯದಲ್ಲಿ ವಿವಾಹದ ಪ್ರಾರಂಭದಿಂದ ಹಿಡಿದು ಬ್ರಹ್ಮಗಂಟು ಬಿಚ್ಚುವವರೆಗೆ ಮಾತ್ರ ವಧು ಬಲಗಡೆ ಸೆರಗನ್ನು ಹೊದೆಯಬೇಕೆಂಬ ನಿಯಮ ಕಡ್ಡಾಯವಾಗಿದ್ದು, ಬ್ರಹ್ಮಗಂಟು ಬಿಚ್ಚಿದ ನಂತರ 'ಬಲ' ಸೆರಗನ್ನು ಬದಲಿಸಿ 'ಎಡ' ಸೆರಗು ಹೊದೆಯುವುದನ್ನು ಅನುಸರಿಸುತ್ತಿರುವುದು ಸಾಮಾನ್ಯವಾಗಿದೆ. ಉಳಿದ ಸಂದರ್ಭಗಳಲ್ಲಿ ಬಲಗಡೆ ಸೆರಗಿನ ಪದ್ಧತಿಯನ್ನು ಬಿಟ್ಟರೂ ಮದುವೆ ಸಂದರ್ಭದಲ್ಲಿ ಮಾತ್ರ ಅದನ್ನೊಂದು ವಿಧಿ ಎಂಬಂತೆಯೇ ಅನುಸರಿಸುತ್ತಿರುವುದು ಕಂಡುಬರುತ್ತದೆ. ಮಾಸ್ಟೀಕ ಹಾಗೂ ಮಾದಿಗರಲ್ಲಿಯೂ ಸಹ ಲಕ್ಷ್ಮೀಪತಿ ಕೋಲಾರ ಅವರು ಈ ಕುರಿತು ಮಾಹಿತಯನ್ನು ದಾಖಲಿಸಿದ್ದಾರೆ.

ಬಲಗಡೆ (ಕುಡಿಪೈಟ) ಸೆರಗು ಹೊದೆಯುವುದನ್ನು ಒಂದು ವಿಧಿಯಾಗಿ ರೂಪಿಸಿಕೊಂಡು ಬಂದಿರುವುದನ್ನು ನೋಡಬಹುದು. "ಬಹಳಷ್ಟು ಹೆಂಗಸರು ಎಡಗಡೆಗೆ ಈಗ ಸೆರಗು ಹೊದೆಯುತ್ತಾರಾದರೂ ಹಳಬರು ಹಾಗೂ ಮಾಸ್ಟೀಕ ವೃತ್ತಿಗೆ ಅಂಟಿಕೊಂಡಿರುವವರಲ್ಲಿ ಕೆಲವರಾದರೂ ಬಲಗಡೆಗೆ ಸೆರಗು ಹೊದೆಯುತ್ತಾರೆ. ಮಾಸ್ಟೀಕರಲ್ಲಷ್ಟೇ ಅಲ್ಲದೆ ಮಾದಗಿರಲ್ಲೂ ಇಂದಿಗೂ ವಿಶಿಷ್ಟವಾದ ಈ 'ಕುಡಿಪೈಟ' (ಬಲಗಡೆ ಸೆರಗು) ಪದ್ಧತಿಯನ್ನು ಅನುಸರಿಸುತ್ತಾರೆ. ಮಾದಿಗ ಹಾಗೂ ಮಾಸ್ಟೀಕರಲ್ಲದೆ ೯ ಮತ್ತು ೧೮ ಪಣಕಟ್ಟಿನ ವ್ಯಾಪ್ತಿಗೆ ಒಳಪಡುವ ಜಾತಿ ಮತ್ತು ಉಪಜಾತಿಗಳ ಜನರೆಲ್ಲರೂ ಹೀಗೆಯೇ 'ಕುಡಿಪೈಟ' ಪದ್ಧತಿಯನ್ನೇ ಪೂರ್ವದಲ್ಲಿ ಅನುಸರಿಸುತ್ತಿದ್ದರೆಂಬುದಕ್ಕೆ ಮಾಸ್ಟೀಕರ ಮಾತುಗಳಲ್ಲಿಯೇ ಆಧಾರಗಳು ಸಿಗುತ್ತವೆ."[೯] ಜೊತೆಗೆ ತಮಿಳುನಾಡಿನ ವೈಷ್ಣವ ಸಂಪ್ರದಾಯದ ಅಯ್ಯಾಂಗರ್ ತರಹದ ಬ್ರಾಹ್ಮಣ ಜನಾಂಗದಲ್ಲೂ ಮಹಿಳೆಯರು 'ಕುಡಿಪೈಟ' ಪದ್ಧತಿಯನ್ನು ಅನುಸರಿಸುತ್ತಿರುವುದು ಕಂಡುಬರುತ್ತದೆ. ಗೋಸಂಗಿಗಳು ಮದುವೆ ಸಂದರ್ಭದಲ್ಲಿ ಮಾತ್ರ ಈ 'ಕುಡಿಪೈಟ' (ಬಲ ಸೆರಗು) ಪದ್ಧತಿಯನ್ನು ಅನುಸರಿಸುತ್ತಿರುವುದು ಕಂಡುಬರುತ್ತದೆ.

## ಸಾವು

'ಸಾವು ಜಾತಸ್ಯ ಮರಣಂ ಧ್ರುವಂ' ಎಂಬಂತೆ ಈ ಸೃಷ್ಟಿಯಲ್ಲಿ ಹುಟ್ಟಿದ ಪ್ರತಿಯೊಂದು ಜೀವರಾಶಿಗೂ ಸಾವೆಂಬುದು ಖಚಿತ. ಹೀಗಾದಾಗ ಜಗತ್ತಿನೊಂದಿಗಿನ ಜೀವಜಾಲಗಳ ಸಂಬಂಧ ಕೊನೆಗೊಂಡಂತೆ, ಹೀಗಿದ್ದರೂ ಸಹ ಸಾವಿನಾಚೆಯ ಬದುಕನ್ನು ಕುರಿತು ಹಿಂದಿನಿಂದಲೂ ಜಿಜ್ಞಾಸೆ ನಡೆದೇ ಇದೆ. ವ್ಯಕ್ತಿಯೊಬ್ಬ ಎಲ್ಲಿಗೆ ಹೋಗುತ್ತಾನೆ? ಸತ್ತಾಗ ಈತನಿಗೆ ಪುನರ್ಜನ್ಮ ಇದೆಯೇ? ಇದೆ ಎಂದು ಸಾರುವ ವೈದಿಕ ಜೈನ ಧರ್ಮಗಳು ಸತ್ತ ವ್ಯಕ್ತಿಯು ಜೀವಿತದ ಕಾಲದಲ್ಲಿ ಪಾಪಪುಣ್ಯಗಳನ್ನಾಧರಿಸಿ ಮೋಕ್ಷ ಪಡೆಯುತ್ತಾನೆಂದು ನಂಬಲಾಗುತ್ತದೆ. ಪುಣ್ಯ ಕಾರ್ಯಗಳನ್ನು ಮಾಡಿದ ವ್ಯಕ್ತಿ ಸ್ವರ್ಗಕ್ಕೆ ಸೇರುತ್ತಾನೆ. ದುಷ್ಟಕಾರ್ಯಗಳನ್ನು ಮಾಡಿದ ವ್ಯಕ್ತಿ ಸಾವಿನ ಬಳಿಕ ನರಕ ಸೇರುತ್ತಾನೆ ಎಂದೂ ಈಗಲೂ ಸಹ ಜನ ನಂಬುತ್ತಾರೆ. ಜನಸಾಮಾನ್ಯರು ಮಾತನಾಡುವಾಗ 'ಸ್ವರ್ಗಸುಖ' 'ನರಕಯಾತನೆ' ಎಂಬ ಶಬ್ದಗಳನ್ನು ಬಳಸುವುದನ್ನು ನಾವು ನೋಡಿದಾಗ 'ಸ್ವರ್ಗ' ಹಾಗೂ 'ನರಕ'ಗಳ ಕಲ್ಪನೆ ನಮ್ಮ ಕಣ್ಣ ಮುಂದೆ ಬಂದು ನಿಲ್ಲುತ್ತದೆ. ಆದ್ದರಿಂದ 'ಸಾವು' ಸಮಾಜದೊಟ್ಟಿಗಿನ ಸಂಬಂಧಿತ ವ್ಯಕ್ತಿಗೆ ಅಂತಿಮವಾಗಿ ಕಂಡರೂ ಸಹ ಆತನ ಮುಂದಿನ ಅಸ್ತಿತ್ವದ ಬಗ್ಗೆ ಕುತೂಹಲವನ್ನು ಮೂಡಿಸುತ್ತದೆ.

"ಸಾವು ಕೇವಲ ಒಂದು ಘಟನೆಯಲ್ಲ; ಒಂದು ಸುದ್ದಿಯಲ್ಲ; ಒಂದು ಮಾಹಿತಿಯಲ್ಲ ಅದು ಮಾನವ ಸಮಾಜದ ಸಮಗ್ರ ಜೀವನ ಕ್ರಮದ ಒಂದು ಭಾಗ. ಅದೊಂದು ನಿರಂತರವಾದ ಆಚರಣೆ. ಸಮಾಜದ ಕ್ರಿಯಾಶೀಲ ಆಲೋಚನೆ. ಹುಟ್ಟು ಕೆಲವೊಮ್ಮೆ ಬೇಕೆಂದರೆ ಬೇಕು. ಸಾವು ಮಾತ್ರ ಬೇಡವೆಂದರೂ ಬೇಕು. ಹುಟ್ಟಬಹುದಾದ ಜೀವಿಯನ್ನು ಹುಟ್ಟದಿರುವಂತೆ ಮಾಡಬಹುದಾದ ಸಾಧನ ಸಲಕರಣೆಗಳು ವೈದ್ಯ ವಿಜ್ಞಾನದಲ್ಲಿ ಇಂದು ತೀರಾ ಸಾಮಾನ್ಯವಾಗಿವೆ. ಆದರೆ ಸಾವು ಎಂದೆಂದಿಗೂ ಬಾರದಂತೆ ಮಾಡುವ ಯಾವ ಸಾಧನ-ಸಲಕರಣೆಗಳೂ ಸಧ್ಯಕ್ಕೆ ಇಲ್ಲ. ಹೆಚ್ಚೆಂದರೆ ಸಾಯಬಹುದಾದ ಸಮಯವನ್ನು ಅತ್ಯಂತ ತಾತ್ಕಾಲಿಕವಾಗಿ ಮುಂದೂಡಬಹುದಷ್ಟೇ."[೨೦]

ಹಾಗಾಗಿ ಹುಟ್ಟು-ಸಾವುಗಳ ಬಗ್ಗೆ ಇಲ್ಲಿಯವರೆಗೆ ನಡೆದು ಬಂದ ಇತಿಹಾಸವನ್ನು ನೋಡಿದಾಗ 'ಸಾವು' ಹೆಚ್ಚು ಖಚಿತವಾದುದು. ಸಮಾಜದ ಸಮುದಾಯಗಳಲ್ಲಿ ಸಾವಿನ ನಂತರ ಪಡೆಯುವ 'ವಿಧವೆ', 'ವಿಧುರ', 'ತಬ್ಬಲಿ' ಎಂಬ ಸ್ಥಾನಗಳು ಒಂದೇ ರೀತಿಯ ಅರ್ಥವನ್ನು ಪಡೆದಿದ್ದರೂ ಸಹ ಸಾವಿನ ನಂತರ ಪುನರ್ಜನ್ಮದ ಬಗ್ಗೆ ಆಯಾ ಸಮುದಾಯಗಳಿಗೆ ಅವರದೇ ಆದ ಕಲ್ಪನೆ ರೂಪಕೊಟ್ಟು, ಸಂಪ್ರದಾಯಗಳಾಗಿ ಆಚರಣೆಗೆ ತಂದಿರುವುದು ಸರ್ವವಿಧಿತ. ಇಂತಹ ಆಚರಣೆಗಳು ವ್ಯಕ್ತಿಗತವಾಗಿ ನಿಲ್ಲದೆ ಸಾರ್ವತ್ರಿಕವಾಗಿರುವುದರಿಂದ ಇಂದೂ ಸಹ ಮುಂದುವರಿದುಕೊಂಡು ಬರುತ್ತದೆ.

"ಸತ್ತವನ ದೇಹಕ್ಕೆ ಸಲ್ಲಿಸುವ ಕೊನೆಯ ಗೌರವವೇ ಶವಸಂಸ್ಕಾರ. ಆದಾದ ಬಳಿಕ ಸತ್ತವನ ಶ್ರೇಯಸ್ಸಿಗಾಗಿ ಅಥವಾ ಶಾಂತಿಗಾಗಿ ಮಾಡುವ ವಿಧಿವಿಧಾನಗಳು ಉತ್ತರ ಕ್ರಿಯೆ ಇತ್ಯಾದಿ, ಸತ್ತಮೇಲೂ

ಆ ವ್ಯಕ್ತಿಗೆ ಗೌರವ ತೋರುವ ಸಂಕೇತವಾಗಿದೆ."[೨೧] ಸತ್ತ ವ್ಯಕ್ತಿಗೆ ಸರಿಯಾದ ಸಂಸ್ಕಾರಮಾಡದಿದ್ದರೆ ಆತನಿಗೆ ಮೋಕ್ಷ ದೊರೆಯುವುದಿಲ್ಲವೆಂಬ ನಂಬಿಕೆ ಒಂದು ಕಡೆಗಾದರೆ, ಆತ ದುಷ್ಟಶಕ್ತಿಗಳ ರೂಪದಲ್ಲಿ ನಮ್ಮನ್ನು ಮತ್ತೆ ಮತ್ತೆ ಕಾಡಬಹುದೆಂಬ ಭಯ ಇನ್ನೊಂದು ಕಡೆ ಆವರಿಸುತ್ತದೆ. ಹೀಗೆ ಮರಣದ ಬಗೆಗೆ ವಿವಿಧ ಸಮುದಾಯಗಳಲ್ಲಿರುವ ನಂಬಿಕೆಗಳ ಫಲದಿಂದ ಮರಣ ಸಂಸ್ಕಾರಗಳು ಮುಂದುವರಿದುಕೊಂಡು ಬರುತ್ತಿವೆ.

**ಗೋಸಂಗಿಗಳಲ್ಲಿ ಶವಸಂಸ್ಕಾರ**

ಅಲೆಮಾರಿಗಳಾದ ಗೋಸಂಗಿಗಳಲ್ಲಿ ಯಾರಾದರೂ ಸತ್ತರೆ ಸೂತಕವೆಂದು ಭಾವಿಸುತ್ತಾರೆ. ಹೆಣವನ್ನು ಮಣ್ಣುಮಾಡಿ ಬರುವವರೆಗೂ ಸಮುದಾಯದ ಯಾರೊಬ್ಬರು ಒಲೆ ಹಚ್ಚುವಂತಿಲ್ಲ, ಊಟ ಮಾಡುವಂತಿಲ್ಲ. ಈ ಸಾವಿನ ದುಃಖ ಅಂದು ಎಲ್ಲರಿಗೂ ಸೇರಿದ್ದು, ಅಂತ್ಯಕ್ರಿಯೆಯಲ್ಲಿ ಎಲ್ಲರೂ ಪಾಲ್ಗೊಳ್ಳುವರು. ಅಂದು ಸಮುದಾಯದ ಎಲ್ಲರ ಮನೆಯ ನೀರನ್ನು ಹೊರ ಚೆಲ್ಲುವರು. ಅಂದಿನಿಂದ ಸೂತಕ ಕಳೆಯುವವರೆಗೆ ಎಲ್ಲಾ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಸ್ಥಗಿತಗೊಳಿಸುತ್ತಾರೆ. ಇದು ಆ ವ್ಯಕ್ತಿಗೆ ಸಲ್ಲಿಸುವ ಗೌರವವಾಗಿದೆ. ಹೀಗೆ ಇವರು ಯಾವುದೇ ವಿಧಿಕ್ರಮಗಳನ್ನು ಮಾಡಿದರೂ ಇಡೀ ಸಮುದಾಯವೇ ಒಂದು ಕುಟುಂಬ-ದೋಪಾದಿಯಲ್ಲಿ ಪಾಲ್ಗೊಳ್ಳುವುದು ವಿಶೇಷವಾಗಿದೆ.

ಸತ್ತ ವ್ಯಕ್ತಿಯ ದೇಹವನ್ನು ಆತನ ಮಕ್ಕಳು ಅಥವಾ ಸಂಬಂಧಿಕರು ಡೇರಾದಿಂದ ಹೊರಗಿಟ್ಟು ತಮ್ಮ ಅಕ್ಕಪಕ್ಕದ ಸಂಬಂಧಿಕರಿಗೆ ಹೇಳಿ ಕಳುಹಿಸುತ್ತಾರೆ. ಇತರೆ ಸಮುದಾಯಗಳಲ್ಲಿರುವಂತೆ ಹೆಣಕ್ಕೆ ಸ್ನಾನ ಮಾಡಿಸುವ ಪದ್ಧತಿ ಇವರಲ್ಲಿಲ್ಲ. ಹೆಣದ ಬಾಯಲ್ಲಿ ಬೆಳ್ಳಿ ತುಂಡನ್ನು ಹಾಕಿ ಜೋಳದ ಅಥವಾ ಗೋದಿಯ ಹಸಿಹಿಟ್ಟನ್ನು ನೀರಿನಲ್ಲಿ ಕಲಸಿ ಉಂಡೆಮಾಡಿ ಎದೆಯ ಮೇಲಿಟ್ಟು ಅದರ ಮೇಲೆ ಎರಡೂ ಕೈಗಳನ್ನಿಟ್ಟು ದಾರದಿಂದ ಕಟ್ಟಿದನಂತರ ಎರಡೂ ಕಾಲುಗಳ ಹೆಬ್ಬೆಟ್ಟುಗಳನ್ನು ಕೂಡಿಸಿ ದಾರದಿಂದ ಕಟ್ಟುವರು. ಆಮೇಲೆ ಹೆಣವನ್ನು ಒಂದು ಕೌದಿಯಲ್ಲಿ ಸುತ್ತಿ ಅದರ ಮೇಲೆ ಒಂದು ದಪ್ಪನಾದ ಬಿದಿರಿನ ಕೋಲನ್ನಿಟ್ಟು, ಕೌದಿಯಲ್ಲಿ ಸುತ್ತಿದ ಹೆಣವನ್ನು ಕೋಲಿಗೆ ಸೇರಿಸಿ ಬಿಗಿಯುವರು. ಹೀಗೆ ಬಿಗಿದನಂತರ ಹಿಂದೊಬ್ಬ, ಮುಂದೊಬ್ಬ ಹೊತ್ತುಕೊಂಡು ಊರಹೊರಗಿನ ನಿರ್ಜನ ಪ್ರದೇಶದಲ್ಲಿ ಹುಗಿಯುವರು. ಹೀಗೆ ಹುಗಿದನಂತರ ಹೆಣಕ್ಕೆ ಸುತ್ತಿದ ಕೌದಿ ಹಾಗೂ ಕಟ್ಟಿಗೆಯನ್ನು ಅಲ್ಲೇ ಸುಟ್ಟುಬರುವರು. ಆದರೆ ಇತ್ತೀಚೆಗೆ ಇತರರಂತೆ ಚೌಕಾಕಾರದ ಚಟ್ಟವನ್ನು ತಯಾರಿಸಿ ಹೆಣವನ್ನು ಹೊತ್ತೊಯ್ಯುವರು. ಚೌಕಾಕಾರದ ಚಟ್ಟದಲ್ಲಿ ಹೆಣವನ್ನು ಹೂಳಲು ಒಯ್ಯುವಾಗ ದಾರಿಯುದ್ದಕ್ಕೂ ಸಾಸಿವೆ ಚಲ್ಲುವುದು ವಿಶೇಷ (ಸಾಸಿವೆಗೆ ಇವರು 'ರಾಯಿ' ಎಂದು ಕರೆಯುವರು.) ಆದರೆ ಇದಕ್ಕೂ ಭಿನ್ನವಾಗಿ ಇತರೆ ಬುಡಕಟ್ಟು ಸಮುದಾಯಗಳಲ್ಲಿ ರಾಗಿ, ನವಣೆ, ಜೋಳ ಇನ್ನಿತರೆ ಧಾನ್ಯ ಚಲ್ಲುವುದನ್ನು ನಾವಿಲ್ಲಿ ನೆನೆಯಬಹುದು.

ಹಿಂದೆ ಅಲೆಮಾರಿಗಳಿದ್ದಾಗ ಗೋಸಂಗಿಗಳು ಸ್ಮಶಾನದಲ್ಲಿ ಹೆಣಗಳನ್ನು ಹೂಳುತ್ತಿರಲಿಲ್ಲ. ಅವರು ಬೀಡು ಬಿಟ್ಟ ಪ್ರದೇಶದ ಸ್ವಲ್ಪದೂರದಲ್ಲಿ ಹೆಣವನ್ನು ಹೂತು ಮುಂದಿನ ಊರಿಗೆ ಪಯಣಿಸುತ್ತಿದ್ದರು.

ಆದರೆ ಇತ್ತೀಚಿಗೆ ಅರೆಅಲೆಮಾರಿಗಳಾಗಿ ನಗರ ಪ್ರದೇಶಗಳಲ್ಲಿ ಹೆಚ್ಚಾಗಿ ವಾಸಿಸುತ್ತಿರುವುದರಿಂದ ಸ್ಮಶಾನಗಳಲ್ಲೆ ಹೆಣಗಳನ್ನು ಹೊಳುವುದು ಕಂಡುಬರುತ್ತದೆ. ಸಾಮಾನ್ಯವಾಗಿ ಹೆಣವನ್ನು ಹೂಳುವುದಕ್ಕೆ ಬೇಕಾದ ಕುಣಿಯನ್ನು ತೆಗೆಯಲು ಇವರಲ್ಲೇ ನಾಲ್ಕು ಜನ ಮುಂದಾಗುತ್ತಾರೆ. ಸತ್ತ ಸ್ಥಳದಿಂದ ಹೆಣವನ್ನು ತೆಗೆಯುವುದಕ್ಕಿಂತ ಮುಂಚಿತವಾಗಿ ನಾಲ್ಕು ಜನ ಹೋಗಿ ಹೆಣ ಹೂಳಲು ಬೇಕಾದ ಕುಣಿಯನ್ನು ತೆಗೆಯಲು ಒಂದು ಸ್ಥಳವನ್ನು ಆಯ್ಕೆಮಾಡಿ, ಕುಣಿ ತೆಗೆದು ಹೇಳಿ ಕಳುಹಿಸುವರು. ನಂತರ ಹೆಣವನ್ನು ಹೂಳುವ ಜಾಗಕ್ಕೆ ಹೊತ್ತುಕೊಂಡು ಹೋಗುವಾಗ ಸತ್ತವ್ಯಕ್ತಿಯ ಹಿರಿಯಮಗ ಇಲ್ಲವೆ, ಕಿರಿಯಮಗ ನೀರು ತುಂಬಿದ ಮಡಿಕೆಯನ್ನು ಕೈಯಲ್ಲಿ ಹಿಡಿದುಕೊಂಡು ಶವದ ಹಿಂದೆ ಹೋಗುವನು. (ಒಂದು ವೇಳೆ ಮಗನು ಸಣ್ಣವನಿದ್ದರೆ ಆತನ ಕೈಯನ್ನು ಮಡಿಕೆಗೆ ಮುಟ್ಟಿಸಿ ಬೇರೆಯವರು ಹಿಡಿದುಕೊಂಡು ಹೋಗುವರು.) ಒಂದು ವೇಳೆ ಸತ್ತ ವ್ಯಕ್ತಿಗೆ ಮಕ್ಕಳಿಲ್ಲದಿದ್ದರೆ ಆತನ ರಕ್ತಸಂಬಂಧಿಕರ್‍ಯಾರಾದರೂ ನೀರು ತುಂಬಿದ ಮಡಿಕೆಯನ್ನು ಶವದ ಹಿಂದೆ ಹಿಡಿದುಕೊಂಡು ಹೋಗುವನು. ಹೋಗುವಾಗ ಮೂರು ದಾರಿಗಳು ಕಲೆಯುವ ಒಂದು ಸ್ಥಳದಲ್ಲಿ ನೀರಿನ ಮಡಿಕೆಯನ್ನು ಅಲ್ಲೆ ಒಗೆದು ಮುಂದೆ ಹೋಗುವ ವಿಶಿಷ್ಟ ಪದ್ಧತಿ ಗೋಸಂಗಿಗಳಲ್ಲಿದೆ. ಹೆಣವನ್ನು ಹೂಳುವ ಸ್ಥಳಕ್ಕೆ ತಂದು ಗುಂಡಿಯ ಪಕ್ಕಕ್ಕೆ ಇಟ್ಟು ಹೆಣವನ್ನು ಬೆತ್ತಲೆಮಾಡಿ (ಇತ್ತೀಚಿಗೆ ಕೆಲವರು ಹೆಣಕ್ಕೆ ಬಿಳಿ ಬಟ್ಟೆಯನ್ನು ಸುತ್ತಿಹೂಳುವರು) ಉತ್ತರಕ್ಕೆ ಕಾಲು, ದಕ್ಷಿಣಕ್ಕೆ ತಲೆ ಬರುವಂತೆ ಮಾಡಿ ಗುಂಡಿಯಲ್ಲಿ ಮಲಗಿಸುವರು. ಕೆಲವರು ಶವದ ಪಕ್ಕ ಆತನ ಬದುಕಿದ್ದಾಗ ಬಳಸುತ್ತಿದ ವಸ್ತುಗಳನ್ನಿಟ್ಟು ಮಣ್ಣು ಮಾಡುತ್ತಿದ್ದುದಾಗಿ ತಿಳಿದುಬರುತ್ತದೆ. ನಂತರ ಬಂದಂತಹ ಸಂಬಂಧಿಕರೆಲ್ಲರು ಒಂದೊಂದು ಹಿಡಿ ಮಣ್ಣನ್ನು ಹಾಕುವರು. ಹೀಗೆ ಮಣ್ಣನ್ನು ಹಾಕುವಾಗ 'ಮಾರ ಹತ್ರಿ ಮಾತಿ' (ನನ್ನ ಕೈ ಮಣ್ಣು) ಎಂದು ಹೇಳಿ ಮಣ್ಣನ್ನು ಹಾಕುವರು. ಕೆಲವೊಮ್ಮೆ ಸತ್ತವ್ಯಕ್ತಿಯ ಸಂಬಂಧಿಕರು ಬರಲಾಗದಿದ್ದಾಗ ಆತನ ಹೆಸರಿನಲ್ಲಿ ಬೇರೆಯವರು ಮಣ್ಣುಕೊಡುತ್ತಾರೆ. ಹೀಗೆ ಕೊಡುವಾಗ 'ಮಾರ ಬಾಯಿರಿ ನಾವರಿ ಮಾತಿ' (ನನ್ನ ಅಣ್ಣನ ಕೈ ಮಣ್ಣು) ಎಂದು ಹೇಳಿ ಒಂದು ಹಿಡಿ ಮಣ್ಣನ್ನು ಹಾಕುವರು. (ಅಲೆಮಾರಿಗಳಾಗಿರುವುದರಿಂದ ವಿಷಯ ತಿಳಿಯಲು ವಿಳಂಬವಾಗಿ ಮಣ್ಣಿನ ಕಾರ್ಯಕ್ಕೆ ಬರಲಾಗದೇ ಇದ್ದಾಗ ಆತನ ಹೆಸರಿನಲ್ಲಿ ಬೇರೆಯವರು ಈ ರೀತಿ ಮಣ್ಣು ಕೊಡುತ್ತಿರಬೇಕು.) ಹೀಗೆ ಎಲ್ಲರೂ ತಮ್ಮ ಪಾಲಿನ ಮಣ್ಣನ್ನು ಹಾಕಿದ ನಂತರ ಸಂಪೂರ್ಣ ಮಣ್ಣನ್ನು ಎಳೆದು ಮುಚ್ಚಿ ಗುಡ್ಡೆಮಾಡಿ, ನಾಯಿನರಿಗಳು ಕೆದುರದಂತೆ ಅದರ ಮೇಲೆ ಬಂಡೆಯನ್ನು ಹಾಕುವರು. ಇದೇ ಸಂದರ್ಭದಲ್ಲಿ ಸತ್ತ ವ್ಯಕ್ತಿಗೆ ಹೆಂಡತಿಯೇನಾದರೂ ಇದ್ದರೆ ಸಮಾಧಿಯ ಬಳಿ ಆಕೆಯ ಬಳೆಯನ್ನು ಒಡೆದು ತಾಳಿ, ಕುಂಕುಮ, ಕಾಲುಂಗರ, ಇನ್ನಿತರೆ ಮುತ್ತೈದೆ ಆಭರಣಗಳನ್ನು ತೆಗೆಯುವರು. ಅಂದಿನಿಂದ ಆಕೆಯನ್ನು ಸಮುದಾಯದಲ್ಲಿ 'ವಿಧವೆ' ಎಂದು ಪರಿಗಣಿಸುವರು. ಈಕೆ ಮೂರುದಿನದ ಕಾರ್ಯ ಮುಗಿಯುವವರೆಗೆ ಯಾರಿಗೂ ಕಾಣುವಂತಿಲ್ಲ. ಹನ್ನೆರಡನೇ ದಿನದಲ್ಲಿ ನೀರು ಮುಟ್ಟಿಸುವ ಕಾರ್ಯಮುಗಿದ ಮೇಲೆ ಎಲ್ಲಿ ಬೇಕಾದರೂ ಹೋಗಬಹುದು. ಆದರೆ ಸಮುದಾಯದಲ್ಲಿ ನಡೆಯುವ ಯಾವ ಶುಭಕಾರ್ಯಗಳಲ್ಲಿ ಆಕೆ ಭಾಗವಹಿಸುವಂತಿಲ್ಲ.

ಒಟ್ಟಾರೆ ಸಮುದಾಯದ ಯಾವ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಈಕೆಗೆ ಸ್ಥಾನಮಾನವಿರುವುದಿಲ್ಲ.

ಹೆಣವನ್ನು ಹೂತನಂತರ ಯಾರು ಹಿಂತುರುಗಿ ನೋಡದಂತೆ ಬರುವರು. ಹೀಗೆ ಬರುವಾಗ ಹತ್ತಿರದ ಕೆರೆಯಲ್ಲೋ, ಹಳ್ಳದಲ್ಲೋ ಅಥವಾ ಬಾವಿಯ ಹತ್ತಿರ ಕೈಕಾಲು ತೊಳೆದು ಇಲ್ಲವೆ ಸ್ನಾನಮಾಡಿ ಬರುವರು. ಸ್ನಾನಮಾಡಿ ಮನೆಗೆ ಬರುವಾಗ ದಾರಿಯ ಮಧ್ಯದಲ್ಲಿ ತಂಗಡಿ ಗಿಡವನ್ನು ತುಳಿದು ಮೂರು ಚಿಕ್ಕ ಕಲ್ಲುಗಳನ್ನು ತೆಗೆದುಕೊಂಡು ಎಡಗಾಲನ್ನು ಮೇಲೆತ್ತಿ ಕೆಳಗಿನಿಂದ ಹಿಂದಕ್ಕೆ ಒಗೆದು ಬರುವರು. ಶವಸಂಸ್ಕಾರಕ್ಕೆ ಹೋದ ಎಲ್ಲರೂ ಸತ್ತ ವ್ಯಕ್ತಿಯ ಮನೆಗೆ ನೇರವಾಗಿ ಬಂದು ಕಾಲಿಗೆ ನೀರನ್ನು ಹಾಕಿಕೊಂಡು ಸತ್ತವ್ಯಕ್ತಿಯ ಮನೆಯವರು ಕೊಟ್ಟ ಬೀಡಿಯನ್ನು ಎಲ್ಲರೂ ಕಡ್ಡಾಯವಾಗಿ ಸೆದಬೇಕು. ಬೀಡಿ ಅಭ್ಯಾಸವಿಲ್ಲದವರು ಎಲೆಅಡಿಕೆ ಹಾಕಿಕೊಳ್ಳಬಹುದು. ಬೀಡಿ ಸೇದಿದ ನಂತರ ತಮ್ಮ ಸಮುದಾಯದ ದೇವರುಗಳಿಗೆ ಕೈಮುಗಿದು ತಮ್ಮ ತಮ್ಮ ಡೇರಾ/ಮನೆಗಳಿಗೆ ಹೋಗಬಹುದು.

ಅದೇ ದಿನ ಸಂಜೆ ಒಣಗಿದ ಸೆಗಣಿಯ ಕುಳ್ಳನ್ನು ಆರಿಸಿ ತಂದು ಸುಟ್ಟು ಆ ಸುಟ್ಟ ಬೂದಿಯನ್ನು ನೀರಿನಿಂದ ಗಟ್ಟಿಯಾಗಿ ಕಲೆಸಿ ಸತ್ತವ್ಯಕ್ತಿಯ ಡೇರಾ ಮನೆಯ ಮುಂದೆ ಚಪ್ಪಟೆಯಾಗಿಟ್ಟು ಅದರೆ ಮೇಲೆ ಪರಾತನ್ನು ಬೋರಲಾಕುವರು. ಹೀಗೆ ಒಂದು ರಾತ್ರಿ ಕಳೆದ ನಂತರ ಬೆಳಿಗ್ಗೆ ಎದ್ದು ಆ ಗೋಪುರವನ್ನು ನೋಡಿ ಜನ್ಮಾಂತರವನ್ನು ಗುರುತಿಸುವರು. ಅಂದರೆ ಆ ಗೋಪುರದಲ್ಲಿ ಗುರುತುಗಳೇನಾದರೂ ಬಿದ್ದಿದ್ದರೆ. ಯಾವ ಪ್ರಾಣಿಯ ಆತ್ಮಕ್ಕೆ ಹೋಗಿ ಸೇರಿಕೊಂಡಿದ್ದಾನೆಂದು ಊಹಿಸುವರು. ಒಂದು ವೇಳೆ ಗುರುತುಗಳು ಇಲ್ಲದೇ ಇದ್ದರೆ ದೆವ್ವವಾಗಿ ಕಾಡುತ್ತಾನೆಂದು ನಂಬುವರು.

ಗೋಸಂಗಿಗಳಲ್ಲಿ ಮಕ್ಕಳೇನಾದರೂ ಸತ್ತರೆ ಅಥವಾ ಮದುವೆಯಾಗದವರೇನಾದರೂ ಸತ್ತರೆ ಮೂರು, ಹನ್ನೆರಡು ಹಾಗೂ ವರ್ಷದ ಕಾರ್ಯಗಳನ್ನು ಮಾಡುವುದಿಲ್ಲ. ಜೊತೆಗೆ ಇತರೆ ಸಮುದಾಯಗಳಲ್ಲಿರುವಂತೆ ಮದುವೆಯಾಗದ ವ್ಯಕ್ತಿ ಸತ್ತರೆ ಬೋರಲಾಕುವ (ಮಕಾಡೆ ಮಲಗಿಸುವ) ಪದ್ಧತಿ ಇವರಲ್ಲಿರುವುದು ಕಂಡುಬರುವುದಿಲ್ಲ. ಯಾರೇ ಸಾಯಲಿ ಎಲ್ಲರನ್ನೂ ಅಂಗಾತ ಮಲಗಿಸಿ ಮಣ್ಣು ಮಾಡುತ್ತಾರೆ. ತೊನ್ನು ಇದ್ದವರು ಸತ್ತರೆ ಸುಡುವ ಪದ್ಧತಿಯಾಗಲಿ, ಮತ್ತು ಗರ್ಭಿಣಿ ಸ್ತ್ರೀಯರು ಸತ್ತರೆ ಮಗುವನ್ನು ಹೊರತೆಗೆದು ಹೂಳುವ ಇಲ್ಲವೆ ಸುಡುವ ಪದ್ಧತಿಯಾಗಲಿ ಇವರಲ್ಲಿರುವುದು ಕಂಡುಬರುತ್ತಿಲ್ಲ. ಅಲೆಮಾರಿಗಳಾದ ಇವರಲ್ಲಿ ತೊನ್ನು ಇದ್ದವರು, ಗರ್ಭಿಣಿಯರು ಸತ್ತಾಗ ಸುಡದಿದ್ದರೆ ಮಳೆ ಬರುವುದಿಲ್ಲ ಎಂಬ ನಂಬಿಕೆಯು ಸಹ ಇವರಲ್ಲಿಲ್ಲ. ಇದಕ್ಕೆ ಸರಿಯಾದ ಕಾರಣಗಳು ಸಹ ವಕ್ತೃಗಳಿಂದ ತಿಳಿದುಬರುತ್ತಿಲ್ಲ. ಒಟ್ಟಾರೆ ಗೋಸಂಗಿಗಳು ಸತ್ತವ್ಯಕ್ತಿಗೆ ಸಲ್ಲಿಸುವ ಅಂತಿಮ ಗೌರವವಾದ ಶವಸಂಸ್ಕಾರವನ್ನು ತಮ್ಮದೇ ಆದ ನಂಬಿಕೆ ನಿಷೇದಗಳ ಹಿನ್ನೆಲೆಯಲ್ಲಿ ನಡೆಸಿಕೊಂಡು ಬರುತ್ತಿರುವುದು ಕಂಡುಬರುತ್ತಿದೆ.

**ಮೂರನೇ ದಿನದ ಕಾರ್ಯ (ತೀನ್ ದಿನರೋ ತಿಥಿ) :** ವ್ಯಕ್ತಿ ಸತ್ತ ಮೂರನೇ ದಿನದಲ್ಲಿ ಮಾಡುವ ಕಾರ್ಯಕ್ಕೆ 'ತೀನ್ ದಿನರೋ ತಿಜಿಯೋ' (ಮೂರನೇ ದಿನ ನೀರು ಕುಡಿಸುವುದು) ಎಂದು ಕರೆಯುವರು.

ಅಂದು ಒಂದು ಗುಬ್ಬಿಯನ್ನು ಬೇಟೆಯಾಡಿ ತಂದು ಅದರ ಜೊತೆಗೆ ಹೆಸರು ಕಾಳಿನ ಗುಗ್ಗರಿ, ಅನ್ನವನ್ನು ತೆಗೆದುಕೊಂಡು ನೀರಿರುವ ಸ್ಥಳಕ್ಕೆ (ಹಿಂದೆ ಹಳ್ಳ ಅಥವಾ ಸಮೀಪದ ಕೆರೆಗೆ) ಹೋಗಿ ಅಲ್ಲಿ ಚಿಕ್ಕದಾದ ಹೊರತಿಯನ್ನು ತೋಡಿ ಅದರ ಪಕ್ಕ ಮೂರು ಚಿಕ್ಕ ಕುಡಿಕೆಗಳನ್ನು ಇಟ್ಟು ಅದಕ್ಕೆ ಐದು ಸುತ್ತು ದಾರವನ್ನು ಸುತ್ತುತ್ತಾರೆ. ಹೀಗೆ ಮಾಡಿದ ನಂತರ ಬಂದ ಬಂಧುಗಳೆಲ್ಲ ಗರಿಕೆ ಹುಲ್ಲಿನಿಂದ ಮಾಡಿದ ಉಂಗುರವನ್ನು ಎಡಗೈ ಕಿರುಬೆರಳಿಗೆ ಹಾಕಿಕೊಂಡು ಅನ್ನ, ಗುಗ್ಗರಿ ಮತ್ತು ಸ್ವಲ್ಪ ಗುಬ್ಬಿ ಮರಿಯ ಮಾಂಸದ ತುಂಡನ್ನು ಬೊಗಸೆಯಲ್ಲಿ ಹಿಡಿದು, ಐದು ಸಲ ಅದನ್ನು ನೀರಿನಲ್ಲಿ ಅದ್ದಿ ಹೊರತೆಗದು 'ಮಾರ ನವುರೋ ಪಾಣೀ ಪೀ' (ನನ್ನ ಕೈ (ಹೆಸರಿನ) ನೀರು ಕುಡಿ) ಎಂದು ಹೇಳುವುದು ವಾಡಿಕೆ. ಒಂದು ವೇಳೆ ಈ ಕಾರ್ಯಕ್ಕೆ ಸಂಬಧಿಕರ್‍ಯಾರಾದರೂ ಬರಲು ಸಾಧ್ಯವಾಗದೇ ಇದ್ದರೆ ಬೇರೆಯವರು ಆತನ ಹೆಸರೇಳಿ 'ಮಾರ ಬಾಯಿರಾ ನವುರೋ ಪಾಣೀ ಪೀ' (ನನ್ನ ತಮ್ಮನವರ ಕೈ ನೀರು ಕುಡಿ, ನನ್ನ ಅಣ್ಣನವರ ಕೈ ನೀರು ಕುಡಿ) ಎಂದು ಹೇಳಿ ನೀರು ಕುಡಿಸುತ್ತಾರೆ. ಹೀಗೆ ಮಾಡಿದರೆ ಸತ್ತ ವ್ಯಕ್ತಿಗೆ ತೃಪ್ತಿಯಾಗುತ್ತದೆ. ಇಲ್ಲದಿದ್ದರೆ ದೆವ್ವ, ಭೂತವಾಗಿ ಕಾಡುತ್ತಾನೆಂಬ ನಂಬಿಕೆ ಇವರಲ್ಲಿದೆ. ಅದೇ ದಿನ ಹಸಿಮೆಣಸಿನಕಾಯಿಯನ್ನು ಚೆನ್ನಾಗಿ ಅರೆದು ಚಟ್ನಿಮಾಡಿ ಎಲ್ಲಾರ ಡೇರಾ/ಮನೆಗಳಿಗೆ ಹಚ್ಚಿ ಬರುವರು. ಅಲ್ಲಿಗೆ ಒಂದು ಹಂತದ ಸೂತಕ ಕಳೆದಂತೆ ಅಂದಿನಿಂದ ಮಾಂಸದ ಊಟ ಮಾಡಲು ಅನುಮತಿ ನೀಡುತ್ತಾರೆ.

**ತೇಲುತಾರೆ (ಎಣ್ಣೆ ಇಳಿಸೋದು), ಕಾಂದಾ ಉತಾರೆ (ಹೆಗಲಿಳಿಸೋದು) :** ಮೂರನೇ ದಿನದ ಕಾರ್ಯದಂದು ಮಾಡುವ ಇನ್ನೊಂದು ವಿಶಿಷ್ಟ ಕಾರ್ಯವೆಂದರೆ ಎಣ್ಣೆ ಇಳಿಸೋದು ಇದಕ್ಕೆ ಹೆಗಲಿಳಿಸೋದು ಎಂತಲೂ ಕರೆಯುವರು. ಅಂದರೆ ಅಂದು ಶವವನ್ನು ಹೊತ್ತ ವ್ಯಕ್ತಿಗಳನ್ನು ಕರೆಯಿಸಿ ಅವರ ಮುಂದೆ ಬಟ್ಟಲಲ್ಲಿ ಎಣ್ಣೆಯಲ್ಲಿ ಇಡುವರು. ಆಗ ಹೆಣ ಹೊತ್ತ ವ್ಯಕ್ತಿಗಳು ತನ್ನ ಎರಡು ಹೆಬ್ಬಟ್ಟುಗಳನ್ನು ಬಟ್ಟಲಿನಲ್ಲಿನ ಎಣ್ಣೆಯನ್ನು ಅದ್ದಿ ತಲೆ, ಭುಜ ಹಾಗೂ ಮೊಳಕಾಲುಗಳಿಗೆ ಹಚ್ಚಿಕೊಳ್ಳುವನು. ಹೀಗೆ ಮಾಡಿದ ಮೇಲೆ ಮುಟ್ಟು ಬಿಟ್ಟಂತಾಗುತ್ತದೆ. ಅಂದಿನಿಂದ ಹೆಣ ಹೊತ್ತ ವ್ಯಕ್ತಿಗೆ ಯಾವುದೇ ನಿರ್ಬಂಧಗಳಿರುವುದಿಲ್ಲ

ಮೂರನೇ ದಿನದ ಕಾರ್ಯದಂದು ಸತ್ತವ್ಯಕ್ತಿಯ ಸಮಾಧಿಯ ಮೇಲೆ ಆತನಿಗೆ ಇಷ್ಟವಾದ ತಿನಿಸುಗಳನ್ನು ಇಟ್ಟು ಕಾಗೆಗಳನ್ನು ಕರೆಯುವರು. ಆಗ ಕಾಗೆಗಳು ಬಂದು ಗುಡ್ಡೆಯ ಮೇಲಿನ ಎಡೆ ತಿಂದರೆ ಅವನು/ಅವಳು, ಪುಣ್ಯವಂತನು ಎಂದು ಇಂತಹ ವ್ಯಕ್ತಿಗಳು ಸ್ವರ್ಗ ಸೇರುತ್ತಾರೆಂಬ ನಂಬಿಕೆ ಇವರಲ್ಲಿದೆ. ಒಂದು ವೇಳೆ ಕಾಗೆಗಳು ಎಡೆಯನ್ನು ಮುಟ್ಟದಿದ್ದರೆ ಆತ ಕರ್ಮಗೇಡಿ ಮತ್ತೆ ನಮ್ಮನ್ನು ಕಾಡುತ್ತಾನೆ. ಅವನಿಗಿನ್ನೂ ಬದುಕುವ ಆಸೆ ಇತ್ತೆಂದು, ದೆವ್ವ, ಭೂತವಾಗಿ ಕಾಡುತ್ತಾನೆಂಬ ಭಯ ಇವರಲ್ಲುಂಟಾಗುತ್ತದೆ. ಹೀಗೆ ಸತ್ತ ವ್ಯಕ್ತಿಗೆ ಮಾಡುವ ಕಾರ್ಯಗಳು ವಿವಿಧ ನಂಬಿಕೆಗಳ ಹಿನ್ನೆಲೆಯಲ್ಲಿ ರೂಪಗೊಂಡು ಇಂದಿಗೂ ಸಹ ಆಚರಣೆಯಲ್ಲಿರುವುದು ವಿಶೇಷ.

**ಹನ್ನೆರಡನೆ ದಿನದ ಕಾರ್ಯ :** ಶವ ಸಂಸ್ಕಾರ ಆದ ಹನ್ನೆರಡನೇ ದಿನ ಮಾಡುವ ಕಾರ್ಯಕ್ಕೆ 'ಬಾರಾದನ್ ರೋ ಪಾಣಿ' (ಹನ್ನೆರಡನೆ ದಿನದಲ್ಲಿ ನೀರು ಕುಡಿಸುವುದು) ಎಂದು ಕರೆಯುವರು. ಅಂದು ನೀರಿರುವ ಸ್ಥಳಕ್ಕೆ (ಹಳ್ಳಿ ಅಥವಾ ಬಾವಿಗೆ) ಹೋಗಿ ಚಿಕ್ಕ ಒರತಿಯನ್ನು ತೋಡಿ ಅದರ ಪಕ್ಕ ಐದು ಚಿಕ್ಕ ಚಿಕ್ಕ ಕುಡಿಕೆಗಳನ್ನಿಟ್ಟು (ಚೌಕಾಕಾರವಾಗಿ ನಾಲ್ಕು ಮಧ್ಯದಲ್ಲಿ ಒಂದು) ಅದಕ್ಕೆ ಐದು ಸುತ್ತು ಸೂತ್ರದ ದಾರವನ್ನು ಸುತ್ತುತ್ತಾರೆ. ಹೀಗೆ ಮಾಡಿದ ನಂತರ ಬಂದ ಬಂಧುಗಳೆಲ್ಲ ಅನ್ನ ಹಾಗೂ ಕುದಿಸಿದ ಹೆಸರುಕಾಳು ಗುಗ್ಗರಿಯನ್ನು ಸ್ವಲ್ಪ ಸ್ವಲ್ಪ ಕೈಯಲ್ಲಿ ಹಿಡಿದು ಐದು ಸಲ ಅದನ್ನು ನೀರಿನಲ್ಲಿ ಅದ್ದಿ ಹೊರತೆಗೆದು 'ಮಾರ ನವುರೋ ಪಾಣೀ ಪೀ' (ನನ್ನ ಕೈ ನೀರು ಕುಡಿ) ಎಂದು ಹೇಳುವರು. ಕೆಲವೊಮ್ಮೆ ಸತ್ತ ವ್ಯಕ್ತಿಯ ಹತ್ತಿರದ ಸಂಬಂಧಿಗಳ್ಯಾರಾದರು ಬರಲಾಗದಿದ್ದರೆ ಅವರ ಹೆಸರೇಳಿ ಬೇರೆಯವರು ನೀರು ಕುಡಿಸುವ ಕಾರ್ಯವನ್ನು ಮಾಡಬಹುದು. ಆಗ 'ಮಾರ ಬಾಯಿರಾ ನವುರೋ ಪಾಣಿ ಪೀ' (ನನ್ನ ತಮ್ಮನವರ ಕೈ ನೀರು ಕುಡಿ, ನನ್ನ ಅಣ್ಣನವರ ಕೈ ನೀರು ಕುಡಿ) ಎಂದು ಹೇಳಿ ನೀರು ಕುಡಿಸುವುದು ರೂಢಿಯಲ್ಲಿದೆ. ಅಲೆಮಾರಿಗಳಾಗಿರುವುದರಿಂದ ಸರಿಯಾದ ಸಮಯಕ್ಕೆ ಸತ್ತ ಸುದ್ಧಿ ತಿಳಿಯದೇ ಇಂತಹ ಕಾರ್ಯಗಳಲ್ಲಿ ಭಾಗವಹಿಸಲು ಸಾಧ್ಯವಾಗುವುದಿಲ್ಲ. ಆ ಕಾರಣಕ್ಕಾಗಿ ಬರಲಾಗದ ವ್ಯಕ್ತಿಯ ಹೆಸರಿನಲ್ಲಿ ಬೇರೆಯವರು ನೀರು ಕುಡಿಸುವ ಪದ್ಧತಿ ರೂಢಿಗೆ ಬಂದಿರಬೇಕು. ಹೀಗೆ ಗೋಸಂಗಿಗಳು ವ್ಯಕ್ತಿ ಸತ್ತ ಹನ್ನೆರಡನೇ ದಿನದಂದು ಆತನ ಆತ್ಮಕ್ಕೆ ಶಾಂತಿ ಸಿಗಲೆಂದು ಪ್ರಾರ್ಥಿಸುವ ಕಾರ್ಯ ಈಗಲೂ ಸಹ ಆಚರಣೆಯಲ್ಲಿರುವುದು ಕಂಡುಬರುತ್ತದೆ.

**ವರ್ಷದ ಕಾರ್ಯ :** ಇದು ವ್ಯಕ್ತಿ ಸತ್ತು ವರ್ಷ ಕಳೆದು ನಂತರ ಮಾಡುವ ಕಾರ್ಯ. ಇದಕ್ಕೆ ಅವರು 'ವರಸ್ ರೇ ಪಾಣಿ' (ವರ್ಷದ ನೀರು) ಎಂದು ಕರೆಯುವರು. ಅಂದರೆ ವ್ಯಕ್ತಿ ಸತ್ತು ವರ್ಷ ಕಳೆದ ನಂತರ ನೀರು ಕುಡಿಸುವ ಕಾರ್ಯ ಇದಾಗಿದೆ. ಇದು ಆತನಿಗೆ ಸಲ್ಲಿಸುವ ಅಂತಿಮ ಗೌರವವಾಗಿರುತ್ತದೆ. (ಕೆಲವು ಸ್ಥಿತಿವಂತರು ಸತ್ತ ವ್ಯಕ್ತಿಯ ಹೆಸರಿನಲ್ಲಿ ಪ್ರತಿವರ್ಷವೂ ಈ ಕಾರ್ಯಮಾಡುತ್ತಾರೆ) ಅಂದು ಈ ಕಾರ್ಯಕ್ಕೆ ಬಂಧುಬಾಂಧವರನ್ನೆಲ್ಲ ಕರೆಕಳುಹಿಸುವರು. ಈ ಸಂದರ್ಭದಲ್ಲಿ ಸತ್ತವ್ಯಕ್ತಿಯ ಭಾವಚಿತ್ರವನ್ನಿಟ್ಟು, ಪೂಜೆಮಾಡಿ, ಅನ್ನ ಹಾಗೂ ಹೆಸರು ಕಾಳಿನ ಗುಗ್ಗರಿ, ಪಾಯಸವನ್ನು ಎಡೆಮಾಡಿ, ಬಂದ ಭಾಂದವರಿಗೆಲ್ಲ ಸಿಹಿಯೂಟ ಹಾಕಿಸುತ್ತಾರೆ. ಈ ಕಾರ್ಯಕ್ಕೆ ಬಂದ ಬಂಧುಗಳೆಲ್ಲ ಸತ್ತ ವ್ಯಕ್ತಿಯ ಕುಟುಂಬದವರಿಗೆ ತಮ್ಮ ಶಕ್ತ್ಯಾನುಸಾರ ಕಾಣಿಕೆಯನ್ನು ನೀಡುವರು.

ಇದೇ ಸಂದರ್ಭದಲ್ಲಿ 'ವರಸ್ ಮೇ ತಾರಿ ಚೋಡೆ' (ವರ್ಷದ ದಿನ ನಕ್ಷತ್ರ ಬಿಡಿಸೋದು) ಎಂದು ವಿಶಿಷ್ಟ ಆಚರಣೆಯೊಂದು ನಡೆಯುತ್ತದೆ. ಅಂದರೆ ಸತ್ತ ವ್ಯಕ್ತಿಯ ಕುಟುಂಬದ ಸದಸ್ಯರೊಬ್ಬರು ಆತ ಸತ್ತ ದಿನದಂದು ವರ್ಷ ಕಳೆಯುವವರೆಗೆ ತಾರೆ ನಕ್ಷತ್ರಗಳನ್ನು ನೋಡಿಯೋ ಊಟ ಮಾಡಬೇಕು. ಆಕಾಶದಲ್ಲಿ ನಕ್ಷತ್ರಗಳು ಕಾಣದಿದ್ದರೆ ಅಂದು ಊಟಮಾಡುವಂತಿಲ್ಲ. ಹೀಗೆ ವರ್ಷಪೂರ್ತಿ ತಾರೆಗಳನ್ನು ನೋಡಿದ ನಂತರವೇ ಊಟಮಾಡುವ ಪದ್ಧತಿಯನ್ನು ಅನುಸರಿಸಿಕೊಂಡು ಬರುತ್ತಿದ್ದು, ವರ್ಷದ ಕಾರ್ಯ ಮುಗಿದ ನಂತರ ಅಲ್ಲಿಗೆ ತಾರೆಗಳನ್ನು ನೋಡಿ ಊಟ ಮಾಡುವ ಪದ್ಧತಿಯು ಮುಗಿದಂತೆ ಇದಕ್ಕೆ

ಇವರು 'ವರಸ್ ಮೇ ತಾರೀ ಚೋಡೆ' ಎಂದು ಕರೆಯುವರು. ಹೀಗೆ ತಾರೆಗಳನ್ನು ನೋಡಿ ಊಟ ಮಾಡುವ ವ್ಯಕ್ತಿ ವರ್ಷಪೂರ್ತಿ ಧೂಮಪಾನ, ಮದ್ಯಪಾನ ಮಾಡುವಂತಿಲ್ಲ. ಎಲೆಅಡಿಕೆಯನ್ನು ಸಹ ತಿನ್ನುವಂತಿಲ್ಲ. ಹೀಗೆ ಮಾಡುವುದರಿಂದ ಸತ್ತ ವ್ಯಕ್ತಿಗೆ ಗೌರವ ಸಲ್ಲಿಸಿದಂತೆ ಎಂಬ ಭಾವನೆ ಇವರಲ್ಲಿದೆ. ತಾರೆಗಳನ್ನು ನೋಡಿ ಊಟ ಮಾಡುವ ಉದ್ದೇಶವೇನೆಂದರೆ ಸತ್ತ ವ್ಯಕ್ತಿ ಸ್ವರ್ಗಕ್ಕೆ ಹೋಗಿ ತಾರೆಗಳ ಮೂಲಕ ನಮಗೆ ದರ್ಶನವೀಯುತ್ತಾನೆ. ಆತನನ್ನು ನೋಡಿದ ನಂತರವೇ ನಾವು ಊಟಮಾಡುತ್ತೇವೆಂದು ಹೇಳುವರು. ಹೀಗೆ ಸತ್ತ ವ್ಯಕ್ತಿಯ ಬಗೆಗೆ ವಿವಿಧ ಕಲ್ಪನೆಗಳನ್ನಿಟ್ಟುಕೊಂಡು ಆಚರಣೆಗಳನ್ನು ಮಾಡುತ್ತಾ ಬಂದಿರುವುದು ಕಂಡುಬರುತ್ತದೆ.

ಹೀಗೆ ಗೋಸಂಗಿಗಳು ಸತ್ತ ವ್ಯಕ್ತಿಗೆ ಸತ್ತಂದಿನಿಂದ ಮೂರು ದಿನದ, ಹನ್ನೆರಡು ದಿನದ, ಹಾಗೂ ವರ್ಷದ ಕಾರ್ಯವನ್ನು ಮಾಡುವರು. ಇಷ್ಟಲ್ಲದೆ ಸತ್ತವ್ಯಕ್ತಿ ಸಮುದಾಯದ ಒಳತಿಗಾಗಿ ಶ್ರಮಿಸಿದ್ದರೆ ಅಥವಾ ಸಮುದಾಯವನ್ನು ಸರಿಯಾಗಿ ರಕ್ಷಿಸಿದ್ದರೆ. ಅಂತಹ ವ್ಯಕ್ತಿಗೆ ಹಬ್ಬ ಹರಿದಿನಗಳಲ್ಲಿ ಸಹ ಗೌರವ ಸಲ್ಲಿಸುವರು. ಹೀಗೆ ಸತ್ತ ವ್ಯಕ್ತಿಯು ಆತ್ಮಕ್ಕೆ ಶಾಂತಿ ದೊರೆಯಲೆಂಬ ಉದ್ದೇಶದಿಂದ ಮಾಡುವ ಇಂತಹ ಕಾರ್ಯಗಳು ಆತನಿಗೆ ಸಲ್ಲಿಸುವ ಅಂತಿಮ ಗೌರವವಾಗಿರುತ್ತದೆ. ಈ ರೀತಿಯ ಕಾರ್ಯಗಳು ಬಹುತೇಕ ಎಲ್ಲಾ ಸಮುದಾಯಗಳಲ್ಲೂ ಕಂಡುಬರುತ್ತಿದ್ದು, ಆಯಾ ಪರಿಸರಕ್ಕೆ ತಕ್ಕಂತೆ ಪ್ರದೇಶದಿಂದ ಪ್ರದೇಶಕ್ಕೆ, ಸಮುದಾಯದಿಂದ ಸಮುದಾಯಕ್ಕೆ ಅಲ್ಪಸ್ವಲ್ಪ ವ್ಯತ್ಯಾಸಗಳೊಂದಿಗೆ ಆಚರಿಸಿಕೊಂಡು ಬರುತ್ತಿರುವುದು ಕಂಡುಬರುತ್ತಿದೆ. ಆಚರಣೆಯಲ್ಲಿ ಏನೇ ವ್ಯತ್ಯಾಸಗಳಿದ್ದರೂ ಉದ್ದೇಶ ಮಾತ್ರ ಒಂದೇಯಾಗಿರುತ್ತದೆ ಎಂಬುದು ಸರ್ವವಿಧಿತ.



**ಗೋಸಂಗಿಗಳು ಹಿಂದೆ ಹೆಣ ಹೋರುತ್ತಿದ್ದ ಪದ್ಧತಿ**

## ನಂಬಿಕೆ ಮತ್ತು ನಿಷಿದ್ಧಗಳು

೧. ಆಕಳು, ಎತ್ತು ಹಾಗೂ ಊರಂದಿಯನ್ನು ತಿನ್ನುವುದು ನಿಷಿದ್ಧ

೨. ಹಾಸಿಗೆ ಕೆಳಗೆ (ಕಾಲ್‌ದೆಸೆಗೆ) ಆಕಳು, ಕುದುರೆಯನ್ನು ಕಟ್ಟಬಾರದು ಹಾಗೂ ಅವುಗಳಿಗೆ ಕಟ್ಟಿದ ಹಗ್ಗವನ್ನು ಸಹ ದಾಟುವಂತಿಲ್ಲ.

೩. ಮಲಗಿದ ಕರಿನಾಯಿಯನ್ನೂ, ಅದರ ಸರಪಣಿಯನ್ನು ಹೆಣ್ಣು ಮಕ್ಕಳು ದಾಟುವಂತಿಲ್ಲ.

೪. ಜಟಕಾಗಾಡಿ ಮೇಲೆ ಹೆಣ್ಣು ಮಕ್ಕಳು ಕೂಡುವಂತಿಲ್ಲ.

೫. ಆಪಿನ ಚಾಪೆ ಹಾಗೂ ಕಡ್ಡಿ ಚಾಪೆಯ ಮೇಲೆ ಸಹ ಕೂಡುವಂತಿಲ್ಲ.

೬. 'ಖಾಗಳ್' ಬಳಿಯವರ ಮನೆದೇವರು ಭಾಂಗ್ಯ, (ವೀರಭದ್ರ, ಭೈರೀನಾಥ) ಈತ ಕುದುರೆ ಮೇಲೆ ಸಂಚಾರ ಮಾಡುತ್ತಿದುದರಿಂದ ಕುದುರೆಯನ್ನು ಹತ್ತುವಂತಿಲ್ಲ.

೭. 'ಸಿರ್ಸಿ ಮಾರಿಕಾಂಬೆ' (ಸೊನ್ನಾರಿಮರಿ)ಗೆ ನಡೆದುಕೊಳ್ಳುವವರ ಹೆಣ್ಣು ಮಕ್ಕಳು ಬೆಳ್ಳಿಯಿಂದ ಮಾಡಿದ ವಸ್ತುಗಳನ್ನೇ ಬಂಗಾರದಿಂದ ಮಾಡಿದ ವಸ್ತುಗಳನ್ನ ಸೊಂಟದ ಕೆಳಭಾಗಗಳಲ್ಲಿ ಧರಿಸುವಂತಿಲ್ಲ.

೮. ಹೆಣ್ಣು ಮಕ್ಕಳಿಗೆ ಕರೆಮಚ್ಚೆ ಬಲಕ್ಕಿದ್ದರೆ ಒಳ್ಳೆಯದಲ್ಲ.

೯. ಗಂಡುಮಕ್ಕಳಿಗೆ ಕರೆಮಚ್ಚೆ ಎಡಕ್ಕಿದ್ದರೆ ಒಳ್ಳೆಯದಲ್ಲ.

೧೦. ಹಲ್ಲುಗಳ ನಡುವೆ ಸಂಧಿ ಇದ್ದರೆ ಒಳ್ಳೆಯದಲ್ಲ.

೧೧. ನಾಲಗೆ ಮೇಲೆ ಕರೆ ಮಚ್ಚೆ ಇದ್ದರೆ ಒಳ್ಳೆಯದಲ್ಲ, ಅವರು ನುಡಿದದ್ದೆಲ್ಲ ನಿಜವಾಗುತ್ತದೆ.

೧೨. ಗರ್ಭಿಣಿ ಸ್ತ್ರೀ ಮದುವೆ ಮಂಟಪಕ್ಕೆ ಬರುವಂತಿಲ್ಲ ಒಂದು ವೇಳೆ ಬರುವಂತಿದ್ದರೆ ಕಂಕಣ ಕಟ್ಟಿಕೊಂಡು ಬರಬಹುದು.

೧೩. ಕನಸಿನಲ್ಲಿ ಅಕ್ಕ, ಮೀನು ಕಾಣಿಸಿಕೊಂಡರೆ ಒಳ್ಳೆಯದು.

೧೪. ಮೂರನೇ ಸಲ ಮದುವೆ ಮಾಡಿಕೊಳ್ಳುವಾಗ ಮೊದಲು ಕಳ್ಳಿ ಗಿಡಕ್ಕೆ ತಾಳಿ ಕಟ್ಟಿ ನಂತರ ವಧುವಿಗೆ ತಾಳಿ ಕಟ್ಟುವರು ಹೀಗೆ ಮಾಡದಿದ್ದರೆ ಆಯುಸ್ಸು ಕಡಿಮೆಯಾಗಿ ಬೇಗೆ ಸಾಯುತ್ತಾರೆಂಬ ನಂಬಿಕೆ ಇದೆ.

೧೫. ಮುಟ್ಟಾದ ಹೆಣ್ಣು ಮಕ್ಕಳು ದೇವರ ಬಾವುಟಗಳು ಹತ್ತಿರ ಸುಳಿದಾಡುವಂತಿಲ್ಲ ಹಾಗೂ ಬಾವುಟಗಳ ನೆರಳನ್ನೂ ಸಹ ದಾಟಬಾರದೆಂಬ ನಿಯಮವಿದೆ.

೧೬. ಅಮ್ಮ (ದಡಾರ)ನನ್ನು ಕಳುಹಿಸುವವರೆಗೆ 'ಅಮ್ಮ', ಬಂದ ಹುಡುಗನ ತಾಯಿ ಹಾಲು, ಮೊಸರು, ಮಜ್ಜಿಗೆ ಬಳಸುವಂತಿಲ್ಲ.

೧೭. ಬಲಿ ಕೊಡುವ ಪ್ರಾಣಿಯ ದೇಹ ಯಾವ ಭಾಗವೂ ಮುಕ್ಕಾಗಿರಬಾರದಂತೆ ಹಾಗೇನಾದರೂ ಮುಕ್ಕಾಗಿದ್ದರೆ ದೇವಿ ಸ್ವೀಕರಿಸುವುದಿಲ್ಲವೆಂಬ ನಂಬಿಕೆ ಇವರಲ್ಲಿದೆ.

## ಅಡಿಟಿಪ್ಪಣಿಗಳು

೧. ಡಾ.ಪಿ.ಕೆ.ಖಂಡೋಬಾ, ಕರ್ನಾಟಕದ ಲಂಬಾಣಿಗಳು: ಒಂದು ಸಾಂಸ್ಕೃತಿಕ ಅಧ್ಯಯನ, ಪುಟ:೯೪, ೧೯೯೧

೨. ಭೋಜರಾಜ ಪಾಟೀಲ, ಜನಪದ ಸಾಹಿತ್ಯ ದರ್ಶನ: ೧೦, ಪುಟ: ೩೨, ೧೯೮೭

೩. ಅದೇ. ಪುಟ: ೩೩-೩೪, ೧೯೮೭

೪. ಗೋಸಂಗಿಗಳು ಆಚರಿಸುವ ಪ್ರತಿಯೊಂದು ದೇವರ ಕಾರ್ಯದ ಪ್ರಾರಂಭದಲ್ಲಿ ಹಾಗೂ ಕೊನೆಯಲ್ಲಿ ಭಗತನ ಮೈಯಲ್ಲಿ ದೇವರು ಬಂದೇ ಬರುತ್ತಾನೆ. ಆಗ ಭಗತ ಸರಿ, ತಪ್ಪು ಕ್ರಮಗಳ ಬಗ್ಗೆ ಹಾಗೂ ಹಬ್ಬ ಆಚರಿಸಿದ್ದರ ಬಗ್ಗೆ ಸಂತೃಪ್ತಿ ವ್ಯಕ್ತಪಡಿಸುತ್ತಾನೆ.

೫. ಗೋಸಂಗಿಗಳು ಹಬ್ಬ ಹರಿದನ ವಿಶಿಷ್ಟ ಸಂದರ್ಭಗಳಲ್ಲಿ ಪೂಜೆಗೊಳ್ಳುವ ದೇವರುಗಳನ್ನು ಪ್ರತ್ಯೇಕವಾದ ಡೇರಾದಲ್ಲೇ ಪೂಜಿಸುವುದು ವಿಶೇಷವಾಗಿ ಕಂಡುಬರುತ್ತದೆ.

೬. ಡಾ. ರಹಮತ್ ತರೀಕೆರೆ, ಕರ್ನಾಟಕದ ಸೂಫಿಗಳು, ಪುಟ: ೧೮೩, ೨೦೦೧

೭. ೧. ವರಸನೇ ಸಾಡೇ ತೀನ್‌ಕರ್ (ವರ್ಷಕ್ಕೆ ಮೂರುವರೆಕರಿ)

   i. ಪಾಡವಾರಿ ಏಕಕರ್ (ಯುಗಾದಿ ಹಬ್ಬಕ್ಕೆ ಒಂದುಕರಿ)

   ii. ಪಂಚಮಿರಿ ಏಕ್‌ಕರ್ (ನಾಗರ ಪಂಚಮಿ ಹಬ್ಬಕ್ಕೆ ಒಂದುಕರಿ)

   iii. ಡೋಲಾರಿ ಏಕ್‌ಕರ್ (ಪೀರ್ಲದೇವರ ಹಬ್ಬಕ್ಕೆ ಒಂದುಕರಿ)

   iv. ದಿವಾಳಿ ಅರ್ಧಕರ್ (ದೀಪಾವಳಿ ಹಬ್ಬಕ್ಕೆ ಅರ್ಧಕರಿ)

ಹೀಗೆ ವರ್ಷದಲ್ಲಿ ಮೂರುವರೆಕರಿ ಬರುತ್ತಿದ್ದು, ಇದನ್ನು ನಿರ್ಧಿಷ್ಟಪಡಿಸಿದ ದಿನಗಳಲ್ಲಿ ಮಾತ್ರ ಆಡುವರು.

೮. ಎರಡು ಬೆಡಗುಗಳ ನಡುವೆ ನಡೆಯುವ ನ್ಯಾಯದ ಸಂದರ್ಭದಲ್ಲಿ ಗಂಗಾ ಎಂಬ ವ್ಯಕ್ತಿಯನ್ನು ನ್ಯಾಯ ನಿರ್ಣಯಕ್ಕೆ ನೇಮಿಸುತ್ತಾರೆ. 'ಗಂಗಾ' ಎಂದರೆ ಸಾಕ್ಷಿ ಎಂಬ ಅರ್ಥವನ್ನು ಇವರು ಕಲ್ಪಿಸಿಕೊಂಡಿದ್ದು, ಎರಡು ಬೆಡಗಗಳಿಗೆ ಭಿನ್ನವಾದ ಬೇರೊಂದು ಬೆಡಗಿನ ವ್ಯಕ್ತಿ 'ಗಂಗಾ'ನ ಪಾತ್ರ ವಹಿಸುತ್ತಾನೆ.

೯. ಬುಡಕಟ್ಟು ಲಕ್ಷಣಗಳನ್ನೊಳಗೊಂಡ ಗೋಸಂಗಿಗಳು ಅವರು ಮಾಡುವ ಯಾವುದೇ ಕಾರ್ಯಗಳಿಗೆ ಹೊರಗಡೆಯಿಂದ ಪೂಜಾರಿ, ಪುರೋಹಿತರನ್ನಾಗಲಿ ಕರೆತರುವುದಿಲ್ಲ. ಅವರಲ್ಲೇ ಒಬ್ಬ 'ಭಗತ' (ಪೂಜಾರಿ) ಭಟ್ಟ (ಪುರೋಹಿತ)ನನ್ನು ನೇಮಿಸಿಕೊಳ್ಳುತ್ತಾರೆ. ಬುಡಕಟ್ಟುಗಳು ಲಕ್ಷಣಗಳನ್ನೊಳಗೊಂಡ ಪ್ರತಿಯೊಂದು ಸಮುದಾಯಗಳು ಇದೇ ನಿಯಮವನ್ನು ಅನುಸರಿಸುತ್ತವೆ. ಇವರ ಆಯ್ಕೆ ವಂಶ ಪರಂಪರೆಯಿಂದ ಕೂಡಿರುವುದಿಲ್ಲ. ಯಾರಿಗೆ ದೇವರು, ಧರ್ಮದ ಬಗ್ಗೆ ನೇಮ-ನಿಷ್ಠೆ ಇರುತ್ತದೆಯೇ ಅಂಥವನನ್ನು ಭಗತನೆಂದು ಆಯ್ಕೆ ಮಾಡುವರು. ಈತ ಅತ್ಯಂತ ಶ್ರದ್ಧಾ ಭಕ್ತಿಯಿಂದ ಸಮುದಾಯದಲ್ಲಿನ ಧಾರ್ಮಿಕ ಕಾರ್ಯವನ್ನು ಮಾಡಿಕೊಂಡು ಹೋಗುತ್ತಾನೆ. ಜೀವನಾನುಭವ ಇರುವ ಹಿರಿಯ ವ್ಯಕ್ತಿಯನ್ನು 'ಭಟ್ಟ'ನನ್ನಾಗಿ ನೇಮಿಸುವರು. ಸಮುದಾಯದಲ್ಲಿ ನಡೆಯುವ ಮದುವೆ, ಸಂಸ್ಕಾರಗಳಂತಹ ಕಾರ್ಯಗಳು ಈತನ ಮುಖಂಡತ್ವದಲ್ಲಿ ನಡೆಯುತ್ತವೆ.

೧೦. ವಿವಿಧ ಪ್ರದೇಶಗಳಲ್ಲಿ ಬಳಕೆ ಇರುವ 'ಅಮ್ಮ'ನ ವಿವಿಧ ಬಗೆಗಳು

   ೧. ಮೈಯೆಲ್ಲಾ ಮರಳಿನಂತೆ ಗುಳ್ಳೆಯಾದರೆ ಇಸಕಮ್ಮ ಅಥವಾ ತಟ್ಟಮ್ಮ

   ೨. ಮುಖವೆಲ್ಲ ಗುಳ್ಳೆಯಾದರೆ ಪೆದ್ದಮ್ಮ ಅಥವಾ ದೊಡ್ಡಮ್ಮ

   ೩. ಕತ್ತಿನ ಬಳಿ ಊದುವುದು ಗುಡ್ಡೆಮಾರಮ್ಮ ಅಥವಾ ಗೌತಲಮ್ಮ

   ೪. ಕೀಲು ಹಿಡಿದು ಕೊಳ್ಳುವುದು ಮುಡಿಗಲಮ್ಮ

೫. ಮೈಯೆಲ್ಲಾ ಊದುವುದು ರಾತೆಮ್ಮ

೬. ಹೊಟ್ಟೆ ಮೇಲೆ ಕಪ್ಪಾಗುವುದು ನಲ್ಲ ಗಂಗಮ್ಮ

೭. ಮೈಯೆಲ್ಲ ಸಣ್ಣ ಗುಳ್ಳೆಯಾಗುವುದು ಮುತ್ತ್ಯಾಲಮ್ಮ ಅಥವಾ ಅಲ್ಲಾಟಮ

(ಕನ್ನಡ ಜಾನಪದ ವಿಶ್ವಕೋಶ-೧, ಸಂ. ಡಾ.ಚಂದ್ರಶೇಖರ ಕಂಬಾರ ಪುಟ: ೭೮)

೧೧. ಮಗುವಿಗೆ ದೊಡ್ಡ ದೊಡ್ಡ ಗುಳ್ಳೆಗಳು ಮೂಡಿದ್ದರೆ ಅದನ್ನು ದೊಡ್ಡಮ (ಬಡಿಆಯಿ) ಎಂದು ಸಣ್ಣ ಸಣ್ಣ ಸಣ್ಣ (ಕಾಗಿಕಾಳಿನಷ್ಟು) ಗುಳ್ಳೆಗಳು ಮೂಡಿದ್ದರೆ ಸಣ್ಣಮ್ಮ (ಸಿತಳಾ) ಎಂದು ಕರೆಯುವರು

೧೨. ಡಾ. ಪದ್ಮಪ್ರಸಾದ್, ರೈತ ಜಾನಪದ, ಸಂ. ಪುಟ: ೨೩, ೧೯೯೮

೧೩. ಎಂ. ನಂಜಮ್ಮಣ್ಣಿ, ಭಾರತೀಯ ಸಾಮಾಜಿಕ ಸಂಸ್ಥೆಗಳು, ಪುಟ: ೧೭೩, ೧೯೮೨

೧೪. ಡಾ. ಸಣ್ಣ ರಾಮಣ್ಣ, ಲಂಬಾಣಿ ಸಂಸ್ಕೃತಿ, ಪುಟ: ೮೧, ೧೯೯೯

೧೫. ಎಂ. ನಂಜಮ್ಮಣ್ಣಿ, ಭಾರತೀಯ ಸಾಮಾಜಿಕ ಸಂಸ್ಥೆಗಳು, ಪುಟ: ೩೦೭, ೧೯೮೨

೧೬. ಲಕ್ಷ್ಮೀಪತಿ ಕೋಲಾರ, ಮಾಸ್ತೀಕರ ಸಂಸ್ಕೃತಿ, ಪುಟ: ೧೧೯-೨೦, ೧೯೯೩

೧೭. ಡಾ.ಶೈಲಜಾ ಹಿರೇಮಠ, ಪಾತರದವರು ಪುಟ: ೫೬ ೧೯೯೯

೧೮. ಪಂಚಕಲಶ ಪಂಚಮುಖನಾದ ಶಿವನ ಸಂಕೇತ. ಶಿವನಿಗೆ ಸದ್ಯೋಜಾತ, ವಾಮದೇವ, ಅಘೋರ ತತ್ಪುರುಷ ಹಾಗೂ ಈಶಾನ್ಯ ಎಂಬ ಐದು ದುಃಖಗಳಿದ್ದು, ಅವುಗಳಿಂದ ಕ್ರಮವಾಗಿ ರೇವಣಸಿದ್ಧ ಮರುಳಾರಾಧ್ಯ, ಏಕೋರಾಮಾರಾಧ್ಯ, ಪಂಡಿತಾರಾಧ್ಯ ಹಾಗೂ ವಿಶ್ವಾರಾಧ್ಯರು ಉದ್ಭವಗೊಂಡು, ಅದೇ ಕ್ರಮದಲ್ಲಿ ಅವರುಗಳು ಬಾಳೆಹಳ್ಳಿ, ಉಜ್ಜಯನಿ, ಕೇದಾರ, ಶ್ರೀಶೈಲ ಹಾಗೂ ಕಾಶಿಪೀಠಗಳ ಅಧಿಪತಿಗಳಾ ಪೂಜೆಗೊಳ್ಳಲ್ಪಡುತ್ತಿದ್ದಾರೆ. ದೀಕ್ಷೆ ವಿವಾಹದ ಮಂಗಳ ಕಾರ್ಯಗಳಲ್ಲಿ ಪಂಚಮುಖನಾದ ಶಿವ ಇಲ್ಲವೆ ಅವನಿಂದ ಉದ್ಭವಗೊಂಡ ಪಂಚ ಪೀಠಾಧಿಪತಿಗಳ ಪೂಜೆಗೊಳ್ಳುವ ಸಂಕೇತವಾಗಿ ಪಂಚಕಲಶ ಸ್ಥಾಪನೆ ಮಾಡಲಾಗುತ್ತದೆ. (ಡಾ. ಶಿವಾನಂದ ಗುಬ್ಬಣ್ಣನವರ, ಲಿಂಗಾಯತ ಸಂಸ್ಕಾರಗಳು, ಪ್ರಸಾರಾಂಗ, ಕರ್ನಾಟಕ.ವಿ.ವಿ. ಧಾರವಾಡ, ಪುಟ: ೯೮, ೧೯೮೪)

೧೯. ಲಕ್ಷ್ಮೀಪತಿ ಕೋಲಾರ, ಮಾಸ್ತೀಕರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ಪುಟ:೯೮, ೧೯೯೩

೨೦. ಡಾ.ಬಿ.ಎಂ. ಪುಟ್ಟಯ್ಯ, ಸಾವು ಒಂದು ಚಿಂತನೆ ಪುಟ: ೧೪, ೨೦೦೧

೨೧. ಡಾ. ಹರಿಲಾಲ್ ಪವಾರ್, ಜಾನಪದ ಗಂಗೋತ್ರಿ-೯, ಸಂಚಿಕೆ-೩, ಪುಟ: ೩೦, ೧೯೯೭



ಅಧ್ಯಾಯ - ನಾಲ್ಕು

# ಗೋಸಂಗಿ ಸಮುದಾಯದ ಆರ್ಥಿಕ ಸ್ಥಿತಿಗತಿ

೧. ಭಿಕ್ಷೆ ಮತ್ತು ಬೇಟೆ

೨. ಹಿಂದಿನ ಮತ್ತು ಇಂದಿನ ಕಸುಬುಗಳು

# ಗೋಸಂಗಿ ಸಮುದಾಯದ ಆರ್ಥಿಕ ಸ್ಥಿತಿಗತಿ

ಯಾವುದೇ ಒಬ್ಬ ವ್ಯಕ್ತಿಯ ಅಥವಾ ಸಮುದಾಯದ ಸಾಮಾಜಿಕ ಸ್ಥಾನಮಾನ ನಿರ್ಧರಿಸುವಲ್ಲಿ ಆರ್ಥಿಕ ಸ್ಥಿತಿಗತಿ ಮುಖ್ಯ ಪಾತ್ರವಹಿಸುತ್ತದೆ. ಸಮಾಜದಲ್ಲಿ ಜಾತಿ ಜಾತಿಗಳ ನಡುವೆ ಮೇಲು ಕೀಳು ಎಂಬ ಭೇದಗಳಿರುವಂತೆ ಆರ್ಥಿಕ ಸಂದರ್ಭದಲ್ಲೂ ಸಹ ಬಡವ-ಶ್ರೀಮಂತ ಎಂಬ ಶ್ರೇಣೀಕರಣಗಳಿರುವುದು ಎಲ್ಲರಿಗೂ ತಿಳಿದ ಸತ್ಯ ಸಂಗತಿ.

ಒಂದು ನಿಶ್ಚಿತ ಭೂಪ್ರದೇಶದಲ್ಲಿ ವಾಸಿಸುವ ಸಮುದಾಯಗಳ ಆರ್ಥಿಕ ಜೀವನವನ್ನು ಸುಲಭವಾಗಿ ಅಧ್ಯಯನ ಮಾಡಬಹುದು. ಇಂತಹ ಸಮುದಾಯಗಳು ಹೆಚ್ಚಾಗಿ ಕೃಷಿ ಇಲ್ಲವೆ ಕೃಷಿ ಸಂಬಂಧಿ ಉಪಕಸಬುಗಳಲ್ಲಿ ನಿರತವಾಗಿರುತ್ತವೆ. ಆದರೆ ಗೋಸಂಗಿಗಳಂತಹ ಅಲೆಮಾರಿ ಸಮುದಾಯಗಳು ಒಂದೇ ಭೂಪ್ರದೇಶದಲ್ಲಿ ವಾಸಿಸದೇ, ಒಂದೇ ವೃತ್ತಿಯನ್ನು ಅವಲಂಬಿಸದೆ ಇರುವುದರಿಂದ ಇಂತವರ ಆರ್ಥಿಕ ಜೀವನಮಟ್ಟವನ್ನು ಅರ್ಥೈಸುವುದು ಕಷ್ಟಸಾಧ್ಯ.

ಇಂದು ಅರೆ-ಅಲೆಮಾರಿ(Semi Nomadic)ಗಳಾದ ಗೋಸಂಗಿಗಳು, ಜೀವನ ನಿರ್ವಹಣೆಗಾಗಿ ಹಲವು ಕಸಬುಗಳನ್ನು ಅವಲಂಬಿಸಿದ್ದಾರೆ. ಬದಲಾದ ಆರ್ಥಿಕ ಪರಿಸ್ಥಿತಿಯೊಂದಿಗೆ ಇವರ ಜೀವನಕ್ರಮವೂ ಬದಲಾವಣೆಗೆ ಒಳಪಡುತ್ತಿದೆ. ಪರಂಪರಾಗತವಾದ ಕಸಬುಗಳೊಂದಿಗೆ ಆಧುನಿಕ ಕಸುಬುಗಳು ಸೇರ್ಪಡೆಗೊಂಡು ಇವರ ಆರ್ಥಿಕ ಜೀವನದ ಮೇಲೆ ಬದಲಾವಣೆಯನ್ನು ತರುತ್ತಿವೆ. ಹಿಂದೆ ಆಹಾರಕ್ಕಾಗಿ ಬೇಟೆಯಾಡುತ್ತಿದ್ದ ಗೋಸಂಗಿಗಳಿಗೆ ಇಂದು ಆಹಾರದ ಜೊತೆಗೆ ವ್ಯಾಪಾರವೂ ಸೇರಿಕೊಂಡಿದೆ. ಆರ್ಥಿಕವಾಗಿ ತುಂಬಾ ದುರ್ಬಲರಾಗಿರುವ ಇವರಿಗೆ ಸರ್ಕಾರದ ಯಾವುದೇ ಅಭಿವೃದ್ಧಿ ಯೋಜನೆಗಳ ಲಾಭ ದೊರೆಯದೇ ಇರುವುದು ವಿಪರ್ಯಾಸ.

ನಿರಕ್ಷರಿಗಳಾದ ಗೋಸಂಗಿಗಳು ಪೂರ್ವದ ತಮ್ಮ ಅಲೆಮಾರಿ ಬದುಕಿನ ಸಂದರ್ಭದಲ್ಲಿ ಆಹಾರಕ್ಕಾಗಿ ಭಿಕ್ಷೆ ಮತ್ತು ಬೇಟೆಯನ್ನು ಅವಲಂಬಿಸಿದ್ದರು. ಆಗ ಅವರಿಗೆ ಹಣವನ್ನು ಸಂಗ್ರಹಿಸಬೇಕೆಂದಾಗಲಿ ಅದನ್ನು ಮುಂದಿನ ದಿನಗಳಲ್ಲಿ ಬಳಸಲು ಬೇಕಾಗುತ್ತದೆ ಎಂಬ ಅರಿವು ಇದ್ದಂತಿರಲಿಲ್ಲ. ಹಾಗಾಗಿ ಅಂದಂದಿನ

ಆಹಾರ ಅಂದಂದಿಗೆ ಸಿಕ್ಕಿದರೆ ಸಾಕತ್ತು, ಅಷ್ಟರಲ್ಲೇ ತೃಪ್ತರಾಗುತ್ತಿದ್ದರು. ಆದರೆ ಇಂದು ಭಿಕ್ಷೆ ಬೇಡುವುದು ಮತ್ತು ಬೇಟೆಯಾಡುವುದು ಅಪರಾಧವೆಂದು ಪರಿಗಣಿಸಿ ಕಾನೂನು ಜಾರಿಗೊಳಿಸಿರುವುದರಿಂದ ಈ ಅವುಗಳನ್ನ ನಂಬಿಕೊಂಡು ಬದುಕುತ್ತಿದ್ದ ಇವರಿಗೆ ಹಠಾತ್ತನೆ ಬದುಕಿನ ದಾರಿಗಳೆಲ್ಲ ಮುಚ್ಚಿದಂತಾಗಿದೆ. ಯಾವುದೇ ಸ್ಥಿರಾಸ್ತಿ ಹೊಂದಿರದ ಗೋಸಂಗಿಗಳ ಬದುಕಿಗೆ ಅರಣ್ಯ ಉತ್ಪನ್ನಗಳು ಆಸರೆಯಾಗಿದ್ದವು. ಬೇಟೆಯಲ್ಲಿ ನಿಪುಣರಾಗಿರುವ ಇವರು, ಆಹಾರಕ್ಕಾಗಿ ಬಳಸಿ ಉಳಿದುದನ್ನು ಮಾರಾಟ ಮಾಡಿ ಅಲ್ಪಸ್ವಲ್ಪ ಹಣ ಸಂಗ್ರಹಿಸುತ್ತಿದ್ದರು. ಮಾಂಸಹಾರಿಗಳಾದ ಇವರಿಗೆ ಸರ್ಕಾರದ ಇಂದಿನ ಅರಣ್ಯ ರಕ್ಷಣೆ ಹಾಗೂ ಕಾಡುಪ್ರಾಣಿಗಳ ಸಂರಕ್ಷಣೆಗಾಗಿ ಜಾರಿಗೆ ತಂದಿರುವ ಕಾನೂನುಗಳು ಇವರ ಆಹಾರ ಸಂಗ್ರಹಣೆಗೆ ತಡೆಯೊಡ್ಡಿದೆ. ಬೇರೆ ಕಸಬುಗಳು ಅಷ್ಟಾಗಿ ತಿಳಿಯದಿದ್ದ ಪ್ರಾರಂಭದ ಹಂತದಲ್ಲಿನ ಅವರ ಆರ್ಥಿಕ ಸ್ಥಿತಿ ತುಂಬಾ  ದುರ್ಬಲವಾಗಿತ್ತು. ಇತ್ತೀಚೆಗೆ ಜಾಗತೀಕರಣದ ಪ್ರಭಾವದಿಂದ ಹೊಸ ಬದುಕಿಗೆ ಹೊಂದಿಕೊಳ್ಳಬೇಕಾಗಿರುವುದು ಅನಿವಾರ್ಯವಾಗಿರುವುದರಿಂದ ನೆಲೆಯಿಲ್ಲದ ತಮ್ಮ ಮೂಲ ಕಸಬುಗಳಿಗೆ ಬದಲಾಗಿ ಆಧುನಿಕವಾದ ಹಲವು ಕಸಬುಗಳನ್ನು ಅವಲಂಬಿಸುವುದು ಅನಿವಾರ್ಯವಾಗಿದೆ. ಅಕ್ಷರ ಜ್ಞಾನವಿಲ್ಲದ ಇವರು ಪಕ್ಕಾ ವೃತ್ತಿಪರರು. ಯಾವುದೇ ಕೆಲಸವಾಗಲಿ ಅತ್ಯಂತ ನಿಷ್ಠೆಯಿಂದ, ಶ್ರದ್ಧೆಯಿಂದ ನಿಭಾಯಿಸಿಕೊಂಡು ಹೋಗಬಲ್ಲಂತಹ ಶಕ್ತಿ ಇವರಲ್ಲಿದೆ. ಯಾವ ಹೊಸ ವೃತ್ತಿಯೇ ಆಗಲಿ ಬಹುಬೇಗ ಅದಕ್ಕೆ ಹೊಂದಿಕೊಳ್ಳಬಲ್ಲಂತಹ ಚುರುಕು ಜ್ಞಾನ ಗೋಸಂಗಿಗಳಲ್ಲಿದೆ.

'ಉದರ ನಿಮಿತ್ತಂ ಬಹುಕೃತ ವೇಷಂ' ಎನ್ನುವಂತೆ ತಮ್ಮ ನಿತ್ಯ ಬದುಕಿಗಾಗಿ ಹಲವಾರು ಕಸಬುಗಳನ್ನು ಅವಲಂಬಿಸಿದ್ದಾರೆ. ಹೀಗೆ ಅವಲಂಬಿಸಿದ ಕಸುಬುಗಳೆಲ್ಲವೂ ಕಡಿಮೆ ಬಂಡವಾಳವನ್ನು ಬಯಸುವಂತವು. ಆರ್ಥಿಕವಾಗಿ ತುಂಬಾ ದುರ್ಬಲರಾಗಿರುವುದರಿಂದ ಇಂತಹ ಕಸುಬುಗಳಿಂದಲೇ ಜೀವನ ನಿರ್ವಹಣೆ ಮಾಡುತ್ತಿದ್ದಾರೆ. ಗೋಸಂಗಿ ಪುರುಷರು ಸಾಮಾನ್ಯವಾಗಿ, ಗಂಧದೆಣ್ಣೆ ಮಾರಾಟ ಮಾಡುವುದು, ಬಿದ್ದ ಹಲ್ಲುಗಳನ್ನು ಕಟ್ಟುವುದು, ಕೈಶಾಸ್ತ್ರ ಹೇಳುವುದು, ಸೋಫಾ, ಸ್ಟೌವ್ ಹಾಗೂ ಪ್ಲಾಸ್ಟಿಕ್ ಕೊಡ, ಬಕೀಟ್ ರಿಪೇರಿ ಮಾಡುವುದು, ಅಲ್ಲಲ್ಲಿ ಕೆಲವು ಕಡೆ ಕೂಲಿ ಮಾಡುವುದು, ಮೀನು ಗುತ್ತಿಗೆದಾರರಿಗೆ ಮೀನು ಹಿಡಿದು ಕೊಡುವುದನ್ನು ಮಾಡುತ್ತಾರೆ. ಹೀಗೆ ಹತ್ತು ಹಲವು ಕಸುಬುಗಳಲ್ಲಿ ನಿರತರಾಗಿ ದುಡಿಯುತ್ತಿರುವ ಗೋಸಂಗಿಗಳಿಗೆ ಇನ್ನೂ ಶ್ರಮಕ್ಕೆ ತಕ್ಕ ಪ್ರತಿಫಲ ಸಿಗುತ್ತಿಲ್ಲ. ಕಾರಣ ಇವರು ನಂಬಿಕೊಂಡ ವೃತ್ತಿಗಳನ್ನು ದೊಡ್ಡ ಪ್ರಮಾಣದಲ್ಲಿ ಅಭಿವೃದ್ಧಿ ಪಡಿಸಬೇಕೆಂದರೆ ಅವರಲ್ಲಿ ಸಾಕಷ್ಟು ಬಂಡವಾಳದ ಕೊರತೆ ಇರುವುದು ಎದ್ದುಕಾಣುತ್ತದೆ. ಒಂದು ವೇಳೆ ಬ್ಯಾಂಕ್‌ಗಳ ಮೂಲಕ ಸಾಲಪಡೆಯಬೇಕೆಂದರೆ ಭೂಮಿಯಂತಹ ಯಾವುದೇ ರೀತಿಯ ಸ್ಥಿರಾಸ್ತಿಗಳು ಇವರಲ್ಲಿಲ್ಲ. ಹಾಗಾಗಿ ಬಂಡವಾಳದಾರರ ಆಧೀನದಲ್ಲಿ, ಕೆಲಸವನ್ನು ನಿರ್ವಹಿಸಿ ಅವರು ಕೊಟ್ಟಷ್ಟು ಹಣದಿಂದಲೇ ತಮ್ಮ ಕುಟುಂಬವನ್ನು ಸಲಹುತ್ತಿದ್ದಾರೆ. ಇವರು ನಂಬಿಕೊಂಡು ಮಾಡುವ ಕೆಲಸಗಳೆಲ್ಲವು ತಾತ್ಕಾಲಿಕ ಬೇಡಿಕೆಯುಳ್ಳವಾಗಿರುವುದರಿಂದ ಈ ಕಸುಬುಗಳಿಂದ ಹೆಚ್ಚಿನ ಆದಾಯ ನಿರೀಕ್ಷಿಸುವುದು ಸಾಧ್ಯವಿಲ್ಲ,

ಜೊತೆಗೆ ಇವರು ನಿರ್ವಹಿಸುವ ಕಸುಬುಗಳಿಗೆ ಸ್ಥಿರವಾದ ನೆಲೆಯಾಗಲಿ, ಬೆಲೆಯಾಗಲಿ ಇಲ್ಲದಿರುವುದರಿಂದ ಅವರ ಆರ್ಥಿಕ ಸ್ಥಿತಿ ಮತ್ತಷ್ಟು ದುಃಸ್ಥಿತಿಗೀಡಾಗುತ್ತಿದೆ.

ಕ್ಷೇತ್ರಕಾರ್ಯದ ಸಂದರ್ಭದಲ್ಲಿ ನಾನು ಬೇಟಿಕೊಟ್ಟ ಎಲ್ಲಾ ಪ್ರದೇಶದ ಜನರ ಆರ್ಥಿಕ ಸ್ಥಿತಿ ತುಂಬಾ ಕೆಳಮಟ್ಟದಲ್ಲಿರುವುದು ಕಂಡುಬಂತು. ಒಂದೊತ್ತಿನ ಕೂಳಿಗೂ ಪರದಾಡುವಂತಹ ಸ್ಥಿತಿ ಇವರದ್ದಾಗಿದೆ. ಒಂದು ದಿನ ದುಡಿಯಲು ಹೋಗಿಲ್ಲವೆಂದರೆ ಅವರು ಅಂದು ಉಪವಾಸವೇ ಸರಿ. ಕೆಲವು ಕುಟುಂಬಗಳಲ್ಲಿ ಒಬ್ಬರಿಗಿಂತ ಹೆಚ್ಚು ಜನ ದುಡಿಯುವರಿದ್ದರೂ ಸಹ ಅವರ ಆರ್ಥಿಕ ಮಟ್ಟ ಸುಧಾರಿಸಿಲ್ಲ. ಇದಕ್ಕೆ ಕಾರಣ ದುಡಿದದ್ದನ್ನು ಕೂಡಿಸಬೇಕೆಂಬ ಆಲೋಚನೆ ಅವರಲ್ಲಿಲ್ಲ. ಅಂದು ದುಡಿದದ್ದು, ಅಂದಿನ ಆಹಾರಕ್ಕೆ ಬಳಸಿ ಉಳಿದ ಹಣವನ್ನು ಕುಡಿತಕ್ಕೆ ವ್ಯಯ ಮಾಡುವರು. ಅಷ್ಟೇ ಅಲ್ಲದೆ ದೇವರ ಬಗ್ಗೆ ಅಪಾರ ಭಕ್ತಿಯನ್ನು ಹೊಂದಿರುವ ಇವರು ವರ್ಷದುದ್ದಕ್ಕೂ ಬರುವ ಹಬ್ಬ ಹರಿದಿನಗಳನ್ನು ತಪ್ಪದೇ ಆಚರಿಸುವರು. ಎಷ್ಟೇ ತೊಂದರೆಯಿದ್ದರೂ ಧಾರ್ಮಿಕ ಆಚರಣೆಗಳನ್ನು ನಿಲ್ಲಿಸುವುದಿಲ್ಲ. ಹಾಗಾಗಿ ಅವರು ದುಡಿದ ಹಣದಲ್ಲಿ ಬಹುತೇಕ ಪಾಲು ಇಂತಹ ಆಚರಣೆಗಳಿಗೆ ವ್ಯಯವಾಗುತ್ತದೆ. ಹೀಗಿರುವಾಗ ಆರ್ಥಿಕ ಸುಧಾರಣೆಯಾಗಲು ಹೇಗೆ ಸಾಧ್ಯ. ಯಾವುದೇ ವ್ಯಕ್ತಿಯ ಅಥವಾ ಸಮುದಾಯದಲ್ಲಿ ಆರ್ಥಿಕ ಸುಧಾರಣೆ ಕಂಡು ಬರಬೇಕಾದರೆ ತಾನು ದುಡಿದ ಹಣವನ್ನು ಹೇಗೆ ಬಳಸಬೇಕು. ಯಾಕಾಗಿ ಬಳಸಬೇಕು. ಇದರಿಂದ ಯಾವ ರೀತಿಯ ಪ್ರಯೋಜನವಿದೆ ಎಂಬ ಕನಿಷ್ಟಜ್ಞಾನ ಅವನಲ್ಲಿರಬೇಕು.

ತುಂಬಾ ಚುರುಕು ಬುದ್ಧಿಯುಳ್ಳ ಗೋಸಂಗಿಗಳು ಯಾವುದೇ ಕೆಲಸವನ್ನು ಕೊಟ್ಟರೂ ಅತ್ಯಂತ ಶ್ರದ್ಧೆಯಿಂದ ಕಲಿತು ನಿಭಾಯಿಸಬಲ್ಲರು. ನಾನು ಕ್ಷೇತ್ರಕಾರ್ಯ ಕೈಗೊಂಡ ಪ್ರದೇಶದಲ್ಲಿನ ಗೋಸಂಗಿಗಳು ವಿವಿಧ ಕಸುಬುಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವುದು ಕಂಡುಬಂದಿತು. ಆಯಾ ಪ್ರದೇಶದ ಬೇಡಿಕೆಗನುಗುಣವಾದ ಕಸುಬುಗಳನ್ನು ಕಲಿತು ದುಡಿಯುತ್ತಿದ್ದರೂ ಸಹ, ಆರ್ಥಿಕಸ್ಥಿತಿ ಮಾತ್ರ ತುಂಬಾ ಕೆಳಮಟ್ಟದಲ್ಲಿದೆ. ಕಾರಣ ಇವರು ನೆಚ್ಚಿಕೊಂಡು ನಿರ್ವಹಿಸುವ ಕಸುಬುಗಳಿಗೆ ನಿರಂತರ ಬೇಡಿಕೆ ಇಲ್ಲದಿರುವುದು ಹಾಗೂ ನಿಗದಿತ ಬೆಲೆ ಸಿಗದೇ ಇರುವುದು. ಬೇರೆ ರೀತಿಯ ಕಸುಬುಗಳಿಗೆ ಹೊಂದಿಕೊಳ್ಳಬೇಕೆಂದರೆ ಬಂಡವಾಳದ ಕೊರತೆ ಎದ್ದುಕಾಣುತ್ತದೆ. ಅಲೆಮಾರಿಗಳಾಗಿರುವುದರಿಂದ ಇವರಿಗೆ ಯಾರೂ ಆರ್ಥಿಕ ಭದ್ರತೆಯನ್ನು ನೀಡಲು ಮುಂದಾಗುತ್ತಿಲ್ಲ. ದುಡಿಮೆಯೇ ಸಕಲ ಸಂಪತ್ತಿನ ಮೂಲವೆಂದು ಅರ್ಥಶಾಸ್ತ್ರಜ್ಞರು ವ್ಯಾಖ್ಯಾನಿಸಿದ್ದಾರೆ. ಆದರೆ ಇವರ ದುಡಿಮೆಗೆ ಸರಿಯಾದ ಪ್ರತಿಫಲ ಸಿಗದೇ ಇನ್ನೂ ಶೋಷಣೆಯ ಹಂತದಲ್ಲಿರುವುದರಿಂದ ಇವರ ಜೀವನಮಟ್ಟ ಸುಧಾರಿಸಲು ಸಾಧ್ಯವಾಗುತ್ತಿಲ್ಲ. ಕೆಲವೊಂದು ಪ್ರದೇಶಗಳಲ್ಲಿ ಅವರ ಬುದ್ಧಿಶಕ್ತಿಗನುಗುಣವಾಗಿ ದುಡಿದು, ದುಂದುವೆಚ್ಚ ಮಾಡದೆ ಆರ್ಥಿಕಮಟ್ಟವನ್ನು ಉತ್ತಮ ಪಡಿಸಿಕೊಂಡಿದ್ದಾರೆ. ಇನ್ನೂ ಕೆಲವರು ದುಡಿದದ್ದನ್ನು ಉಳಿತಾಯ ಮಾಡದೇ ದುಂದುವೆಚ್ಚಮಾಡಿ ಕುಟುಂಬದ ನಿರ್ವಹಣೆಯ ಕಡೆಗೆ ಹೆಚ್ಚು ಗಮನಕೊಡುತ್ತಿಲ್ಲ. ಕನಿಷ್ಟ ಶಿಕ್ಷಣದಿಂದ

ವಂಚಿತವಾದ ಈ ಸಮುದಾಯವು ಆಧುನಿಕ ಸಂದರ್ಭದಲ್ಲಿ ತುಂಬಾ ತೊಂದರೆಯನ್ನು ಅನುಭವಿಸುತ್ತಿದೆ. ಯಾವುದೇ ಒಂದು ಸಮುದಾಯ ಸಮಾಜದ ಮುಖ್ಯವಾಹಿನಿಯ ಜೊತೆಗೆ ಮುಖಾಮುಖಿಯಾಗಿ ಸಮರ್ಥವಾದ ಬದುಕನ್ನು ನಡೆಸಬೇಕಾದರೆ ಆರ್ಥಿಕ ಮಟ್ಟದಲ್ಲಿ ಸುಧಾರಣೆಯಾಗಬೇಕು.

ಸರ್ವಚೇತನವಾದಿಗಳಾದ ಗೋಸಂಗಿಗಳು ಆಶ್ರಯಿಸಿರುವ ಕಸುಬುಗಳನ್ನು ೧. ಪುರುಷರು ಆಶ್ರಯಿಸಿರುವ ಕಸುಬುಗಳು. ೨. ಮಹಿಳೆಯರು ಆಶ್ರಯಿಸಿರುವ ಕಸುಬುಗಳು (ಇದರಲ್ಲಿ ಚಿಕ್ಕಮಕ್ಕಳು ಸಹ ಸೇರಿರುತ್ತಾರೆ) ಎಂದು ಎರಡು ಭಾಗಗಳಾಗಿ ವಿಂಗಡಿಸಬಹುದು. ಈಗ ಪುರುಷರು ಆಶ್ರಯಿಸಿರುವ ವಿವಿಧ ರೀತಿಯ ಕಸುಬುಗಳನ್ನು ನೋಡೋಣ.

೧. ಗಂಧದೆಣ್ಣೆ ಮಾರಾಟಮಾಡುವುದು

೨. ಬಿದ್ದ ಹಲ್ಲನ್ನು ಕಟ್ಟುವುದು

೩. ಪ್ಲಾಸ್ಟಿಕ್ ಬಕೆಟ್, ಕೊಡ ಹಾಗೂ ಸೋಫಾ ರಿಪೇರಿ ಮಾಡುವುದು

೪. ಮೀನು ಹಿಡಿಯುವುದು

೫. ಇತರೆ ಕೂಲಿಕೆಲಸ

**ಸ್ತ್ರೀಯರು ಆಶ್ರಯಿಸಿರುವ ಕಸುಬುಗಳೆಂದರೆ**

೧. ರದ್ದಿ ಆಯುವುದು

೨. ಕೂಲಿ ಕೆಲಸ ಮಾಡುವುದು

ಹೀಗೆ ಗೋಸಂಗಿ ಸಮುದಾಯದ ಪುರುಷ ಮತ್ತು ಸ್ತ್ರೀಯರು ವಿವಿಧ ರೀತಿಯ ಕಸುಬುಗಳನ್ನು ಅವಲಂಬಿಸಿ ದುಡಿಮೆಯಲ್ಲಿ ತೊಡಗಿದ್ದಾರೆ.

ಗಂಧದೆಣ್ಣೆ ಮಾರಾಟ ಮಾಡುವುದು ಇದು ಗೋಸಂಗಿಗಳ ಆದಾಯದ ಮೂಲ ಕಸುಬಾಗಿದ್ದು, ಸಾಮಾನ್ಯವಾಗಿ ಎಲ್ಲಾ ಪ್ರದೇಶದ ಗೋಸಂಗಿಗಳು ಈ ಕಸುಬನ್ನು ಆಶ್ರಿಯಿಸಿದ್ದಾರೆ. ಗಂಧದೆಣ್ಣೆ ಮಾರಾಟ ಎಲ್ಲಾ ಕಾಲದಲ್ಲೂ ಇರುವುದಿಲ್ಲ. ಹಬ್ಬ-ಹರಿದಿನಗಳಂತಹ ಸುಗ್ಗಿ ಸಂದರ್ಭದಲ್ಲಿ ಇದರ ಮಾರಾಟ ಸ್ವಲ್ಪ ಜಾಸ್ತಿಯಾಗಿರುತ್ತದೆ. ಇಂತಹ ಸಂದರ್ಭದಲ್ಲಿ ಗಂಧದೆಣ್ಣೆ ಮಾರಾಟ ಮಾಡಿ ಅಲ್ಪಸ್ವಲ್ಪ ಆದಾಯವನ್ನು ಪಡೆಯುತ್ತಾರೆ. ಮುಂಬೈಯಂತಹ ನಗರದಲ್ಲಿ ಗಂಧದೆಣ್ಣೆಯನ್ನು ನೂರು ಇನ್ನೂರು ರೂಪಾಯಿಗಳಿಗೆ ಒಂದು ಬಾಟಲ್‌ನಂತೆ ತಂದು ಅದಕ್ಕೆ ಬೇರೆ ಎಣ್ಣೆಯನ್ನು ಮಿಶ್ರಣಮಾಡಿ ಕೊಳ್ಳುವವರ ಅನುಕೂಲಕ್ಕೆ ತಕ್ಕಂತೆ ಚಿಕ್ಕ ಚಿಕ್ಕ ಬಾಟಲ್‌ಗಳಲ್ಲಿ ತುಂಬಿ ೫, ೧೦, ೧೫, ರೂಪಾಯಿಗಳಿಗೊಂದರಂತೆ ಮಾರಾಟಮಾಡುತ್ತಾರೆ. ಹೀಗೆ ಮಾರಾಟ ಮಾಡಿದ ಗಂಧದೆಣ್ಣೆಯಿಂದ ತಿಂಗಳಿಗೆ ಸುಮಾರು ಐದುನೂರರಿಂದ ಏಳುನೂರರವರೆಗೆ ಆದಾಯ ಬರುತ್ತದೆ.

ಬಿದ್ದ ಹಲ್ಲು ಕಟ್ಟುವುದು ಸಹ ಗೋಸಂಗಿಗಳಿಗೆ ಆದಾಯವನ್ನು ತಂದುಕೊಡುವ ಕಸುಬಾಗಿದೆ. ನಿರಕ್ಷರಿಗಳಾದ ಇವರು ದಂತಶಾಸ್ತ್ರವನ್ನು ಕಲಿಯದೇ ಕಲಿತುಕೊಂಡ ಕಸುಬು ಇದಾಗಿದೆ. ಸ್ವಲ್ಪ

ಆರ್ಥಿಕವಾಗಿ ಸಬಲರಿದ್ದವರು ಮಾತ್ರ ಈ ಕಸುಬನ್ನು ಅವಲಂಬಿಸಿರುತ್ತಾರೆ. ಸಾಮಾನ್ಯವಾಗಿ ದಂತವೈದ್ಯರು ಬಳಸುವ ಉಪಕರಣಗಳನ್ನೇ ಬಳಸಿ ಬಿದ್ದ ಹಲ್ಲುಗಳನ್ನು ಕಟ್ಟುತ್ತಾರೆ, ಬಿಡಿ ಹಲ್ಲು ಕಟ್ಟಲು ೫೦ರಿಂದ ೧೦೦ ರೂಪಾಯಿಗಳು, ಹಿಡಿ ಹಲ್ಲು ಕಟ್ಟಲು ೧೦೦೦ ದಿಂದ ೧೫೦೦ ರೂಪಾಯಿಗಳವರೆಗೆ ಹಣ ಪಡೆಯುತ್ತಾರೆ. ಇದೇ ಅಂತಿಮ ಬೆಲೆಯಲ್ಲ. ಆಯಾ ಪ್ರದೇಶದ ಜನರ ಆರ್ಥಿಕ ಸ್ಥಿತಿಗತಿಗನುಗುಣವಾಗಿ ಬೆಲೆಯನ್ನು ನಿಗಧಿಪಡಿಸುತ್ತಾರೆ. ಈ ಬೆಲೆ ಪ್ರತಿಸಾರಿಯೂ ಬದಲಾವಣೆಯನ್ನು ಪಡೆಯುತ್ತಾ ಹೋಗುತ್ತದೆ. ಹೀಗೆ ಬಿದ್ದ ಹಲ್ಲನ್ನು ಕಟ್ಟುವುದರ ಮೂಲಕವೂ ಸಹ ತಮ್ಮ ಆರ್ಥಿಕಮಟ್ಟವನ್ನು ಉತ್ತಮ ಪಡಿಸಿಕೊಳ್ಳಲು ಹೆಣಗಾಡುತ್ತಿದ್ದಾರೆ. ಈ ಕಸುಬಿಗೂ ಸಹ ನಿರಂತರ ಬೇಡಿಕೆ ಇರುತ್ತದೆ ಎಂದು ಹೇಳಲು ಬರುವುದಿಲ್ಲ. ಆದರೂ ಕೆಲವೊಮ್ಮೆ ತಮ್ಮ ಜೀವನ ನಿರ್ವಹಣೆಗೆ ಈ ಕಸುಬು ಸಹಕಾರಿಯಾಗುತ್ತದೆ ಎಂಬುದರಲ್ಲಿ ಎರಡು ಮಾತಿಲ್ಲ.

ಪ್ಲಾಸ್ಟಿಕ್, ಬಕೇಟ್, ಸೋಫಾ ರಿಪೇರಿ ಮಾಡುವುದು ಇವರ ಇನ್ನೊಂದು ಮುಖ್ಯ ಕಸುಬು. ಕಡಿಮೆ ಬಂಡವಾಳವನ್ನು ಬಯಸುವ, ಬುದ್ಧಿಶಕ್ತಿಯನ್ನು ಆಧರಿಸಿದ ಈ ಕಸುಬುಗಳು ಗೋಸಂಗಿಗಳ ಜೀವನ ನಿರ್ವಹಣೆಗೆ ಹೆಚ್ಚು ಸಹಕಾರಿಯಾಗಿವೆ. ಒಂದು ಪ್ಲಾಸ್ಟಿಕ್ ಬಕೇಟ್, ಅಥವಾ ಪ್ಲಾಸ್ಟಿಕ್‌ಕೊಡ ರಿಪೇರಿ ಮಾಡಿದರೆ ಎರಡು ರೂಪಾಯಿಯಿಂದ ಆರು ರೂಪಾಯಿಯವರೆಗೆ ಸಂಭಾವನೆ ಪಡೆಯುತ್ತಾರೆ. ಸರಿಯಾಗಿ ಕೆಲಸ ಸಿಕ್ಕರೆ ದಿನಕ್ಕೆ ಏನಿಲ್ಲವೆಂದರೂ ೫೦ ರಿಂದ ೬೦ ರೂಪಾಯಿಗಳಷ್ಟು ದುಡಿಯುತ್ತಾರೆ. ಇನ್ನೂ ಸೋಫಾ ರಿಪೇರಿ ಮಾಡಿದರೆ ೩೦ ರಿಂದ ೫೦ ರೂಪಾಯಿಯವರೆಗೆ ಸಂಭಾವನೆ ಪಡೆಯುತ್ತಾರೆ. ಈ ಮೂರು ಕಸಬುಗಳನ್ನು ಒಂದೇ ಪ್ರದೇಶದಲ್ಲಿ ನಿರ್ವಹಿಸಿ ನಿರಂತರ ಆದಾಯವನ್ನು ತರಲು ಸಾಧ್ಯವಿಲ್ಲ. ಹಾಗಾಗಿ ಬೇರೆ ಬೇರೆ ಪ್ರದೇಶಗಳಲ್ಲಿ ಇಂತಹ ಕಸುಬುಗಳನ್ನು ನಿರ್ವಹಿಸಿ ಸ್ವಲ್ಪ ಮಟ್ಟಿನ ಆದಾಯವನ್ನು ಪಡೆಯಬಹುದಾಗಿದೆ.

ಉತ್ತಮ ಬೇಟೆಗಾರರಾದ ಗೋಸಂಗಿಗಳಿಗೆ ಮೀನು ಹಿಡಿಯುವ ಕೆಲಸವನ್ನು ಚೆನ್ನಾಗಿ ನಿಭಾಯಿಸುತ್ತಾರೆ. ಕೆರೆ ಅಕ್ಕ ಪಕ್ಕದ ಪ್ರದೇಶಗಳಲ್ಲಿ ವಾಸಿಸುವ ಗೋಸಂಗಿಗಳೆಲ್ಲರೂ ಮೀನು ಶಿಕಾರಿಯನ್ನು ಚೆನ್ನಾಗಿ ಬಲ್ಲರು. ಕೆರೆ, ಕಾಲುವೆ, ಇನ್ನಿತರೆ ಪ್ರದೇಶಗಳಲ್ಲಿ ಮೀನು ಸಾಕಲು ಹಾಗೂ ಹಿಡಿಯಲು ಅನುಮತಿ ಪಡೆದ ಮೀನುಗಾರರ ಸಂಘದ ಕೈಕೆಳಗೆ ಮೀನು ಹಿಡಿದು ಕೊಡುವ ಕೆಲಸಕ್ಕೆ ಸೇರಿಕೊಳ್ಳುತ್ತಾರೆ. ಒಂದು ಕೆ.ಜಿ. ಮೀನು ಹಿಡಿದರೆ ಇಂತಿಷ್ಟು ಸಂಭಾವನೆ ಎಂಬ ಕರಾರಿನ ಮೇಲೆ ಮೀನು ಹಿಡಿಯುವರು. ಸಾಮಾನ್ಯವಾಗಿ ಒಂದು ಕೆ.ಜಿ. ಮೀನು ಹಿಡಿದರೆ ೫ ರಿಂದ ೬ ರೂಪಾಯಿ ಸಂಭಾವನೆ ಕೊಡುತ್ತಾರೆ. ಹೀಗೆ ಕನಿಷ್ಟ ದಿನಕ್ಕೆ ೫೦ ರಿಂದ ೭೦ ರೂಪಾಯಿಗಳವರೆಗೆ ದುಡಿಯುತ್ತಾರೆ. ಕೆಲವು ಪ್ರದೇಶಗಳಲ್ಲಿ ಕೆರೆ, ಹಳ್ಳಗಳ ಪ್ರದೇಶಗಳಲ್ಲಿ ತಾವೇ ಸ್ವತಂತ್ರವಾಗಿ ಮೀನು ಹಿಡಿದು ಊರಲ್ಲಿ ವ್ಯಾಪಾರ ಮಾಡುತ್ತಾರೆ. (ಕೆ.ಜಿ.ಗೆ ೧೫ ರಿಂದ ೩೦ ರೂಪಾಯಿಗಳಂತೆ) ಸಾಮಾನ್ಯವಾಗಿ ಪುರುಷರು ಮೀನು ಹಿಡಿದು ತಂದರೆ ಸ್ತ್ರೀಯರು ಮಾರಾಟಮಾಡಿ ಹಣ ಸಂಗ್ರಹಿಸುತ್ತಾರೆ. ಹೀಗೆ ಸುಗ್ಗಿಯನ್ನು ಅವಲಂಬಿಸಿರುವ ಈ ಕಸುಬುನಿಂದ ಎಲ್ಲಾ ಕಾಲದಲ್ಲಿ ಆದಾಯ ಸಿಗುವಂತದ್ದಲ್ಲ.

ಗೋಸಂಗಿ ಪುರುಷರು ಕೂಲಿ ಹೋಗುವುದು ತುಂಬಾ ಕಡಿಮೆಯೆಂದೇ ಹೇಳಬಹುದು. ನನ್ನ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಗಮನಿಸಿದಂತೆ ಪ್ರತಿ ಪ್ರದೇಶದಲ್ಲಿ ಐದರಿಂದ ಹತ್ತು ಜನ ಮಾತ್ರ ಕೂಲಿ ಕೆಲಸದಲ್ಲಿ ತೊಡಗಿರುತ್ತಾರೆ. ಅದರಲ್ಲೂ ಮೀನು ಹಿಡಿಯುವ ಕೆಲಸಕ್ಕೆ ನೇಮಕಗೊಂಡವರೇ ಹೆಚ್ಚು. ಮೀನು ಹಿಡಿಯುವ ಕೆಲಸವು ಸಹ ಸುಗ್ಗಿ ಕಾಲದಲ್ಲಿ ಮಾತ್ರ ಸಿಗುವಂತದ್ದು. ಹಾಗಾಗಿ ಉಳಿದ ಕಾಲಿ ದಿನಗಳಲ್ಲಿ ಕಟ್ಟಡ ಕಟ್ಟಲು ಸಹಾಯಕರಾಗಿ, ರಸ್ತೆ ರಿಪೇರಿಯಂತಹ ಕೆಲಸಗಳಲ್ಲಿ ಕೂಲಿಕಾರ್ಮಿಕರಾಗಿ ದುಡಿಯುತ್ತಾರೆ.

## ಮಹಿಳೆಯರು ಅವಲಂಬಿಸಿರುವ ಕಸಬುಗಳು

ಗೋಸಂಗಿ ಮಹಿಳೆಯರು ಪುರುಷರಂತೆ ತಾವೂ ಸಹ ದುಡಿಯಲು ಮುಂದಾಗುತ್ತಿದ್ದಾರೆ. ಪುರುಷರು ಬೇರೆ ಬೇರೆ ಪ್ರದೇಶಗಳಿಗೆ ವ್ಯಾಪಾರಕ್ಕಾಗಿ ಅಲೆದಾಡುತ್ತಿದ್ದರೆ. ಮಹಿಳೆಯರು ತಮ್ಮ ಮನೆಗೆಲಸಗಳನ್ನು ಮುಗಿಸಿಕೊಂಡು ಊರಿನ ಬೀದಿಗಳಲ್ಲಿ, ಮನೆಗಳ ಅಕ್ಕಪಕ್ಕದ ಪ್ರದೇಶಗಳಲ್ಲಿ ತ್ಯಾಜ್ಯ ಪ್ಲಾಸ್ಟಿಕ್, ಪೇಪರ್, ಕಬ್ಬಿಣದ ವಸ್ತುಗಳನ್ನು ಆಯ್ದು ತಂದು, ಗುಜರಿ ಅಂಗಡಿಗಳಿಗೆ ಹಾಕಿ ಹಣ ಪಡೆಯುತ್ತಾರೆ. ಇದರಿಂದ ದೊರೆಯುವ ಆದಾಯ ತುಂಬಾ ಕಡಿಮೆಯದಾಗಿರುತ್ತದೆ. ದಿನಕ್ಕೆ ೧೦ ರಿಂದ ೧೫ ರೂಪಾಯಿಗಳಷ್ಟು ಬೆಲೆಬಾಳುವ ತ್ಯಾಜ್ಯ ವಸ್ತುಗಳು ಸಿಕ್ಕರೆ ಅದೇ ಹೆಚ್ಚಿನದು. ಸುಮಾರು ೧೨ ವರ್ಷದ ಮಕ್ಕಳಿಂದ ಹಿಡಿದು ೫೦ ೬೦ ವರ್ಷದ ಮಹಿಳೆಯರವರೆಗೂ ಈ ಕೆಲಸದಲ್ಲಿ ತೊಡಗಿರುತ್ತಾರೆ. ಈ ಸಮುದಾಯದ ಬಹುತೇಕ ಹೆಣ್ಣು ಮಕ್ಕಳು ರದ್ದಿ ಆಯುವ ಕೆಲಸದಲ್ಲಿ ತೊಡಗಿರುತ್ತಾರೆ. ಹೀಗೆ ರದ್ದಿ ಆಯುವಾಗ ಅಕ್ಕಪಕ್ಕದ ಮನೆಗಳಲ್ಲಿ ಒಣಗಲು ಹಾಕಿದ ಬಟ್ಟೆಗಳೇನಾದರೂ ಕಳುವಾಗಿದ್ದಾರೆ. ಆ ಕಳ್ಳತನವನ್ನು ಇವರ ಮೇಲೆ ಹೋರಿಸಿ ತಳಿಸಿದ್ದು ಉಂಟೂ. ಕೆಲವೊಮ್ಮೆ ಇಂತಹ ಸಣ್ಣ ಪುಟ್ಟ ಅಪಾದನೆಗಳನ್ನು ಹೊತ್ತ ಗೋಸಂಗಿ ಮಹಿಳೆಯರು ಪೋಲೀಸರ ಅತಿಥಿಗಳಾಗಿ ನಿಜಾಂಶ ತಿಳಿದ ನಂತರ ಬಿಡುಗಡೆಗೊಂಡ ಪ್ರಸಂಗಗಳು ಸಹ ಉಂಟು. ಹೊಸ ಹೊಸ ಪ್ರದೇಶಗಳಲ್ಲಿ ರದ್ದಿ ಆಯುವಾಗ ಇಂತಹ ಆಕಸ್ಮಿಕ ಘಟನೆಗಳಿಂದ ನೋವನ್ನು ಅನುಭವಿಸುವುದು ಅನಿವಾರ್ಯವಾಗಿ ಬಿಟ್ಟಿದೆ. ಕಷ್ಟಪಟ್ಟು ತಮ್ಮ ಬುದ್ಧಿಶಕ್ತಿಯನ್ನು ಉಪಯೋಗಿಸಿ ದುಡಿಯುತ್ತಾರೆಯೇ ವಿನಃ ಕಳ್ಳತನದಂತಹ ಕೆಲಸಗಳಿಗೆ ಎಂದು ಕೈ ಹಾಕಿದವರಲ್ಲ. ಹಾಗೇನಾದರೂ ಕಳ್ಳತನ ಮಾಡಿದ್ದೇ ಆದರೆ ಅಂತವರನ್ನು ಕುಲದಿಂದ ಹೊರಹಾಕುತ್ತಾರೆ. ಹಾಗಾಗಿ ಕಷ್ಟಪಟ್ಟು ದುಡಿಯುವುದರ ಕಡೆಗೆ ಹೆಚ್ಚಿನ ಗಮನವನ್ನು ಕೊಡುತ್ತಾರೆ. ಹೀಗೆ ಮಹಿಳೆಯರು ಸಹ ದುಡಿಮೆಯಲ್ಲಿ ತೊಡಗಿಸಿಕೊಂಡಿದ್ದು, ತಮ್ಮ ಕೈಲಾದ ಮಟ್ಟಿಗೆ ಸಂಪಾದನೆಯಿಂದ ಕುಟುಂಬದ ನಿರ್ವಹಣೆಗೆ ಸಹಕಾರಿಯಾಗುತ್ತಿದ್ದಾರೆ.

ಕ್ಷೇತ್ರಕಾರ್ಯದ ಸಂದರ್ಭದಲ್ಲಿ ನಾನು ಗಮನಸಿದಂತೆ ಗೋಸಂಗಿ ಮಹಿಳೆಯರು ಕೂಲಿ ಮಾಡುವುದು ತುಂಬಾ ಕಡಿಮೆ ಎಂದೇ ಹೇಳಬಹುದು. ಕೆಲವೊಂದು ಪ್ರದೇಶಗಳಲ್ಲಿನ ಮಹಿಳೆಯರು

ಗದ್ದೆ ಕೆಲಸಕ್ಕೆ ಮನೆ ಕಟ್ಟುವ ಕೆಲಸಕ್ಕೆ, ಸಣ್ಣ ಪುಟ್ಟ ಕಾರ್ಖಾನೆಗಳಲ್ಲಿ ಕಸಬಳಿಯುವ ಕೆಲಸ ದಿನಗೂಲಿ ಲೆಕ್ಕದಲ್ಲಿ ನೇಮಕ ಗೊಂಡಿರುತ್ತಾರೆ. ಇಂತಹ ಕೆಲಸಗಳಿಂದ ದಿನದ ಸಂಪಾದನೆ ೧೫ ರಿಂದ ೩೦ ರೂಪಾಯಿಗಳಾಗಿರುತ್ತದೆ. ಇದು ಪ್ರದೇಶದಿಂದ ಪ್ರದೇಶಕ್ಕೆ ವ್ಯತ್ಯಾಸವನ್ನು ಹೊಂದಿರುತ್ತದೆ. ಅನಿವಾರ್ಯ ಸಂದರ್ಭಗಳಲ್ಲಿ ಮಾತ್ರ ಮಹಿಳೆಯರು ಕೂಲಿ ಕೆಲಸಕ್ಕೆ ಹೋಗುತ್ತಾರೆ. ಅದೂ ಅವರಿಗೆ ತುಂಬಾ ಪರಿಚಿತರಾದವರ ಹತ್ತಿರ ಮಾತ್ರ ಕೆಲಸಮಾಡುತ್ತಾರೆ. ಉಳಿದಂತೆ ರದ್ದಿ ಆಯುವುದು ಇಲ್ಲ ಮನೆಯಲ್ಲಿದ್ದು ಮಕ್ಕಳ ಪಾಲನೆ, ಪೋಷಣೆಯಲ್ಲಿ ತೊಡಗುವರು. ಗೋಸಂಗಿ ಮಹಿಳೆಯರು ಸಹ ತುಂಬಾ ಚುರುಕು ಬುದ್ಧಿಯುಳ್ಳವರಾಗಿದ್ದು, ಯಾವುದೇ ಕೆಲಸವನ್ನು ಕೊಟ್ಟರೂ ಯಶಸ್ವಿಯಾಗಿ ನಿಭಾಯಿಸಿಬಲ್ಲಂತವರು. ಸರ್ಕಾರ ಮಹಿಳೆಯರ ಅಭಿವೃದ್ಧಿಗಾಗಿಯೇ ಅನೇಕ ಯೋಜನೆಗಳನ್ನು ಕಾರ್ಯರೂಪಕ್ಕೆ ತಂದಿದ್ದಾರೆ. ಆದರೆ ಇವುಗಳ ಸೌಲಭ್ಯವನ್ನು ಪಡೆಯುವಲ್ಲಿ ವಿಫಲರಾಗಿದ್ದಾರೆ. ಕಾರಣ ಇವರಲ್ಲಿ ಇನ್ನೂ ಶಿಕ್ಷಣದ ಜಾಗೃತಿ ಮೂಡಿಲ್ಲ. ಎಲ್ಲಿಯವರೆಗೂ ಇಂತಹ ಅಲೆಮಾರಿ ಸಮುದಾಯಗಳು ಒಂದೆಡೆ ನೆಲೆ ನಿಂತು ತಮ್ಮ ಮಕ್ಕಳಿಗೆ ಶಿಕ್ಷಣ ಕೊಡಿಸುವುದಿಲ್ಲವೋ ಅಲ್ಲಿಯವರೆಗೆ ಆರ್ಥಿಕ ಮುಗ್ಗಟ್ಟನ್ನು ಎದುರಿಸುತ್ತಿರುತ್ತಾರೆ.

ಹೀಗೆ ಗೋಸಂಗಿ ಸಮುದಾಯದ ಪುರುಷ ಮತ್ತು ಮಹಿಳೆಯರು ವಿವಿಧ ರೀತಿಯ ಕಸುಬುಗಳನ್ನು ಅವಲಂಬಿಸಿದ್ದಾರೆ. ಆದರೆ ಈ ಹಿಂದೆ ವಿವರಿಸಿದ ಕಸುಬುಗಳಾವುವು ಅವರ ಆರ್ಥಿಕ ಸ್ಥಿತಿಯನ್ನು ಸುಧಾರಿಸುವಲ್ಲಿ ಸಹಕಾರಿಯಾಗಿಲ್ಲ. ಕಾರಣ ಇವರು ಅವಲಂಬಿಸಿರುವ ಕಸುಬುಗಳೆಲ್ಲವು ತಾತ್ಕಾಲಿಕ ಬೇಡಿಕೆಯುಳ್ಳವ ಇಂತಹ ಕಸುಬುಗಳಿಂದ ನಿರೀಕ್ಷಿತ ಮಟ್ಟದ ಆದಾಯವನ್ನು ತರಬಲ್ಲರೆಂದು ಖಚಿತವಾಗಿ ಹೇಳಲು ಸಾಧ್ಯವಿಲ್ಲ. ಇವು ಸ್ವಂತ ಬುದ್ಧಿಶಕ್ತಿಯಿಂದ ನಿಭಾಯಿಸುವ ಕೆಲಸಗಳಾಗಿರುವುದರಿಂದ ಪ್ರತಿಯೊಬ್ಬರ ಶ್ರಮದ ಫಲದಲ್ಲಿ ವ್ಯತ್ಯಾಸಗಳು ಕಂಡುಬರುವುದು ಸಾಮಾನ್ಯವಾಗಿದೆ. ವಿವಿಧ ಪ್ರದೇಶಗಳಲ್ಲಿ ವಾಸಿಸುವ ಗೋಸಂಗಿಗಳು ಅವಲಂಬಿಸಿರುವ ಕೆಲವೊಂದು ಕಸುಬುಗಳಲ್ಲಿ ಸಾಮ್ಯತೆಗಳಿದ್ದರೂ ಸಹ ಅವುಗಳಿಂದ ಬರುವ ಆದಾಯದಲ್ಲಿ ಸಾಮ್ಯತೆಗಳಿರುವುದಿಲ್ಲ. ಯಾವ ಪ್ರದೇಶದಲ್ಲೂ ಇಂತಹ ಕಸುಬುಗಳಿಗೆ ನಿಗಧಿತ ಬೆಲೆಯಾಗಲಿ, ಬೆಂಬಲ ಬೆಲೆಯಾಗಲಿ ಇರುವುದಿಲ್ಲ. ಇಂತಹ ಕೆಲಸಗಳಿಂದ ಇಂತಿಷ್ಟು ಲಾಭ ಸಿಗುತ್ತದೆ ಎಂದು ನಿರೀಕ್ಷಿಸುವುದು ಕಷ್ಟ ಸಾಧ್ಯ. ಹಾಗಾಗಿ ಇಂತಹ ಅಸ್ಥಿರ ಕಸುಬುಗಳನ್ನು ನಚ್ಚಿಕೊಂಡು ಬದುಕುವ ಬಹುತೇಕ ಎಲ್ಲಾ ಗೋಸಂಗಿಗಳ ಆರ್ಥಿಕ ಸ್ಥಿತಿ ತುಂಬಾ ಶೋಚನೀಯವಾಗಿರುವುದು ಕಂಡುಬರುತ್ತಿದೆ. ಸೂಕ್ಷ್ಮ ಬುದ್ಧಿಯುಳ್ಳ ಗೋಸಂಗಿಗಳು ಹೊಸ ಕಸುಬುಗಳಿಗೆ ಬೇಗ ಹೊಂದಿಕೊಳ್ಳುತ್ತಾರೆ. ಒಬ್ಬ ವ್ಯಕ್ತಿ ಹಲವು ಕಸುಬುಗಳಲ್ಲಿ ಪರಿಣಿತಿಯನ್ನು ಪಡೆದಿರುತ್ತಾನೆ. ಸಂದರ್ಭಕ್ಕೆ ತಕ್ಕಂತೆ ಆಯಾ ಕಸುಬುಗಳನ್ನು ನಿಭಾಯಿಸಬಲ್ಲನು. ಹೀಗೆ ಸೋಮಾರಿಯಾಗದೇ ನಿರಂತರ ದುಡಿಮೆಯಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವ ಗೋಸಂಗಿಗಳು ಆರ್ಥಿಕವಾಗಿ ಸಬಲರಾಗಬೇಕೆಂದು ಹೆಣಗಾಡುತ್ತಿದ್ದಾರೆ. ನಾನು ಕ್ಷೇತ್ರಕಾರ್ಯ ಮಾಡಿದ ಪ್ರದೇಶಗಳಲ್ಲಿ ಪ್ರದೇಶಕ್ಕೆ ಇಬ್ಬರೂ ಮೂವರು ಮಾತ್ರ ಉತ್ತಮ ಸ್ಥಿತಿಯಲ್ಲಿದ್ದಾರೆ. ಒಬ್ಬೊಬ್ಬರು ತುಂಡು ಜಮೀನನ್ನೂ ಸಹ ಹೊಂದಿದ್ದಾರೆ. ಇದನ್ನು ಬಿಟ್ಟರೆ ಉಳಿದಂತೆ ಬಹುತೇಕ

ಮಂದಿ ಗುಡಾರ ವಾಸಿಗಳಾಗಿದ್ದು, ಸ್ವಂತ ಸೂರು ಕಾಣದೆ ಇನ್ನೂ ಅತಂತ್ರ ಸ್ಥಿತಿಯಲ್ಲಿ ಜೀವನ ಸಾಗಿಸುತ್ತಿದ್ದಾರೆ.

ಆಯಾ ಪ್ರದೇಶದ ಸ್ಥಳೀಯ ರಾಜಕಾರಣಿಗಳು ಚುನಾವಣೆ ಸಂದರ್ಭದಲ್ಲಿ ಮಾತ್ರ ಭರವಸೆಯ ಮಾತುಗಳಿಂದ ಓಟನ್ನು ಪಡೆಯುತ್ತಾ ಬಂದಿದ್ದಾರೆ, ವಿನಃ ಅವರ ಪ್ರಗತಿಯ ಕಡೆಗೆ ಎಂದೂ ಆಲೋಚಿಸಿಲ್ಲ. ಕೆಲವು ಪ್ರದೇಶಗಳಲ್ಲಿ ಸ್ಥಳೀಯ ಹಿರಿಯರ ಸಹಕಾರ ಸಹಾಯ ದೊರೆತಿರುವುದೂ ಉಂಟು. ಆದರೆ ನಿರೀಕ್ಷಿತ ಮಟ್ಟದಲ್ಲಿ ಸರ್ಕಾರದ ಸವಲತ್ತುಗಳನ್ನು ಪಡೆಯಲಾಗಿಲ್ಲ. ಇದಕ್ಕೆ ಕಾರಣ ಒಂದು ಅನಕ್ಷರತೆ, ಮತ್ತೊಂದು ನಿರಂತರ ಅಲೆಮಾರಿತನ. ಇಂತಹ ಅಲೆಮಾರಿಗಳಿಗೆ ಒಂದೆಡೆ ನೆಲೆಸಲು ಒಂದು ಸೂರು, ಸರಿಯಾದ ಶಿಕ್ಷಣ ಅವಲಂಬಿತ ಕಸುಬುಗಳಿಗೆ ಬಂಡವಾಳ ಒದಗಿಸುವುದು. ಇವಿಷ್ಟು ಸಹಾಯವನ್ನು ಸರ್ಕಾರದಿಂದ ಪಡೆದಿದ್ದೇ ಆದರೆ, ಗೋಸಂಗಿಗಳು ಆರ್ಥಿಕ ಮಟ್ಟ ಸುಧಾರಿಸುವಲ್ಲಿ ಯಾವ ಅನುಮಾನವು ಇಲ್ಲ.

## ಗೋಸಂಗಿಗಳ ಕಸಬುಗಳು

ಮನುಷ್ಯ ತನ್ನ ಚರಿತ್ರೆಯ ಆರಂಭದಿಂದಲೂ ಒಂದಲ್ಲಾ ಒಂದು ವೃತ್ತಿಯನ್ನು ಕೈಗೊಂಡಿರುವುದು ಸರಿಯಷ್ಟೆ. ಆಗ ಆತನ ಬದುಕು ಹಸಿವೆ, ನಿದ್ರೆ, ಮೈಥುನಗಳಿಗೆ ಸೀಮಿತವಾಗಿತ್ತು. ಆಹಾರ ಸಂಗ್ರಹಣೆ ಮುಖ್ಯ ಉದ್ದೇಶವಾಗಿದ್ದರಿಂದ 'ಬೇಟೆ' ಆತನ ಮೂಲ 'ವೃತ್ತಿ'ಯಾಗಿತ್ತೆನ್ನಬಹುದು. "ಕಾಲಕ್ರಮೇಣ ಮಾನವನ ಬೌದ್ಧಿಕತೆ ವಿಕಾಸವಾದಂತೆ ವೃತ್ತಿಗಳೂ ವಿಕಾಸಗೊಂಡವು. ಕುಟುಂಬ, ಸಮಾಜ, ಮಂಡಲ, ರಾಷ್ಟ್ರಗಳ ಪರಿಕಲ್ಪನೆ ಅಸ್ತಿತ್ವಕ್ಕೆ ಬಂದಂತೆ ನಿಸರ್ಗಜೀವಿಯಾದ ಮಾನವ ಸಮಾಜಜೀವಿಯಾದನು. ಆಗ ನೈಸರ್ಗಿಕ ವೃತ್ತಿಗಳೊಂದಿಗೆ ಸಾಮಾಜಿಕ ವೃತ್ತಿಗಳೂ ಬೆಳೆದು ಬರುವಂತಾಯಿತು. ಇದರಿಂದ ವೃತ್ತಿಗಳು ಸರಳತೆಯಿಂದ ಸಂಕೀರ್ಣತೆಗೆ ಸರಿಯುತ್ತ ನಡೆದವು."[೧] ಪ್ರಾರಂಭದಿಂದ ಇಂದಿನವರೆಗೂ ವೃತ್ತಿಗಳ ಸ್ವರೂಪ, ಸ್ವಭಾವಗಳಲ್ಲಿ ಕೆಲವೊಂದು ವ್ಯತ್ಯಾಸಗಳನ್ನು ಪಡೆದಿರಬಹುದು. ಕೆಲವೊಂದು ಪ್ರಧಾನ ವೃತ್ತಿಗಳು ಹಾಗೇ ಉಳಿದುಕೊಂಡಿರಬಹುದು. ಇಲ್ಲವೆ ನಾಶವಾಗಿ ಹೊಸ ವೃತ್ತಿಗಳಿಗೆ ದಾರಿಮಾಡಿ ಕೊಟ್ಟಿರಬಹುದು. ಹೀಗೆ 'ವೃತ್ತಿ'ಗಳು ಆಯಾ, ಕಾಲ-ದೇಶಗಳನ್ನು ದಾಟಿ ಬರುವಾಗ ಏನೆಲ್ಲಾ ಬದಲಾವಣೆಗಳನ್ನು ಹೊಂದಿರಬಹುದಾದರೂ ಈ ಬದಲಾವಣೆಗಳ ಕಾಲವನ್ನು ನಿರ್ಣಯಿಸುವುದು ಕಷ್ಟಸಾಧ್ಯ.

ವ್ಯಕ್ತಿಯ ಶ್ರಮ ವೃತ್ತಿಗೆ ಮೂಲವಾಗಿರುವುದರಿಂದ ಶ್ರಮ ಮತ್ತು ವೃತ್ತಿಗಳು ಒಂದಕ್ಕೊಂದು ಪೂರಕ ಹಾಗೂ ಪ್ರೇರಕವಾಗಿ ನಿಂತು ಅವನ ಆರ್ಥಿಕ ಚಟುವಟಿಕೆಯನ್ನು ಹೆಚ್ಚಿಸಿ. 'ವೃತ್ತಿ'ಗೆ ಗೌರವ ಸ್ಥಾನವನ್ನು ತಂದುಕೊಟ್ಟಿದೆ. 'ಉದ್ಯೋಗಂ ಪುರುಷ ಲಕ್ಷಣಂ' ಎನ್ನುವಂತೆ ಉದ್ಯೋಗ (ವೃತ್ತಿ)ವನ್ನು ಹೊಂದಿದ ವ್ಯಕ್ತಿಗೆ ಸಮಾಜ ವಿಶಿಷ್ಟ ಸ್ಥಾನವನ್ನು ಕಲ್ಪಿಸಿಕೊಟ್ಟಿದೆ. ಅಷ್ಟೇ ಅಲ್ಲ ದೇಶದ, ಆರ್ಥಿಕ ಜೀವನದ

ಮೇಲೂ ವಿಶೇಷ ಪರಿಣಾಮವನ್ನು ಬೀರಿದೆ. ಹೀಗೆ ವೃತ್ತಿಯು ಆದಿಯಿಂದ ಆಧುನಿಕ ಯುಗದವರೆಗೆ ಹಲವಾರು ರೂಪಾಂತರಗಳನ್ನು ಹೊಂದುತ್ತಾ ಬಂದಿರುವುದನ್ನು ಇತಿಹಾಸ ದಾಖಲಿಸಿದೆ.

ಅಧ್ಯಯನಕಾರರು ಅನುಕೂಲತೆಗಾಗಿ ವೃತ್ತಿಗಳನ್ನು ನಾಲ್ಕು ಬಗೆಗಳಾಗಿ ವಿಂಗಡಿಸಿದ್ದಾರೆ.

"೧.ಉತ್ಪಾದಕ ವೃತ್ತಿ - (Productive Profession)

೨. ವಿನಿಮಯ ವೃತ್ತಿ - (Exchange Profession)

೩. ಉತ್ಪಾದಕ ವಿನಿಮಯ ವೃತ್ತಿ - (Productive Cum Exchange Profession)

೪. ಇತರ ವೃತ್ತಿ - (Other Profession)"[೨]

ಈ ಮೇಲೆ ವಿಭಾಗಿಸಿದ ವೃತ್ತಿ (ಕಸುಬು)ಯ ವಿಭಾಗ ಕ್ರಮ ಬಹುತೇಕ ಎಲ್ಲಾ ಸಮುದಾಯಗಳಿಗೂ ಅನ್ವಯವಾಗಬಹುದು.

ಮಾನವನ ಆರಂಭದ ವೃತ್ತಿ 'ಬೇಟೆ' ಇತ್ಯಾದಿಗಳನ್ನು 'ನೈಸರ್ಗಿಕ (Natural) ವೃತ್ತಿ'ಗಳೆಂದು ಕರೆದಿದ್ದು, ಅವು ನೈಸರ್ಗಿಕ ಸಂಪನ್ಮೂಲ (Natural Resources)ಗಳನ್ನು ಅವಲಂಬಿಸಿದ ಉತ್ಪಾದನಾ ವೃತ್ತಿಗಳಾಗಿದ್ದವು. ನಂತರ ಬರುಬರುತ್ತಾ ವಿನಿಮಯ, ಉತ್ಪಾದಕ-ವಿನಿಮಯ ಹಾಗೂ ಇತರ ವೃತ್ತಿಗಳಾಗಿ ಮಾರ್ಪಟ್ಟಿರಬೇಕು. ಈ ರೀತಿಯಾಗಿ ವೃತ್ತಿ (ಕಸುಬು)ಗಳು ಮೂಲದಿಂದ ಇಂದಿನವರೆಗೆ ಸ್ವರೂಪ, ಸ್ವಭಾವಗಳಲ್ಲಿ ಕೆಲವೊಂದು ವ್ಯತ್ಯಾಸಗಳನ್ನು ಪಡೆಯುತ್ತಾ ಸಾಗಿಬಂದಿವೆ. ಇನ್ನೂ ಕೆಲವು ವೃತ್ತಿಗಳು ನಶಿಸಿ ಅದರ ಸ್ಥಾನವನ್ನು ಹೊಸ ವೃತ್ತಿಗಳು ಪಡೆದುಕೊಂಡಿವೆ.

ಹೀಗೆ ಮಾನವನು ಹಿಂದಿನಿಂದ ಇಂದಿನವರೆಗೂ ಒಂದಲ್ಲಾ ಒಂದು ವೃತ್ತಿಯನ್ನು ಕೈಗೊಂಡಿರುವುದು ತಿಳಿದುಬರುತ್ತದೆ. ಅದು ಅವನಿಗೆ ಅನಿವಾರ್ಯವಾಗಿತ್ತು ಕೂಡ.

## ಹಿಂದಿನ ಕಸಬುಗಳು

**೧. ಭಿಕ್ಷೆ (ಅಡಗಾವಂಟಿ) :** ಪ್ರಾಚೀನ ಕಾಲದಿಂದಲೂ ದಾನ ಪ್ರವೃತ್ತಿಯನ್ನು ಮಾನವನ ಶ್ರೇಷ್ಠಗುಣಗಳಲ್ಲಿ ಒಂದೆಂದು ಭಾವಿಸಲಾಗಿದೆ. ಪ್ರತಿಯೊಂದು ಧಾರ್ಮಿಕ ಕಾರ್ಯಗಳಲ್ಲಿ ದಾನವು ಪ್ರಮುಖ ಪಾತ್ರವಹಿಸುತ್ತದೆ. ದಾನ ಮಾಡಿದರೆ ಮುಂದೆ ನಮಗೆ ಪುಣ್ಯ ಪ್ರಾಪ್ತಿಯಾಗುವುದೆಂಬ ನಂಬಿಕೆ ಬಹುತೇಕ ಎಲ್ಲಾ ಸಮುದಾಯಗಳಲ್ಲಿದೆ. ಅಷ್ಟೇ ಅಲ್ಲ ದಾನ ಪಡೆಯುವುದು ಸಹ ಅಷ್ಟೇ ಪುಣ್ಯದ ಕೆಲಸವೆಂದು ಬಗೆದು ಎಷ್ಟೋ ಸಮುದಾಯಗಳು ಧಾರ್ಮಿಕ ಭಿಕ್ಷುಕರಾಗಿರುವುದು ಕಂಡುಬರುತ್ತದೆ. ಮಹಾಭಾರತದ ಕರ್ಣ ತನ್ನ ಕುಲಹೀನತೆಯನ್ನು ಹೋಗಲಾಡಿಸಿಕೊಳ್ಳುವ ಸಲುವಾಗಿ ಎಲ್ಲವನ್ನು ತ್ಯಾಗಮಾಡಿ 'ದಾನಶೂರ ವೀರಕರ್ಣ' ಎಂಬ ಬಿರುದನ್ನು ಪಡೆದಿರುವುದು ತಿಳಿದುಬರುತ್ತದೆ. 'ಚಾಗದ ಭೋಗದಕ್ಕರದ ಗೇಯದ ಗೊಟ್ಟಿಯ ಅಲಂಪಿನಿಂಪುಗಳ್‌ಗೆ ಆಗರಮಾದ...' ನಮ್ಮ ದೇಶದಲ್ಲಿ ಇತಿಹಾಸದುದ್ದಕ್ಕೂ ಒಂದಲ್ಲಾ ಒಂದು ಬಗೆಯಲ್ಲಿ ದಾನದ ಜಂಗಮತನವಿರುವುದು ದಾಖಲೆಗೊಂಡಿದೆ. ಈ ರೀತಿಯಾಗಿ ಧರ್ಮದ

ರಕ್ಷ ಕವಚವನ್ನು ಹೊಂದಿದ ಭಿಕ್ಷಾ ವೃತ್ತಿಗೆ ಸಮಾಜದಲ್ಲಿ ಹೆಚ್ಚಿನ ಪ್ರಾಶಸ್ತ್ಯವಿದೆ. ಆದರೆ ಇತ್ತೀಚೆಗೆ ದಿನನಿತ್ಯದ ಕೂಳಿಗೆ ಗತಿಯಿಲ್ಲದ ಎಷ್ಟೋ ಜನ ದುಡಿದು ತಿನ್ನುವ ಮನಸ್ಸು ಮಾಡದೆ ಭಿಕ್ಷಾಟನೆಯನ್ನೇ ವೃತ್ತಿಯನ್ನಾಗಿಸಿಕೊಂಡಿರುವುದು ದುರ್ದೈವ ಸಂಗತಿ. ಆಧುನಿಕಯುಗದಲ್ಲಿ ಭಿಕ್ಷಾಟನೆ ಒಂದು ವೃತ್ತಿಯಾಗಿ ಪರಿಣಮಿಸಿ ಬಗೆಹರಿಸಲಾರದ ಸಮಸ್ಯೆಯಾಗಿದೆ.

ಇಂದು ಅರೆ ಅಲೆಮಾರಿಗಳಾಗಿ (Semi Nomadic) ಜೀವನ ಸಾಗಿಸುತ್ತಿರುವ ಗೋಸಂಗಿಗಳಿಗೆ ಮೂಲ ಅಥವಾ ಪ್ರಧಾನ ಎನ್ನಬಹುದಾದಂತಹ ಕಸುಬುಗಳಿರುವುದು ಕಂಡುಬರುತ್ತಿಲ್ಲ. ಯಾವುದೇ ರೀತಿಯ ಸ್ಥಿರಾಸ್ತಿಗಳನ್ನು ಹೊಂದಿರದ ಇವರು ತಮ್ಮ ನಿರಂತರ ಅಲೆಮಾರಿತನದಲ್ಲಿ ಬೇಟೆ ಮತ್ತು ಭಿಕ್ಷೆ ಅನಿವಾರ್ಯವಾಗಿರಬೇಕು. ಇವರು ಕೇಳುವ ಭಿಕ್ಷೆ ಯಾವ ಬಗೆಯದ್ದೆಂದು ಇಲ್ಲಿಯವರೆಗೂ ತಿಳಿದುಬಂದಿಲ್ಲ. ಭಿಕ್ಷಾಟನೆಯೇ ನಮ್ಮ ಮೂಲ ಕಸುಬು ಎಂದು ವಕ್ತೃ ಹೇಳಿದರೂ ಸಹ ಅದಕ್ಕೆ ಪೂರಕವಾದ ಯಾವುದೇ ರೀತಿಯ ಐತಿಹ್ಯಗಳಾಗಲಿ, ಅಥವಾ ಸಾಹಿತ್ಯಿಕ ಆಧಾರಗಳಾಗಲಿ ಕಂಡುಬರುತ್ತಿಲ್ಲ. ಆದರೆ ಅವರಲ್ಲಿ ಬಳಕೆಯಲ್ಲಿರುವ ಗಾದೆಗಳನ್ನು ಗಮನಿಸಿದಾಗ ಭಿಕ್ಷಾಟನೆಯನ್ನೇ ಹೆಚ್ಚು ಅವಲಂಬಿಸಿರುವುದು ಕಂಡುಬರುತ್ತದೆ. ಆದರೆ ಇದು ಧಾರ್ಮಿಕ ಭಿಕ್ಷೆಯೇ ಅಥವಾ ನಿರ್ಗತಿಕರಾಗಿ ದಿನಿತ್ಯದ ಕೂಳಿಗೆ ಗತಿಯಿಲ್ಲದೆ ಮನೆಮನೆಯಲ್ಲಿ ಬೇಡಿ ತಿನ್ನುವ ಅನಾಥ ಭಿಕ್ಷಾಟನೆಯೇ ಎಂಬುದು ಸ್ಪಷ್ಟವಾಗಿ ತಿಳಿಯುತ್ತಿಲ್ಲ.

೧. 'ಕೆತನೋ ಮಾಡಿ ಕೆತನೋ ಸಾಹುಕಾರ್ ಹೋಯೇತೂ
ಅಪಾರಿ ಜೋಗಿ ಜಾತ್ರಿ ಪದ್ಧತಿ ಕೋನಿ ಜಾವರಿ'

ಕನ್ನಡ: ಎಷ್ಟೇ ಅಂತಸ್ತಿನ ಮಹಡಿ ಕಟ್ಟಿ ಸಾಹುಕಾರ್‌ನಾದ್ರೂ
ನಮ್ಮ ಭಿಕ್ಷಾ ವೃತ್ತಿ ಹೋಗಲಾಡಿಸಲು ಸಾಧ್ಯವಿಲ್ಲ.

೨. ಕೆತನೋ ರಿಯಾತೋ ಲೋಕ್ ಲೋಕೆಚ್
ಕೆತನೋ ರಿಯಾತೋ ಅಪನೇ ಜೋಗಿ ಜೋಗಿಚ್
ಕೆತನೋ ರಿಯಾತೋ ಅಪೇ ಮಾಂಗೀನ್ ಕಾವಳಾಚ್

ಕನ್ನಡ: ಎಷ್ಟೇ ಆದ್ರೂ ಬೇರೆಯವರು ಬೇರೆಯವೇ
ಎಷ್ಟೇ ಆದ್ರೂ ನಮ್ಮ ಜೋಗಿ ಜೋಗಿಗಳೇ
ಎಷ್ಟೇ ಆದ್ರೂ ನಾವು ಭಿಕ್ಷೆ ಬೇಡಿ ತಿನ್ನಬೇಕು.

ಈ ಮೇಲಿನ ಮಾತುಗಳನ್ನು ಗಮನಿಸಿದಾಗ ಭಿಕ್ಷಾಟನೆ ಅವರ ಬದುಕಿನ ಅವಿಭಾಜ್ಯ ಅಂಗವಾಗಿದ್ದು ಅದರ ಬಗೆಗೆ ಅವರಿಗಿರುವ ನಂಬಿಕೆ ಕಟ್ಟುಕಟ್ಟಳೆಗಳನ್ನು ತಿಳಿಸುತ್ತದೆ. ಹಾಗಾಗಿ ಗೋಸಂಗಿಗಳಲ್ಲಿ ಭಿಕ್ಷಾಟನೆ ಬಹುಹಿಂದಿನಿಂದಲೂ ಇರಬಹುದಾದರೂ ಅದರ ಹಿಂದಿನ ಸತ್ಯ ಏನೆಂಬುದು ಇನ್ನೂ ಸ್ಪಷ್ಟವಾಗುತ್ತಿಲ್ಲ. ಆದರೆ ಸ್ವಲ್ಪ ಮಟ್ಟಿಗೆ ಊಹೆಗೆ ಇಲ್ಲಿ ಅವಕಾಶವಿದೆ. ಈಗಲೂ ಸಹ ನಾಥಪಂಥವನ್ನು ಸ್ವಲ್ಪಮಟ್ಟಿಗೆ ಅನುಸರಿಸುತ್ತಿರುವ ಗೋಸಂಗಿಗಳು ಅದರ ಪ್ರಭಾವದಿಂದ ಈ ಭಿಕ್ಷಾಟನ ವೃತ್ತಿಗೆ ಇಳಿದಿರಬಹುದೇನೋ, ಆದರೆ ಖಚಿತವಾಗಿ ಹೇಳಲಾಗದು. ಗೋಸಂಗಿಗಳ ಭಿಕ್ಷೆ ಆದಿಕಾಲದಲ್ಲಿ ಧಾರ್ಮಿಕ ಆಚರಣೆಯಾಗಿದ್ದು, ಇತ್ತೀಚಿನ ದಿನಗಳಲ್ಲಿ ಸಾಮಾಜಿಕ ಸಮಸ್ಯೆಯಾಗಿ ಪರಿಣಮಿಸಿದೆ.

ಮಾಂಸಹಾರಿಗಳಾದ ಗೋಸಂಗಿಗಳು ಊರಿಗೆ ಸ್ವಲ್ಪ ದೂರದಲ್ಲಿ ಸುರಕ್ಷಿತವಾದ ಸ್ಥಳದಲ್ಲಿ ಡೇರಾಗಳನ್ನು ನಿರ್ಮಿಸಿಕೊಳ್ಳುತ್ತಾರೆ. ಬದುಕುವ ಕಲೆಯನ್ನು ಚೆನ್ನಾಗಿ ಅರಿತಿರುವ ಇವರು, ಯಾವುದೇ ಕೆಲಸವನ್ನು ಶ್ರದ್ಧೆಯಿಂದ ಮಾಡಿಮುಗಿಸುವರು. 'ಉದರ ನಿಮಿತ್ತಂ ಬಹುಕೃತ ವೇಷಂ' ಎನ್ನುವಂತೆ ವಿವಿಧ ರೀತಿಯ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ.

ಗೋಸಂಗಿ ಸಮುದಾಯದ ಎಲ್ಲರೂ ಭಿಕ್ಷಾಟನೆ ಮಾಡುವುದಿಲ್ಲ. ಒಂದೊಂದು ಗುಂಪಿನಲ್ಲಿ ಐದಾರು ಜನರು ಮಾತ್ರ ಈ ಕೆಲಸವನ್ನು ಮಾಡುತ್ತಾರೆ. ಅದರಲ್ಲೂ ಹಿರಿಯರು ಈ ವೃತ್ತಿಯಲ್ಲಿ ತೊಡಗಿರುತ್ತಾರೆ. ಭಿಕ್ಷೆಗೆ ಹೊರಡುವಾಗ ಒಬ್ಬರು ಒಂದೊಂದು ವೇಷವನ್ನು ಧರಿಸುವರು. ಕೆಲವರು ಸಾಧು ವೇಷ ಧರಿಸಿದರೆ ಇನ್ನೂ ಕೆಲವರು, ಫಕೀರನ ವೇಷ ಧರಿಸಿ ಊರೊಳಗೆ ಭಿಕ್ಷಾಟನೆಗೆ ಹೋಗುವರು. ಆಯಾವೇಷದ ಧರ್ಮ ಚೆನ್ನಾಗಿ ಅರಿತಿರುವರು.

ವೇಷ ಧರಿಸಿ ಊರೊಳಗೆ ಪ್ರವೇಶಿಸಿದ ಗೋಸಂಗಿಗಳು ಮನೆಯ ಮುಂದೆ ನಿಂತು 'ಜೈ ಸೀತಾರಾಮ್' ದೇವರು ನಿಮಗೆ 'ಒಳ್ಳೇದು ಮಾಡ್ಲಿ ನಿಮ್ಮ ಕೈಲಾದ ಕಾಣಿಕೆ ನೀಡ್ರಿ' ಎಂದು ಹೇಳಿ ಕಾಣಿಕೆಪಡೆದು, ಕೊಟ್ಟ ಕೈಗಳಿಗೆ ಹರಸಿ, ಕೊಡುವ ಕೈಗಳ ಕಡೆಗೆ ಹೆಜ್ಜೆಹಾಕುವರು. ಹೀಗೆ ಉದರನಿಮಿತ್ತ ತಮ್ಮ ದಿನದ ಚಟುವಟಿಕೆಗಳು ಪ್ರಾರಂಭವಾಗುತ್ತವೆ. ದೇವರು ಧರ್ಮದ ಬಗೆಗೆ ಅಪಾರ ಭಕ್ತಿಶ್ರದ್ಧೆಯುಳ್ಳ ಭಾರತೀಯರು, ದಾನ, ಧರ್ಮ, ಪರೋಪಕಾರದಂತಹ ಕೆಲಸಗಳಿಗೆ ಯಾವತ್ತೂ ಸಹಕರಿಸುತ್ತಾ ಬರುತ್ತಿದ್ದಾರೆ. ಹಾಗಾಗಿ ಗೋಸಂಗಿಗಳು ಎಲ್ಲೇ ಹೋಗಲಿ ಭಿಕ್ಷೆ ಇಲ್ಲದೆ ಹಿಂತಿರುಗಿದ ಸಂದರ್ಭವೇ ಇಲ್ಲ. ಬಹುಭಾಷ ಪ್ರವೀಣರಾದ (ಹಿಂದಿ ಮರಾಠಿ, ಉರ್ದು, ತೆಲುಗು, ಕನ್ನಡ, ತಮಿಳು... ಇತ್ಯಾದಿ) ಅಲೆಮಾರಿ ಗೋಸಂಗಿಗಳು ಯಾವ ಪ್ರದೇಶಕ್ಕೆ ಹೋಗಲಿ ಒಂದೊತ್ತಿನ ಕೂಳಿಗೇನು ಕೊರತೆ ಇಲ್ಲ ಆದರೆ ಇತರರಂತೆ ಒಂದು ಕಡೆ ನೆಲೆ ನಿಲ್ಲಲು ಬೇಕಾದ ಸ್ಥಳವಿಲ್ಲವೆಂಬ ಕೊರಗು ಇದ್ದೇ ಇದೆ. ಇತ್ತೀಚೆಗೆ ಸರ್ಕಾರ ಭಿಕ್ಷುಕಧಾಮಗಳನ್ನು (Beggers Colonies) ತೆರದಿದ್ದು, ಭಿಕ್ಷೆ ಬೇಡುವುದು ಕಾನೂನು ರೀತ್ಯಾ ಶಿಕ್ಷಾರ್ಹವೆಂದು ಘೋಷಿಸಿರುವುದರಿಂದ ಈ ವೃತ್ತಿ ಕೈಗೊಳ್ಳುವವರಿಗೂ ತೊಂದರೆಯಾಗಿದೆ. ಹಾಗಾಗಿ ಇಂದು ಗೋಸಂಗಿಗಳಂತಹ ಎಷ್ಟೋ ಅಲೆಮಾರಿ ಸಮುದಾಯಗಳು ಯಾವುದನ್ನು ತನ್ನದೆಂದು ನಂಬಿಕೊಂಡು ಬದುಕುವ ಸ್ಥಿತಿಯಲ್ಲಿಲ್ಲದಂತಾಗಿದೆ. ಅಂದರೆ ಹಳೇ ವೃತ್ತಿಯನ್ನೇ ಕೈಗೊಳ್ಳಲು ಸರ್ಕಾರ ಅವಕಾಶ ಮಾಡಿಕೊಡಬೇಕೆಂದು ನನ್ನವಾದವಲ್ಲ. ಇಂತಹ ಅಲಕ್ಷಿತ ಸಮುದಾಯಗಳಿಗೆ ಪರ್ಯಾಯವಾದಂತಹ ಮಾರ್ಗವನ್ನು ಸೂಚಿಸಿ. ಸಮಾಜದಲ್ಲಿ ಅವರಿಗೂ ಸಮಾನ ಸ್ಥಾನಮಾನಗಳನ್ನು ಕಲ್ಪಿಸಿದರೆ ಬದುಕಲು ಅನುವು ಮಾಡಿದಂತಾಗುತ್ತದೆ.

**ಶಾಸ್ತ್ರ ಹೇಳುವುದು (ಸಬ್ಬಾವ್ ಲಿಗಿಯೋ) :** ಶಾಸ್ತ್ರ ಹೇಳುವ ವೃತ್ತಿ ನಮ್ಮ ಪೂರ್ವಜರಿಂದ ಬಂದದ್ದು ಎಂದು ಗೋಸಂಗಿಗಳು ಹೇಳಿಕೊಳ್ಳುತ್ತಾರೆ.

"ಕೆತನೋ ಕದೋತೋ ಆಡ್‌ಗಾವುಟಿಧಂದೋ ಬಡೇ ಹೈ
ಚಾರ್ ಘರ್ ಮಾಂಗೇತೋ
ಚಲಾಯಿನೆತೋ ಆನ್-ದಾನ್ ಲಾವೆ"

ಕನ್ನಡ: ಎಷ್ಟೇ ಆದ್ರೂ ಶಾಸ್ತ್ರ ವೃತ್ತಿ ದೊಡ್ಡದು
ನಾಲ್ಕು ಮನೆ ಸುತ್ತಿದ್ರೆ ಸಾಕು
ಹೊರಲಿಕ್ಕಾದಷ್ಟು ಕಾಳು-ಕಡಿ ತರಬಹುದು.

ಹೀಗೆ ಶಾಸ್ತ್ರ ಹೇಳುವ ವೃತ್ತಿಯ ಬಗ್ಗೆ ಅವರಿಗಿರಬಹುದಾದ ಬದ್ಧತೆ, ಅದರಿಂದ ಅವರಿಗೆ ಉಂಟಾಗುವ ಲಾಭ ಎಂತಾದ್ದು ಎಂಬುದು ಈ ಮೇಲಿನ ವಾಕ್ಯದಿಂದ ತಿಳಿದುಬರುತ್ತದೆ. ಈ ಶಾಸ್ತ್ರ ವೃತ್ತಿಯ ಬಗ್ಗೆ ಮೌಖಿಕವಾಗಿ ಉಳಿದುಕೊಂಡು ಬಂದ ಈ ವಾಕ್ಯವೊಂದನ್ನು ಬಿಟ್ಟರೆ, ಉಳಿದಂತೆ ಸಾಹಿತ್ಯಿಕವಾಗಿಯಾಗಲಿ, ಇನ್ನಿತರ ಆಧಾರಗಳಾಗಲಿ ಲಭ್ಯವಿಲ್ಲ. ಆದರೆ ಈ ಶಾಸ್ತ್ರ ವೃತ್ತಿಗೆ ಬಹುದಿನಗಳ ಇತಿಹಾಸವಿರಬಹುದಾದರೂ ಖಚಿತವಾಗಿ ಕಾಲವನ್ನು ನಿರ್ಣಯಿಸಲು ಕಷ್ಟ ಸಾಧ್ಯ, ಅಲೆಮಾರಿಗಳ ಇಂತಹ ಎಷ್ಟೋ ವೃತ್ತಿಗಳಿಗೆ ಮೂಲವನ್ನು ಹುಡುಕಲು ಸಾಧ್ಯವಾಗಿಲ್ಲ. ನಿರಂತರ ಪರಿವರ್ತನೆಯ ತಮ್ಮ ಬದುಕಿನೊಂದಿಗೆ ವೃತ್ತಿಗಳಲ್ಲೂ ಕೆಲವೊಂದು ಬದಲಾವಣೆಗಳು ಅವರಿಗೆ ಅನಿವಾರ್ಯವಾಗುತ್ತವೆ. ಈಗಲೂ ಹ ಗೋಸಂಗಿಗಳ ಹಿರಿಯರು ಶಾಸ್ತ್ರ ವೃತ್ತಿಯನ್ನು ತಪ್ಪದೇ ಮುಂದುವರಿಸಿಕೊಂಡು ಬರುತ್ತಿರುವುದನ್ನು ನಾನು ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಗಮನಿಸಿದ್ದೇನೆ. ಸುತ್ತಮುತ್ತಲ ಹಳ್ಳಿಯ ಜನ ಇವರಲ್ಲಿಗೆ ಬಂದು ಶಾಸ್ತ್ರವನ್ನು ಕೇಳಿ ಸೂಕ್ತ ಸಂಭಾವನೆ ನೀಡಿ ಹೋಗುತ್ತಾರೆ. ಹಾಗಾಗಿ ಗೋಸಂಗಿಗಳಲ್ಲಿ ಈಗಲೂ ಹ ಶಾಸ್ತ್ರ ವೃತ್ತಿ ತನ್ನತನವನ್ನು ಉಳಿಸಿಕೊಂಡು ಬಂದಿದೆ.

. ಕೈಶಾಸ್ತ್ರ : ಅಂಗೈಯಲ್ಲಿನ ರೇಖೆಗಳನ್ನು ನೋಡಿ ಭವಿಷ್ಯ ಹೇಳುವುದಕ್ಕೆ ಕೈಶಾಸ್ತ್ರ, ಹಸ್ತಸಾಮುದ್ರಿಕ ಎಂದು ಸಹ ಕರೆಯುವರು. ನಿರಕ್ಷರಿಗಳಾದ ಗೋಸಂಗಿಗಳು ಶಾಸ್ತ್ರ ಹೇಳುವುದನ್ನು ಶಾಸ್ತ್ರೀಯವಾಗಿ ತಿಳಿಯದೇ ಇದ್ದರೂ ತಮ್ಮ ಅನುಭವದ ತಳಹದಿಯ ಮೇಲೆ ನಿಂತು, ವ್ಯಕ್ತಿಯ ಅಂಗೈಯಲ್ಲಿನ ರೇಖೆಗಳನ್ನು ನೋಡಿ ಭವಿಷ್ಯ (Prediction) ಹೇಳುವರು.

ಕೈಶಾಸ್ತ್ರ ಹೇಳುವಾಗ ಕೆಲವೊಂದು ಸಾಮಾನ್ಯ ನಿಯಮಗಳನ್ನು ಅನುಸರಿಸುವರು. ಪುರುಷರ ಬಲ ಅಂಗೈ, ಸ್ತ್ರೀಯರ ಬಲ ಎಡ ಅಂಗೈಯಲ್ಲಿನ ರೇಖೆಗಳನ್ನು ನೋಡಿ ಆ ರೇಖೆಗಳಿಗೆ ಒಂದೊಂದು ಹೆಸರಿನಿಂದ ಕರೆದು ಅವುಗಳ ಕಾರ್ಯವೇನು ಎಂಬುದನ್ನು ತಿಳಿಸುವರು. ಸಾಮಾನ್ಯವಾಗಿ ಗುರುತಿಸುವ ರೇಖೆಗಳೆಂದರೆ ಸತಿಪತಿರೇಖೆ, ಆಯುಷ್ಯರೇಖೆ, ಧನರೇಖೆ, ಕತ್ತರಿ, (ರೇಖೆಗಳು ಒಂದರ ಮೇಲೊಂದು ಛೇದಿಸಿಕೊಂಡು ಹೋಗಿದ್ದಾರೆ), ನಾಯಿಗೆರೆ, ಚಕ್ರ ಹೀಗೆ ಇನ್ನೂ ಮುಂತಾಗಿ ಕೈಯಲ್ಲಿನ ರೇಖೆಗಳಿಗೆ ಹೆಸರಿಸಿ ಅವು ಯಾವ ಯಾವ ವ್ಯಕ್ತಿಗಳಲ್ಲಿವೆಯೋ, ಆ ವ್ಯಕ್ತಿಗೆ ಅವುಗಳಿಂದಾಗುವ ಲಾಭ-ನಷ್ಟವೇನು ಎಂಬುದನ್ನು ತಿಳಿಸುವರು.

೩. ಕೈಚಳಕ : ಇಲ್ಲದ ವಸ್ತುವೊಂದನ್ನು ಸೃಷ್ಟಿಮಾಡಿದೆ ಎಂದು ತೋರಿಸುವ ಕೆಲಸ ಈ ಸಂದರ್ಭದಲ್ಲಿ ನಡೆಯುತ್ತದೆ. ಕೈಯ ಚಲನವಲನಗಳ ಮೂಲಕವೇ ಇಲ್ಲಿ ವಸ್ತುಗಳನ್ನು ಸೃಷ್ಟಿಸಿದೆ ಎಂಬ ಭ್ರಮೆಯನ್ನು ನೋಡುಗರಲ್ಲಿ ಆಕರ್ಷಣೆ ಉಂಟು ಮಾಡಿಸುವನು. ಇದನ್ನು ನೋಡಿದವರು ಪವಾಡ ವೆಂದೇ ಭಾವಿಸುವರು. ಹಾಗಾಗಿ ಇದು ಸಂಪೂರ್ಣ ಕೈಚಳಕಕ್ಕೆ ಸಂಬಂಧಿಸಿದ ಕ್ರಿಯೆಯೆಂಬುದು ಯಾರಿಗೂ ತಿಳಿಯುವುದಿಲ್ಲ.

ಗೋಸಂಗಿಗಳು ಮಾಡುವ ಕೈಚಳಕ ಅತ್ಯಂತ ಸರಳವಾಗಿರುತ್ತದೆ. ಇದಕ್ಕೆ ಬೇಕಾದ ಪರಿಕರಗಳನ್ನು ಅವರೇ ತಯಾರಿಸಿಕೊಳ್ಳುತ್ತಾರೆ. ತಮ್ಮ ನಿತ್ಯದ ಬದುಕಿನಲ್ಲಿ ಬಳಸುವ ವಸ್ತುಗಳೇ 'ಕೈಚಳಕ' ಮಾಡಲು ಸಹಾಯಕವಾಗಿವೆ. ಬುದ್ಧಿ ಪ್ರಧಾನವಾದ ಇಂತಹ ಕೆಲಸಗಳನ್ನು ಗೋಸಂಗಿಗಳು ಯಶಸ್ವಿಯಾಗಿ ನಿಭಾಯಿಸಬಲ್ಲರು. ಸ್ಥಿರಾಸ್ಥಿಗಳಿಲ್ಲದ ಗೋಸಂಗಿಗಳು ತಮ್ಮ ಅಲೆಮಾರಿ ಬದುಕಿನಲ್ಲಿ ಒಬ್ಬೊಬ್ಬರು ಒಂದೊಂದು ವೇಷವನ್ನು ಹಾಕಿಕೊಂಡು ಒಂದೊತ್ತಿನ ಕೂಳನ್ನು ಸಂಪಾದಿಸುವರು.

ಬಿಳಿ ಪಂಚೆಯಿಂದ ಗಲಬಂಧಿ ಕಟ್ಟಿಕೊಂಡು, ಕೊರಳಲ್ಲಿ ವಿವಿಧ ನಮೂನೆಯ ರುದ್ರಾಕ್ಷಿಯನ್ನು ಹಾಕಿ, ಕೈಯಲ್ಲಿ ಕಮಂಡಲವನ್ನು ಹಿಡಿದು ಜೋಳಿಗೆಯನ್ನು ಹೆಗಲಿಗೇರಿಸಿ ಊರೊಳಗೊರಟರೆ ಜೋಳಿಗೆ ತುಂಬಿಸಿಕೊಂಡೇ ಹಿಂತಿರುಗುವನು. ಭಿಕ್ಷೆಗೆ ಹೊರಡುವಾಗ ಜೋಳಿಗೆಯಲ್ಲಿರುವ ಕೈಚಳಕದ ವಸ್ತುಗಳೆಂದರೆ ಬಟ್ಟೆಯಿಂದ ತಯಾರಿಸಿದ ನಿಂಬೆಹಣ್ಣಿನ ಗಾತ್ರದ ದುಂಡನೆಯ ಐದು ಉಂಡೆಗಳು, ಸ್ವಲ್ಪ ಅಕ್ಕಿ ಕಾಳು, ಹೂವು, ಅರಿಶಿಣ, ಕುಂಕುಮ, ಸೆಗಣಿ ಕುಳ್ಳನ್ನು ಸುಟ್ಟು ಮಾಡಿದ ಬೂದಿ ಹೀಗೆ ಇವುಗಳನ್ನು ಮುಂಚಿತವಾಗಿಯೇ ಸಿದ್ಧಪಡಿಸಿಟ್ಟುಕೊಂಡು, ಸಮಯ ಸಂದರ್ಭ ನೋಡಿ ಆ ಪರಿಕರಗಳನ್ನು ಬಳಸಿಕೊಂಡು ಹಣ ಸಂಪಾದನೆ ಮಾಡುವರು.

೩.೧. ರುದ್ರಾಕ್ಷಿಯಿಂದ ತೀರ್ಥ ಬರಿಸುವುದು : ಕೈಚಳಕದಿಂದ ಮಾಡಬಹುದಾದಂತಹ ಈ ಕ್ರಿಯೆಯನ್ನು ಗೋಸಂಗಿಗಳು ಚೆನ್ನಾಗಿ ಮಾಡಬಲ್ಲರು. ಊರಲ್ಲಿ ಭಿಕ್ಷೆ ಬೇಡಲು ಹೋದ ಸಂದರ್ಭದಲ್ಲಿ ವ್ಯಕ್ತಿಗಳ ದೌರ್ಬಲ್ಯಗಳನ್ನು ನೋಡಿಕೊಂಡು ಅವರೊಂದಿಗೆ ಮಾತಿಗಿಳಿದು ಯೋಗಕ್ಷೇಮ ವಿಚಾರಿಸುತ್ತಾ ತನ್ನಲ್ಲಿರುವ ಯಾವ ತಂತ್ರಕ್ಕೆ ಈ ವ್ಯಕ್ತಿ ಬಲಿಯಾಗಬಹುದೆಂದು ಮನಸ್ಸಿನಲ್ಲಿ ಲೆಕ್ಕಾಚಾರ ಹಾಕಿ ತನ್ನತ್ತ ಗಮನ ಸೆಳೆದು, 'ನೋಡು ನಾನೇಳಿದ್ದು ಮಾಡು ದೇವರ್‍ರು ನಿನಗೆ ಒಳ್ಳೇದು ಮಾಡ್ತಾನೆ ನಿನ್ನ ಕೈಲಾದ ಕಾಣಿಕೆ ಇಡು ರುದ್ರಾಕ್ಷಿಯಿಂದ ತೀರ್ಥ ಕೊಡ್ತೀನಿ ನಿನ್ನ ಕಷ್ಟ ಪರಿಯಾರಾಗುತ್ತೆ. ನೀನು ಇನ್ನೂ ಹೆದ್ರಬೇಕಾಗಿಲ್ಲ. ಸ್ವಲ್ಪಹೊತ್ತು ಕಣ್ ಮುಚ್ಚಿಕೊಂಡು ನಿನ್ನ ಮನೆ ದೇವರ್‍ನ ನೆನಿ' ಎಂದೇಳಿ ಆ ವ್ಯಕ್ತಿಯ ಕಣ್ಣನ್ನು ಮುಚ್ಚಿಸಿ ಮೊದಲೆ ನೀರಿನಲ್ಲಿ ನೆನಸಿಟ್ಟಿದ್ದ ಬಟ್ಟೆ ಉಂಡೆ (ನಿಂಬೆ ಹಣ್ಣಿನ ಗಾತ್ರದ ದುಂಡನೆಯ ಐದು ಬಟ್ಟೆ ಉಂಡೆಗಳನ್ನು ನೀರಿನಲ್ಲಿ ನೆನೆಸಿ ಒಂದು ಲೋಟದಲ್ಲಿಟ್ಟು ಯಾವಾಗಲೂ ಜೋಳಿಗೆಯಲ್ಲಿಟ್ಟು ಕೊಂಡಿರುತ್ತಾರೆ)ಯೊಂದನ್ನು ಜೋಳಿಗೆಯಿಂದ ಹೊರತೆಗೆದು, ಹೆಬ್ಬೆರಳು ಮತ್ತು ತೋರು ಬೆರಳುಗಳ

ನಡುವೆ ಸಿಕ್ಕಿಸಿಕೊಂಡು 'ಈಗ ಕಣ್ ಬಿಡು, ಹಿಡಿ ಕೈ, ತಗೋ ತೀರ್ಥ' ಎಂದು ಕೊರಳಲ್ಲಿರುವ ರುದ್ರಾಕ್ಷಿಯನ್ನು ಹಿಡಿದು ಹಿಂಡಿ ತೀರ್ಥ ಕೊಡುವನು. (ನೆನಸಿದ ಉಂಡೆ ಕೈಯಲ್ಲಿರುವುದರಿಂದ ನೀರು ಸಹಜವಾಗಿ ಹೊರಬರುತ್ತದೆ) ಹೀಗೆ ರುದ್ರಾಕ್ಷಿಯಿಂದ ಬಂದ ನೀರನ್ನು ತೀರ್ಥವೆಂದು ಬಗೆದ ವ್ಯಕ್ತಿ ಆಶ್ಚರ್ಯಚಕಿತನಾಗಿ ಆತನಿಗೆ ನಮಸ್ಕರಿಸಿ ಕಾಣಿಕೆಕೊಟ್ಟು ಕಳುಹಿಸುವನು. ಹೀಗೆ ಗೋಸಂಗಿಗಳಲ್ಲಿ ನುರಿತ ವ್ಯಕ್ತಿಗಳು ಮಾಡುವ ಇಂತಹ ತಂತ್ರಗಾರಿಕೆಗೆ ಹಳ್ಳಿಗಳಲ್ಲಿ ಹೆಚ್ಚು ಬೆಲೆ ಇದೆ. ಅಂದರೆ ದೇವರು ಧರ್ಮದ ಬಗ್ಗೆ ಅಪಾರ ನಂಬಿಕೆ ಗೌರವವನ್ನಿಟ್ಟಿರುವ ಹಳ್ಳಿಯ ಮುಗ್ಧರು ಗೋಸಂಗಿಗಳು ಮಾಡುವ ಇಂತಹ ತಂತ್ರಗಾರಿಕೆಗೆ ಬಹುಬೇಗ ಬಲಿಯಾಗುವರು. ಈ ರೀತಿಯ ತಂತ್ರಗಾರಿಕೆ ಎಲ್ಲಾ ಪ್ರದೇಶದಲ್ಲಿ ನಡೆಯುವುದಿಲ್ಲ. ಕೆಲವೇ ಕೆಲವು ಆಯ್ದ ಪ್ರದೇಶಗಳಲ್ಲಿ ಮಾತ್ರ ತಮ್ಮ ಕೆಲಸವನ್ನು ಸಾಧಿಸಬಹುದು. ಎಲ್ಲಾ ಕಡೆಗೂ ಈ ತಂತ್ರವನ್ನೂ ಪ್ರಯೋಗಿಸಲು ನೋಡಿದರೆ ಅಪಾಯದಲ್ಲಿ ಸಿಕ್ಕಿಕೊಳ್ಳುವದಂತೂ ಖಚಿತ. ಹಾಗಾಗಿ ತುಂಬಾ ಎಚ್ಚರಿಕೆಯಿಂದ ವ್ಯಕ್ತಿಗಳ ಮನೋಧರ್ಮವನ್ನರಿತು, ತನ್ನಲ್ಲಿರುವ ತಂತ್ರಕ್ಕೆ ಆತ ಸುಲಭವಾಗಿ ಬಲಿಯಾಗುವಂತಿದ್ದರೆ ಮಾತ್ರ ಕಾರ್ಯಮಗ್ನನಾಗುತ್ತಾನೆ, ಇಲ್ಲವೆಂದರೆ ಕೊಟ್ಟಷ್ಟು ಕಾಣಿಕೆಯನ್ನು ಪಡೆದು ಮುಂದಿನ ಮನೆಗೆ ಹೆಜ್ಜೆ ಹಾಕುವನು. ಹೀಗೆ ಗೋಸಂಗಿಗಳು ತಮ್ಮಲ್ಲಿರುವ ಇಂತಹ ತಂತ್ರಗಳನ್ನು ವ್ಯಕ್ತಿಗಳ ಮನೋಧರ್ಮಕ್ಕನುಗುಣವಾಗಿ ಸಿದ್ಧಪಡಿಸಿ ಪ್ರಯೋಗಿಸುವರು.

೩.೨. ಒಂದಕ್ಕೆರಡು ಸೃಷ್ಟಿಸುವುದು : ಗೋಸಂಗಿಗಳು ಇದನ್ನು ಸಹ ತಮ್ಮ ಕೈಚಳಕದ ಮೂಲಕವೇ ಮಾಡಿತೋರಿಸುವರು. ನಿರ್ಜೀವ ವಸ್ತುವೊಂದರಿಂದ ಅಂಥದ್ದೇ ಮತ್ತೊಂದು ವಸ್ತುವನ್ನು ಸೃಷ್ಟಿಮಾಡಲು ಸಾಧ್ಯವಿಲ್ಲ ಎಂಬುದು ಎಲ್ಲಾ ವಿಚಾರವಂತರಿಗೂ ತಿಳಿದ ವಿಷಯ. ಆದರೂ ಸಹ ಮನುಷ್ಯ ತನ್ನ ಬುದ್ಧಿಶಕ್ತಿಯಿಂದ ಬದುಕಿಗಾಗಿ ಏನೆಲ್ಲಾ ತಂತ್ರಗಳನ್ನು ಬಳಸಿ, ಶೂನ್ಯದಿಂದ ವಸ್ತುವೊಂದನ್ನು ಸೃಷ್ಟಿಮಾಡಿದೆನೆಂದು ಜನರಲ್ಲಿ ಭ್ರಮೆ ಹುಟ್ಟಿಸುವುದನ್ನು ನಾವು ನೋಡಬಹುದು.[a]

ಸಾಧು ವೇಷ ಧರಿಸಿ ಊರಾಡುವ ಗೋಸಂಗಿಗಳು, ದೇವರು, ಧರ್ಮ, ಪವಾಡಗಳ ಬಗ್ಗೆ ಅಪಾರ ನಂಬಿಕೆ, ಗೌರವಗಳಿರುವ ಜನರ ಕಡೆ ಹೆಚ್ಚು ಗಮನ ಹರಡಿ ಸಮಯ ಸಂದರ್ಭ ನೋಡಿ ತನ್ನ ಕೈಚಳಕ ತೋರಿಸುವರು. ವಿಭಿನ್ನ ವ್ಯಕ್ತಿಗಳ ಜೊತೆ ಜೊತೆ ಬೆರೆಯುವ ಗೋಸಂಗಿಗಳು ಯಾರ ಮನಸ್ಸು ಹೇಗೆ ಎಂಬುದನ್ನು ಚೆನ್ನಾಗಿ ಅರಿಯಬಲ್ಲವರಾಗಿದ್ದು, ವ್ಯಕ್ತಿಗಳನ್ನು ವಿಶ್ವಾಸಕ್ಕೆ ತೆಗೆದುಕೊಂಡು ತಮ್ಮಲ್ಲಿರುವ ತಂತ್ರವನ್ನು ಪ್ರಯೋಗಿಸಿ ಇನ್ನೂ ಹೆಚ್ಚಿಗೆ ನಂಬುವಂತೆ ಮಾಡುವರು. 'ನೀನು ತುಂಬಾ ಕಷ್ಟದಾಗ ಐದೀಯಂತೆ ನನಗೆ ಗೊತ್ತು. ಅದಕ್ಕೆ ಪರಿಹಾರ ಸೂಚಿಸ್ತೀನಿ. ನಿನ್ನ ಕೈಲಾದ ದಾನ-ಧರ್ಮ ಮಾಡು ದೇವರು ನಿನಗೆ ಒಳ್ಳೇದು ಮಾಡ್ತಾನೆ. ಈಗ ನಾನು ಹೇಳಿದಂಗೆ ಮಾಡು' ಎಂದೇಳಿ, ಒಂದು ಬಿಳಿ ಪೇಪರ್ ಮತ್ತು ಸ್ವಲ್ಪ ಅಕ್ಕಿಯನ್ನು ತರಲು ಹೇಳುತ್ತಾನೆ. ಆಗ ಆ ವ್ಯಕ್ತಿ ಒಳಹೋದಾಗ ಈ ಸಾಧು ವೇಷದಾರಿ ತನ್ನ ಚೀಲದೊಳಗೆ ಸಿದ್ಧಪಡಿಸಿಟಿದ್ದ ಅಕ್ಕಿ ಕಾಳಿನ ಪೊಟ್ಟಣವನ್ನು ತೆಗೆದು ಬೆರಳುಗಾಳ (ತೋರು ಬೆರಳು ಹೆಬ್ಬೆರಳುಗಳ ನಡುವೆ ಸಿಕ್ಕಿಸಿಕೊಳ್ಳುವನು) ತರಿಸಿಕೊಂಡು ಆತನ ಎದುರಿಗೆ ಹಾಳೆಯನ್ನು

ನಾಲ್ಕು ಭಾಗ ಮಾಡಿ ಹಾಳೆಯ ಒಂದು ಭಾಗವನ್ನು ವ್ಯಕ್ತಿಯ ಮುಂದಕ್ಕಿಡಿದು ನಿನ್ನ ಮನೆ ದೇವರನ್ನ ನೆನಪಿಸಿಕೊಂಡು ಐದು ಅಕ್ಕಿಕಾಳು ಇದ್ರಾಲ್ಲಾಕು ಎಂದು ಹೇಳಿ ಆ ಚೀಟಿಯನ್ನು ಮಡಚಿ ಕೈಯಲ್ಲಿಡಿದು ಮಂತ್ರ ಹೇಳುವವನಂತೆ ನಟಿಸಿ, ಸ್ವಲ್ಪ ಹೊತ್ತಿನ ನಂತರ 'ಇಗೋ ಕೈ ಮುಂದು ಮಾಡು, ತಗೋ ಈ ಪಟ್ನ' ಮನೆ ಒಳಗೆ ಹೋಗಿ ದೇವರ ಗುಡಿ ಹತ್ತಿರ ನಿಂತು ನಿಮ್ಮ ಮನೆ ದೇವರ್ನ ನೆನಸಿ ಇದನ್ನು ಬಿಚ್ಚು ದೇವರಿಗೆ ನಿನ್ನ ಮೇಲೆ ಪ್ರೀತಿ ಇದ್ರೆ ಅಕ್ಕಿಕಾಳು ಒಂದಕ್ಕೆರಡಾಗಿರ್ತಾವೆ ಇಲ್ಲಾಂದ್ರೆ ನಿನಗಿನ್ನೂ ದರಿದ್ರ ಹತ್ತೀದೇಂತ ಅರ್ಥ ಎಂದು ಹೇಳುವನು. ಸಾಧುವಿನ ನಿರ್ದೇಶನದಂತೆ ಆ ವ್ಯಕ್ತಿ ಹಾಗೆ ಮಾಡಲು ಸಹಜವಾಗಿ ಅಕ್ಕಿಕಾಳು ಒಂದಕ್ಕೆರಡಾಗಿರುತ್ತವೆ. ಇದನ್ನು ಕಂಡ ವ್ಯಕ್ತಿ ಆಶ್ಚರ್ಯಚಕಿತನಾಗಿ ತನಗೆ ಸಾಧು ವರವನ್ನು ದಯಪಾಲಿಸಿದ್ದಾನೆಂದು ಭಾವಿಸಿ ತನ್ನ ಕೈಲಾದ ಕಾಣಿಕೆಯನ್ನು ಕೊಟ್ಟು ಕಳುಹಿಸುವನು. ಹೀಗೆ ಅಲೆಮಾರಿ ಗೋಸಂಗಿಗಳು ದಿನನಿತ್ಯದ ಭಿಕ್ಷಾಟನೆಯ ಸಂದರ್ಭದಲ್ಲಿ ಕೈಚಳಕ ಮಾಡುವುದರ ಮೂಲಕ ಜನರನ್ನು ನಂಬಿಸಿ, ದಿನದ ಹೊಟ್ಟೆ ತುಂಬಿಸಿಕೊಳ್ಳುತ್ತಿದ್ದಾರೆ.

೩.೩. ಪರಮಾತ್ಮನನ್ನು ತೋರಿಸೋದು : ಉತ್ತಮ ಬೇಟೆಗಾರರಾದ ಗೋಸಂಗಿಗಳು ಪ್ರಾಣಿಗಳಲ್ಲಿನ ಕೆಲವು ಅಂಗಗಳನ್ನು ಶೇಖರಿಸಿಟ್ಟುಕೊಂಡು ಭಿಕ್ಷಾಟನೆಯ ಸಂದರ್ಭದಲ್ಲಿ ಅವುಗಳನ್ನು ಕೈಚಳಕಕ್ಕೆ ಬಳಸುವರು. ಬೇಟೆಯಾಡಿದ ನಂತರ ಪ್ರಾಣಿಯಲ್ಲಿನ ದೊಡ್ಡ ಕರುಳನ್ನು ತಮ್ಮ ಕೆಲಸಕ್ಕೆ ಬೇಕಾದಷ್ಟು ಉದ್ದಕ್ಕೆ ತುಂಡರಿಸಿ ಅದನ್ನು ಚೆನ್ನಾಗಿ ಶುದ್ಧ ಮಾಡಿ ಬಿಸಿಲಲ್ಲಿ ಒಣಗಿಸಿಟ್ಟುಕೊಳ್ಳುವರು. ಇದನ್ನು ಸದಾ ತಮ್ಮ ಜೋಳಿಗೆಯಲ್ಲಿಟ್ಟುಕೊಂಡಿರುತ್ತಾರೆ. ಸಮಯ ಸಂದರ್ಭ ನೋಡಿ ಇದರ ಚಮತ್ಕಾರವನ್ನು ತೋರಿಸುವರು.

ಒಂದೊಂದು ದಿನ ಒಂದೊಂದು ವೇಷವನ್ನು ಹಾಕಿಕೊಂಡು ಊರೊಳಗೆ ಭಿಕ್ಷೆ ಬೇಡುವ ಗೋಸಂಗಿಗಳು ತಮ್ಮಲ್ಲಿ ಯಾರಾದರೂ ಕಷ್ಟಗಳನ್ನು ಹೇಳಿಕೊಂಡರೆ ಅಂತವರ ಜೊತೆಗೆ ತುಂಬಾ ಆತ್ಮೀಯವಾಗಿ ಮಾತಾಡುತ್ತಾ ತನ್ನಲ್ಲಿರುವ ಒಂದು ತಂತ್ರವನ್ನು ಅವನ ಮೇಲೆ ಪ್ರಯೋಗಿಸಲು ಸಿದ್ಧನಾಗುತ್ತಾನೆ. ಹಾಗೆ ಮಾತಾಡುತ್ತಾ, ಮಾತಾಡುತ್ತಾ 'ನಿನಗೆ ದೇವರ ಮೇಲೆ ನಂಬಿಕೆ ಇದೆಯಾ?' ಎಂದು ಕೇಳುವನು. ಆಗ ಆ ವ್ಯಕ್ತಿ ಇದೆ ಎಂದು ಉತ್ತರಿಸಿದರೆ. 'ಸರಿ, ನಿನಗೆ ದೇವರ ಮೇಲೆ ನಂಬಿಕೆ ಇದೆ' ಅನ್ನೋದು ಗೊತ್ತಾಗಬೇಕಾದರೆ ನಾನೊಂದು ಪರೀಕ್ಷೆ ಮಾಡ್ತೀನಿ ಅದರಲ್ಲಿ ಯಶಸ್ವಿಯಾದ್ರೆ ದೇವರು ನಿನ್ನ ಕಾಪಾಡ್ತಾನೆ ಇಲ್ಲಾಂದ್ರೆ, ಕೆಲವು ದೋಷಗಳನ್ನು ಕಳಕೊಳ್ಳಬೇಕಾಗುತ್ತೆ ಎಂದು ಹೇಳಿ ಆತನಿಂದ ಊದಬತ್ತಿ ಎಲೆ ಅಡಿಕೆ ತೆಂಗಿನಕಾಯಿ ತರಿಸಿ ಪೂಜೆಮಾಡಿದ ನಂತರ ಗೋಸಂಗಿ ಎದ್ದುನಿಂತು ಎದುರಿಗಿರುವ ವ್ಯಕ್ತಿಯನ್ನು ಹತ್ತಿರಕ್ಕೆ ಕರೆದು 'ನೋಡು ನಾನು ಈಗ ಪರಮಾತ್ಮನ ತೋರಸ್ತೀನಿ ನಿನ್ನ ಎರಡು ಕೈಗಳನ್ನು ನನ್ನ ಹೊಟ್ಟೆಮೇಲಿಡು. ಹಾಗೇ ನಿನ್ನ ಮನೆ ದೇವರ್ನ ನೆನೆ' ಎಂದು ಹೇಳಿ ತನ್ನ ಎರಡು ಕೈಗಳಿಂದ ಬಾಯಿಯನ್ನು ಮುಚ್ಚಿಕೊಂಡು ಏನೋ ಮಂತ್ರವನ್ನು ಹೇಳುವವನ ಹಾಗೆ ನಟಿಸಿ ಬಾಯೊಳಗಿಟ್ಟಿದ್ದ 'ಕರುಳಿನ' ಉಂಡೆಯ ಒಂದು ತುದಿಯನ್ನು ಹಿಡಿದು ಊದುವನು ಹಾಗೆ ಊದಿದಾಕ್ಷಣ

ಅದು ಹೊರಬಂದು ದೊಡ್ಡ ಬಲೂನಿನಂತಾಗುತ್ತದೆ. ಹೀಗೆ ಬಾಯೊಳಗೆ ಬಲೂನನ್ನು ಸೃಷ್ಟಿಸಿದ ಗೋಸಂಗಿಯ 'ಪವಾಡ' (ಕೈಚಳಕ)ಕ್ಕೆ ಬೆರಗಾಗಿ, ಈತನಲ್ಲಿ ಯಾವುದೋ ಒಂದು ಅಘಾಧವಾದ ಶಕ್ತಿ ಇದೆ ಎಂದು ಬಗೆದು ಜನರು ತಮ್ಮ ಶಕ್ತ್ಯಾನುಸಾರ ಕಾಣಿಕೆ ಕೊಟ್ಟು ತೃಪ್ತಿಪಡಿಸುವರು.

**ಫಕೀರನ ವೇಷ :** 'ಎಲ್ಲಾರೂ ಮಾಡುವುದು ಹೊಟ್ಟೆಗಾಗಿ...' ಎಂಬ ದಾಸರ ನುಡಿಯಂತೆ ಗೋಸಂಗಿಗಳು ಹೊಟ್ಟೆಪಾಡಿಗಾಗಿ ಹಾಕುವ ವಿವಿಧ ವೇಷಗಳಲ್ಲಿ ಇದೂ ಒಂದು. ಹೀಗೆ ಹಾಕುವ ವೇಷಗಳಿಗೆ ಇವರಲ್ಲಿ ಜಾತಿ ನಿರ್ಬಂಧವಿಲ್ಲ. ಅಲೆಮಾರಿಗಳಾದ ಇವರು ಆಯಾ ಪ್ರದೇಶದಲ್ಲಿನ ಆಯಾ ಸಮುದಾಯದ ಜನಸಂಖ್ಯೆಯನ್ನು ನೋಡಿಕೊಂಡು ವೇಷಗಳನ್ನಾಕುವರು. ತಮ್ಮ ಅಲೆಮಾರಿ ಬದುಕಿನಲ್ಲಿ ಮರಾಠಿ, ಹಿಂದಿ, ಉರ್ದು, ಕನ್ನಡ, ತೆಲುಗು, ತಮಿಳು, ಇನ್ನಿತರ ಭಾಷೆಗಳನ್ನು ಚೆನ್ನಾಗಿ ಮಾತನಾಡುಲು ಕಲಿತಿದ್ದು, ಆಯಾ ಪ್ರದೇಶದಲ್ಲಿ ಅದೇ ಭಾಷೆಯನ್ನು ವ್ಯವಹಾರಿಕ ಭಾಷೆಯಾಗಿ ಬಳಸುವರು.

ಬಹುತೇಕ ಗೋಸಂಗಿಗಳು ಗಡ್ಡ (ದಾಡಿ)ವನ್ನು ಬಿಟ್ಟಿದ್ದು ನೋಡಲು ಥೇಟ್ ಮುಸಲ್ಮಾನರಂತೇ ಕಾಣುವರು. ಹಾಗಾಗಿ ಫಕೀರನ ವೇಷ ಹಾಕಿದಾಗ ಇವರಿಗೆ ಯಾವುದೇ ರೀತಿಯ ತೊಂದರೆಯಿರುವುದಿಲ್ಲ. ಅಷ್ಟೇ ಅಲ್ಲ ಹಿಂದಿ, ಉರ್ದುವನ್ನು ಚೆನ್ನಾಗಿ ಮಾತಾಡಬಲ್ಲರು. ಜೊತೆಗೆ ಇಸ್ಲಾಂ ಧರ್ಮದ ಕೆಲವು ಸಾಮಾನ್ಯ ನಿಯಮಗಳನ್ನು ತಿಳಿದುಕೊಂಡವರು ಮಾತ್ರ ಫಕೀರನ ವೇಷ ಹಾಕಿ, ಮುಸಲ್ಮಾನ ಬಾಂಧವರು ಹೆಚ್ಚಾಗಿ ವಾಸಿಸುವ ಪ್ರದೇಶಗಳಿಗೆ ಹೋಗಿ ಭಿಕ್ಷೆ ಬೇಡಿ ತರುವರು. ಹೀಗೆ ಬೇಡಿ ತಂದವರನ್ನು ನೋಡಿದ ಈತನ ಸಹಪಾಟಿಗಳು 'ಮುಸಲ್‌ಮಾನ್ರಿ ಗಾಂಡ್ ಮಾರಿ ತಡುದಿಯಾಯೋ' (ಮುಸಲ್ಮಾನರಿಗೆ ಮುಕಳಟ್ಟು ಕಾಣಿಕೆ ತಂದಿದ್ದಾನೆ) ಎಂದು ತಮಾಷೆ ಮಾಡುವರು. ಅಂದರೆ ಎಂಥಹ ವೇಷವನ್ನು ಹಾಕಿಕೊಂಡು ಆವೇಷದ ಧರ್ಮಕ್ಕೆ ಕುಂದು ಬರದಂತೆ ನೋಡಿಕೊಳ್ಳುವ ಜಾಣ್ಮೆ ಗೋಸಂಗಿಗಳಿಗಿದೆ. ಹಾಗಾಗಿ ಮುಸಲ್ಮಾನರ ಬಗೆಗಿನ ಆ ಗಾದೆಯನ್ನು ತಪ್ಪಾಗಿ ಭಾವಿಸಬೇಕಾಗಿಲ್ಲ. ಅಲ್ಲಿ ಮುಸಲ್ಮಾನರಿಗೆ ಮೋಸ ಮಾಡಿರಬಹುದೇ ವಿನಃ ಧರ್ಮಕ್ಕಲ್ಲ ಎಂಬುದಂತೂ ಸ್ಪಷ್ಟ. ಹೀಗೆ ಗೋಸಂಗಿಗಳು ವಿವಿಧ ವೇಷಗಳಲ್ಲಿ ವಿವಿಧ ಧರ್ಮಗಳಲ್ಲಿ ವಿವಿಧ ಭಾಷೆಗಳಲ್ಲಿ, ವಿವಿಧ ಜನ ಸಮುದಾಯಗಳಲ್ಲಿ ಬೆರೆತು ಬಾಳುತ್ತಿರುವುದು ವಿಶೇಷವಾಗಿದೆ.

## ಇಂದಿನ ಕಸಬುಗಳು

**೧. ಗಂಧದೆಣ್ಣೆ (ವಾಸರೋತೇಲ್) ಮಾರಾಟ :** ಮರಾಠಿ ಭಾಷೆ ನಿಘಂಟಿನಲ್ಲಿ 'ಗಂಧೀ' ಎಂಬ ಶಬ್ದಕ್ಕೆ ವನಸ್ಪತಿ, ಔಷಧಿಗಳನ್ನು ಮಾರುವವ ಎಂಬ ಅರ್ಥವನ್ನು ಕೊಟ್ಟಿದ್ದಾರೆ. ಹಿಂದಿನಿಂದಲೂ 'ಗಂಧದೆಣ್ಣೆ' ಮಾರಾಟ ಮಾಡುವುದರ ಮೂಲಕ ಜನಸಾಮಾನ್ಯರಿಗೆ ಪರಿಚಿತರಾಗಿರುವ ಕಾರಣ, ಇಂದೂ ಸಹ ಇವರನ್ನು 'ಗಂಧಣೀರು' ಎಂದು ಕರೆಯುವುದು ಸಹಜವಾಗಿದೆ. ಒಂದೇ ಬುಡಕಟ್ಟಿನ, ಅಥವಾ ಜಾತಿಯ ಜನ ವಿವಿಧ ವೃತ್ತಿಗಳ ಮೂಲಕ ಜನರೊಂದಿಗೆ ಸಂಬಂಧವನ್ನಿಟ್ಟು ಕೊಂಡಿರುವುದರಿಂದ ಅಲ್ಲಿ

ಇವರ 'ಜಾತಿ' ಮುಖ್ಯವಾಗಿ ಕಾಣುವುದಿಲ್ಲ. ಅವರು ಮಾಡುವ ವೃತ್ತಿಗಳೇ ಮುಖ್ಯವಾಗಿ ಕಾಣುತ್ತವೆ. ಹಾಗಾಗಿ ಇಂತಹ ಎಷ್ಟೋ ಅಲೆಮಾರಿ ಸಮುದಾಯಗಳನ್ನು ಜನರು ಅವರ ವೃತ್ತಿಗಳನ್ನು ಸಮೀಕರಿಸಿ ಗುರುತಿಸುವುದನ್ನು ಕಾಣಬಹುದಾಗಿದೆ." ಬಹುಶಃ ಇಂತಹ ಅಲೆಮಾರಿ ಸಮುದಾಯಗಳು ಒಂದೆಡೆ ನೆಲೆ ನಿಲ್ಲದ ಕಾರಣ ಜನಸಾಮಾನ್ಯರಿಗೆ ಇವರ ಬದುಕನ್ನು ಹತ್ತಿರದಿಂದ ನೋಡಲು ಸಾಧ್ಯವಾಗದೇ ಇರಬಹುದು. ಜೊತೆಗೆ ಅಲೆಮಾರಿಗಳು ಊರು ಬಿಟ್ಟು ಒಂದು ಕಿ.ಮಿ. ದೂರ ವಾಸಿಸುವುದರಿಂದ ಅಲೆಮಾರಿಗಳ ಹಾಗೂ ಜನಸಾಮಾನ್ಯರ ಬದುಕಿನ ಮಧ್ಯೆ ಅಂತರ ಏರ್ಪಟ್ಟಿರುವುದರಿಂದ, ಜನಸಾಮಾನ್ಯರಿಗೆ ಅವರು ಮಾಡುವ ವೃತ್ತಿಗಳೇ ಮುಖ್ಯವಾಗುತ್ತವೆ ವಿನಃ ಅವರ ಜಾತಿಯಲ್ಲ ಎಂಬುದಂತೂ ಸ್ಪಷ್ಟ. (ಹೆಳವರು, ದೊಂಬರು, ಕಿನ್ನರಿ ಜೋಗಿಗಳು ಇನ್ನಿತರ ಸಮುದಾಯಗಳನ್ನು ಹೊರತುಪಡಿಸಿ)

ಅಲೆಮಾರಿಗಳಾದ ಗೋಸಂಗಿಗಳು ಎಂದಿನಿಂದ ಈ ಗಂಧದೆಣ್ಣೆ ಕಸುಬನ್ನು ಅವಲಂಬಿಸಿದರೆಂಬುದನ್ನು ಹೇಳುವುದು ಕಷ್ಟ ಸಾಧ್ಯ. ಸುಮಾರು ಎಪ್ಪತ್ತು-ಎಂಬತ್ತು ವರ್ಷಗಳಿಂದ ಈ ವೃತ್ತಿಯನ್ನು ಅವಲಂಬಿಸಿರುವುದಾಗಿ ವಕ್ತೃಗಳಿಂದ ತಿಳಿದುಬರುತ್ತದೆ. ಈ ವೃತ್ತಿ ಬಗೆಗೆ ವಿಶೇಷ ನಂಬಿಕೆಗಳಾಗಲಿ, ಐತಿಹ್ಯಗಳಾಗಲಿ ಗೋಸಂಗಿಗಳಲ್ಲಿ ಇಲ್ಲದ ಕಾರಣ ಬದುಕನ್ನು ತೂಗಿಸಲು ಅನಿವಾರ್ಯವಾದಂತಹ ವೃತ್ತಿ ಮಾತ್ರ ಇದಾಗಿರುವಂತಿದೆ. ಇದಕ್ಕೆ ತೊಡಗಿಸುವ ಬಂಡವಾಳ ಕಡಿಮೆಯಾಗಿದ್ದು ಹೆಚ್ಚು ಲಾಭಗಳಿಸ ಬಹುದಾಗಿರುವುದರಿಂದ ಗೋಸಂಗಿಗಳಲ್ಲಿ ಬಹುತೇಕ ಜನ ಈ ವೃತ್ತಿಯನ್ನು ಅವಲಂಬಿಸಿದ್ದಾರೆ. ವೃದ್ಧರೇ ಹೆಚ್ಚಾಗಿ ಈ ವೃತ್ತಿಯಲ್ಲಿ ತೊಡಗಿರುತ್ತಾರೆ.

ಕಂಪನಿಗಳಿಂದ ಶುದ್ಧ ಗಂಧದೆಣ್ಣೆಯನ್ನು ಕೊಂಡು ತಂದು, ಅದಕ್ಕೆ ಇತರೆ ಎಣ್ಣೆಯನ್ನು ಮಿಶ್ರಮಾಡಿ ಮಾರಾಟ ಮಾಡುವರು, ಹಿಂದೆ ಒಂದು ತೊಲೆ ಶುದ್ಧಗಂಧದೆಣ್ಣೆಯ ಬೆಲೆ ನಾಲ್ಕುನೂರರಿಂದ ಐದನೂರು ರೂಪಾಯಿಗಳ ಬೆಲೆ ಬಾಳುತ್ತಿತ್ತು. ಈಗ ಅದರ ಬೆಲೆ ಹತ್ತು ಸಾವಿರ ರೂಗಳಷ್ಟಾಗಿದೆ. ಆದರೂ ಸಹ ಅಂತಹ ಶುದ್ಧವಾದ ಎಣ್ಣೆ ಸಿಗುತ್ತಿಲ್ಲವಂತೆ. ಕಾರಣ, ಗಂಧದೆಣ್ಣೆ ತಯಾರಿಸುವ ಕಂಪನಿಗಳು ನಾಯಿಕೊಡೆಗಳಂತೆ ಎದ್ದಿರುವುದರಿಂದ ಪೈಪೋಟಿ ಹೆಚ್ಚಾಗಿ, ಶುದ್ಧದ ಎಣ್ಣೆ ತಯಾರಿಸಿ ಮಾರುವುದರ ಜೊತೆಗೆ ಕೊಳ್ಳುವವರ ಅಭಿರುಚಿಗೆ ತಕ್ಕಂತೆ ಬಾಟಲುಗಳಲ್ಲಿ ತುಂಬಿ ಅವರೇ ನೇರವಾಗಿ ಮಾರುಕಟ್ಟೆಗೆ ಕಳುಹಿಸುತ್ತಿದ್ದಾರೆ. ಹಾಗಾಗಿ ಹಿಂದೆ ದೊರೆಯುತ್ತಿದ್ದಂತಹ ಶುದ್ಧ ಗಂಧದೆಣ್ಣೆ ಇತ್ತೀಚೆಗೆ ಸಿಗುತ್ತಿಲ್ಲವೆಂದು ವಕ್ತೃಗಳು ಹೇಳುತ್ತಾರೆ. ಇತ್ತೀಚೆಗೆ ತರುವ ಗಂಧದೆಣ್ಣೆಯಲ್ಲಿ ಕಲಬರಕೆ ಜಾಸ್ತಿಯಾಗಿರುವುದರಿಂದ ಒಂದು ತೊಲಕ್ಕೆ ಐವತ್ತರಿಂದ ಇನ್ನೂರು ರೂಪಾಯಿಗಳು ಮಾತ್ರ ಕಂಪನಿಗಳಿಂದ ಕಂಪನಿಗಳಿಗೆ ಇದರ ಬೆಲೆಯಲ್ಲಿ ವ್ಯತ್ಯಾಸಗಳಿವೆ.

ವ್ಯಾಪಾರಿ ಚತುರರಾದ ಗೋಸಂಗಿಗಳು ವಿವಿಧ ಕಂಪನಿಗಳಿಂದ ವಿವಿಧ ಬಗೆಯ ಗಂಧದೆಣ್ಣೆಯನ್ನು ತಂದು ಅದಕ್ಕೆ ಇತರೆ ಎಣ್ಣೆಯನ್ನು ಮಿಶ್ರಣಮಾಡಿಕೊಳ್ಳುವರು. ಅಭಿರುಚಿಗೆ ತಕ್ಕಂತೆ ಚಿಕ್ಕ ಚಿಕ್ಕ ಬಾಟಲುಗಳಲ್ಲಿ ತುಂಬಿ ಪೆಟ್ಟಿಗೆಯಲ್ಲಿಟ್ಟುಕೊಂಡು ಹಳ್ಳಿ ಮತ್ತು ನಗರ ಪ್ರದೇಶಗಳಲ್ಲಿ ಮಾರಾಟ

ಮಾಡುವರು. ತುಂಬಾ ಬುದ್ಧಿವಂತರಾದರೆ ಮಾತ್ರ ಗಂಧದೆಣ್ಣೆ ಮಾರಾಟದಲ್ಲಿ ಯಶಸ್ವಿಯಾಗುವರು. ಇದಕ್ಕೆ ಅನುಭವವೂ ಸಹ ಬಹಳ ಮುಖ್ಯ. ಗೋಸಂಗಿಗಳು ವ್ಯಾಪಾರದ ಸಂದರ್ಭದಲ್ಲಿ ಕೆಲವೊಂದು ತಂತ್ರಗಳನ್ನು ಬಳಸುತ್ತಾರೆ, ಗಂಧದೆಣ್ಣೆ ಪೆಟ್ಟಿಗೆಯಲ್ಲಿ, ಶುದ್ಧವೆಂದು ಹೇಳಲ್ಪಡುವ ಮೂರ್‍ನಾಲ್ಕು ವಿಧದ ದೊಡ್ಡ ಸೀಸೆಗಳಿದ್ದು, ಅದರ ಅಕ್ಕಪಕ್ಕ ಚಿಕ್ಕ ಚಿಕ್ಕ ಗಾತ್ರದ ಬಾಟಲುಗಳಿದ್ದ ಅದರಲ್ಲಿ ಕಲಬರಕೆ (Mix) ಎಣ್ಣೆ ತುಂಬಿರುತ್ತಾರೆ.

ಹೀಗೆ ಚಿಕ್ಕ ಚಿಕ್ಕ ಬಾಟಲುಗಳಲ್ಲಿ ತುಂಬಿದ ಕಲಬರಕೆ ಗಂಧದೆಣ್ಣೆ ಗ್ರಾಹಕರಿಗೆ ಗೊತ್ತಾಗದಂತೆ ಬಾಟಲಿಯ ಮುಚ್ಚಳಕ್ಕೆ ಶುದ್ಧ ಎಣ್ಣೆಯನ್ನು ಸವರಿ ಇಟ್ಟಿರುತ್ತಾರೆ. ಕೊಳ್ಳುವವರಿಗೆ ತೋರಿಸುವಾಗ ಅವರ ಕೈಹಿಡಿದು ಮುಚ್ಚಳದಲ್ಲಿನ ಎಣ್ಣೆಯನ್ನು ಸವರಿ ಮೂಸಿ ನೋಡುವಂತೆ ಹೇಳುತ್ತಾರೆ. ಹಾಗೆ ನೋಡಿದಾಗ ವಾಸನೆ ಚೆನ್ನಾಗಿರುತ್ತದೆ. ಕೊಳ್ಳಲು ಹಿಂದುಮುಂದು ನೋಡುವುದಿಲ್ಲ. (ಆದರೆ ಗಂಧದೆಣ್ಣೆಯ ಬಗ್ಗೆ ಸರಿಯಾಗಿ ತಿಳುವಳಿಕೆಯುಳ್ಳವರು ಎಂದೂ ಇವರ ಹತ್ತಿರ ಕೊಂಡುಕೊಳ್ಳುವುದಿಲ್ಲ) ಹೀಗೆ ಮಾರಾಟದ ಸಂದರ್ಭದಲ್ಲಿ ಮೇಲು ನೋಟಕ್ಕೆ ಮೊಸ ಮಾಡುತ್ತಾರೆಂದು ಕಂಡುಬಂದರೂ ಸಹ ಅದು ಅಪಾಯದ್ದಲ್ಲ ಜೊತೆಗೆ ಅವರು ಕೊಂಡು ತಂದು ಈ ರೀತಿ ಹಳ್ಳಿ ನಗರ ಪ್ರದೇಶಗಳನ್ನು ಸುತ್ತಿ ಮಾರಾಟಮಾಡಿದರೂ ಒಪ್ಪೊತ್ತಿನ ಕೂಳಿಗಷ್ಟೇ ಸಿಗುವುದು. 'ಎಲ್ಲಾರು ಮಾಡುವುದು ಹೊಟ್ಟೆಗಾಗಿ' ಎಂಬ ದಾಸರ ನುಡಿ ಗೋಸಂಗಿಗಳಿಗೆ ಅಕ್ಷರ ಸಹ ಅನ್ವಯವಾಗುತ್ತದೆ.

ಗೋಸಂಗಿಗಳು ವ್ಯಾಪಾರಕ್ಕಾಗಿ ಆಯ್ದುಕೊಳ್ಳುವ ಸ್ಥಳಗಳೆಂದರೆ, ಹಳ್ಳಿ ಹಾಗೂ ನಗರ ಪ್ರದೇಶದಲ್ಲಿನ ತಾಲ್ಲೂಕು ಕಛೇರಿ, ನ್ಯಾಯಾಲಯ, ಶಾಲಾ ಕಾಲೇಜು ಇನ್ನಿತರ ಸಂಘ ಸಂಸ್ಥೆಗಳ ಉದ್ಯೋಗಿಗಳ ಹತ್ತಿರ ಅದರಲ್ಲೂ ಮಧ್ಯಮ ವರ್ಗದ ಜನರೊಂದಿಗೆ ಇವನ ವ್ಯವಹಾರ ಈ ಬಗೆಯ ವ್ಯಾಪಾರ ಸಾಧಾರಣ ಲಾಭವನ್ನು ತಂದುಕೊಂಡುತ್ತದೆ. ಆದರೆ ಮುಸಲ್ಮಾನರ ಹಬ್ಬಗಳ ಸಂದರ್ಭದಲ್ಲಂತೂ ಇವರ ಗಂಧದೆಣ್ಣೆಗೆ ಎಲ್ಲಿಲ್ಲದ ಬೇಡಿಕೆ ಇರುತ್ತದೆ.

ಹೀಗೆ ಜೀವನ ನಿರ್ವಹಣೆಗಾಗಿ ವಿವಿಧ ವೃತ್ತಿಗಳನ್ನು ಅವಲಂಬಿಸಿರುವ ಗೋಸಂಗಿಗಳು, ಕಂಪನಿಗಳಿಂದ ಗಂಧದೆಣ್ಣೆಯನ್ನು ತಂದು ಮಾರಾಟ ಮಾಡಿ ಅದರಿಂದ ಬಂದ ಹಣದಿಂದ ತಮ್ಮ ಕುಟುಂಬ ನಿರ್ವಹಣೆ ಮಾಡುತ್ತಾ ಸಾಗಿದ್ದಾರೆ.

**ಗಂಧದೆಣ್ಣೆ ತಯಾರಿಸುವ ಕಂಪನಿಗಳು**

| ಕಂಪನಿ ಹೆಸರು | ಸ್ಥಳ |
| --- | --- |
| ೧. ಕಿಳಕರ್ ಕಂಪನಿ | ಮುಂಬೈ |
| ೨. ಜಾಂಜ್ ಕಂಪನಿ | ಮುಂಬೈ |
| ೩. ರಾಠೋಡ್ ಕಂಪನಿ | ಮುಂಬೈ |
| ೪. ರಾಧಾಕೃಷ್ಣ ರಾಜಾರಾಮ್ ಕಂಪನಿ | ಮುಂಬೈ |

ಈ ಮೇಲಿನ ನಾಲ್ಕು ಕಂಪನಿಗಳಲ್ಲಿ ಕಿಳಕರ್ ಕಂಪನಿ ಹಳೆಯದು.

## ಕಂಪನಿಗಳಲ್ಲಿ ತಯಾರಾಗುವ ವಿವಿಧ ನಮೂನೆಯ ಗಂಧದೆಣ್ಣೆ

| | | |
|---|---|---|
| ಜೇಸ್‌ಮಿಲ್ ೭೪ | ಜನದಲ್ ಫಿರ್‌ದೋಸ್ | ದರ್ಬಾರ್ |
| ಕಚಗಲಿ | ಪ್ಯಾನ್ಸಿ ಬಕೇಟ್ | ಸರಂಗಿ |
| ಚಾರ್ಲಿ | ರಾಯಲ್ ಬಕೇಟ್ | ತೆವಡಾ |
| ಜೀನ್ಸ್ | ರಾತ್ ಕಿರಾಣಿ | ಚಂಬೇಲಿ |
| ನೈನ್ ಫ್ಲವರ್ | ದಿನಾಕಾ ರಾಜ್ | ಪಾಂಚ್ |
| ಪಂಟೋಶ್ | ಹಿನ್ ಅಂಡ್ ಕಸ್ | ಪಾನಚಿ |
| | ಮಜಮ ೭೬ | ಮೋಗರ(ಕ್ಯಾದಿಗಿ ಎಣ್ಣೆ) |
| ಬ್ರೋಟ್ | ಮಜಮ ೯೬ | ಫಿರ್‌ದೋಸ್ |



ಗಂಧದೆಣ್ಣೆ ಮಾರಾಟಕ್ಕೆ ಬಳಸುವ ಪೆಟ್ಟಿಗೆ

**೨. ದಂತವೈದ್ಯ :** ಗೋಸಂಗಿಗಳು ಹಲ್ಲು ಕಟ್ಟುವ ಕಸುಬನ್ನು ಇತ್ತೀಚೆಗೆ ರೂಢಿಸಿಕೊಂಡಿದ್ದರೂ ಇದರಲ್ಲಿ ಹೆಚ್ಚಿನ ಪರಿಣಿತಿಯನ್ನು ಹೊಂದಿದವರಾಗಿದ್ದಾರೆ. ನಾನು ಕ್ಷೇತ್ರ ಕಾರ್ಯ ಮಾಡಿದ ಪ್ರತಿಯೊಂದು ಪ್ರದೇಶದಲ್ಲಿ ಕನಿಷ್ಟ ನಾಲ್ಕೈದು ಜನರಾದರೂ ಈ ವೃತ್ತಿಯಲ್ಲಿ ತೊಡಗಿರುವುದು ಕಂಡುಬಂದಿತು. ಇವರು ಯಾವುದೇ ಕಸುಬಿಗೆ ಅಂಟಿಕೊಂಡು ದುಡಿಯುವುದಿಲ್ಲ. ಅಂದರೆ ಇಂತಹ ಕಸುಬುಗಳಲ್ಲಿ ಇವರಿಗೆ ಬದ್ಧತೆ ಇಲ್ಲವೆಂದು ಅರ್ಥವಲ್ಲ. ಈ ರೀತಿಯ ಅಸ್ಥಿರ ಕಸುಬುಗಳಿಗೆ ಯಾವಾಗಲೂ ಬೇಡಿಕೆ ಇರುವುದಿಲ್ಲವಾದ್ದರಿಂದ, ಆಯಾ ಕಾಲಮಾನ ಸಂದರ್ಭಗಳಿಗನುಗುಣವಾಗಿ ಕಸುಬುಗಳಲ್ಲಿ ತೊಡಗಿಸಿಕೊಳ್ಳುತ್ತಿರುವುದು ಕಂಡುಬರುತ್ತದೆ.

ದಂತಶಾಸ್ತ್ರ(Dental) ಓದದ, ದಂತವೈದ್ಯ(Dentist) ಪದವಿ ಪಡೆಯದ ಗೋಸಂಗಿಗಳು ಹಲ್ಲು ಕಟ್ಟುವುದರಲ್ಲಿ ನಿಪುಣರು. ಯಾವುದೇ ಕಸುಬಿಗೆ ಕೈಹಾಕಿದರೂ, ಅವರದೇ ಆದ ತಂತ್ರಗಳನ್ನು ಅಳವಡಿಸಿಕೊಂಡು ಯಶಸ್ವಿಯನ್ನು ಸಾಧಿಸುತ್ತಾರೆ. ಹಲ್ಲು ಕಟ್ಟುವ ಕೆಲಸಕ್ಕೆ ದಂತವೈದ್ಯರು ಬಳಸುವ ಆಧುನಿಕ ಪರಿಕರಗಳನ್ನೇ ಇವರು ಸಹ ಬಳಸುತ್ತಾರೆ. ವಿದ್ಯೆ ಇಲ್ಲದಿದ್ದರೂ ಬುದ್ಧಿಗೇನು ಇವರಲ್ಲಿ ಕಡಿಮೆ ಇಲ್ಲ. ಹಾಗಾಗಿ 'ಗೇಂದರ್ ನೇ ಸೋಳಾ ಬುದ್ಧಿ ಅಪನೆ ಸತ್ರಾ ಬುದ್ಧಿ' ಎಂಬ ಗಾದೆ ಇವರ ಬುದ್ಧಿವಂತಿಕೆ ಹಿಡಿದ ಕನ್ನಡಿಯಾಗಿದೆ. ಸ್ವಂತ ಅನುಭವದಿಂದ ಇಂತಹ ಕೆಲಸಗಳನ್ನು ರೂಢಿಸಿಕೊಂಡಿದ್ದಾರೆ.

ತಾಳ್ಮೆ, ಸೂಕ್ಷ್ಮತೆ ಹಾಗೂ ಬುದ್ಧಿಶಕ್ತಿಯನ್ನು ಬಯಸುವ ಇಂತಹ ಕೆಲಸಗಳನ್ನು ಗೋಸಂಗಿಗಳು ಯಶಸ್ವಿಯಾಗಿ ನಿಭಾಯಿಸಬಲ್ಲರು, 'ಬಿಡಿ' ಹಲ್ಲಿನಿಂದ ಹಿಡಿದು 'ಇಡಿ' ಹಲ್ಲುಗಳನ್ನು ಕಟ್ಟುವುದು ಹುಳುಕು ಹಲ್ಲುಗಳನ್ನು ಸ್ವಚ್ಛಮಾಡಿ 'ಸಿಮೆಂಟ್' ತುಂಬಿಸುವುದು. ಹೀಗೆ ಹಲ್ಲುಗಳಿಗೆ ಸಂಬಂಧಿಸಿದ ಕೆಲಸದಲ್ಲಿನ ಕುಶಲತೆಯನ್ನು ಮೆಚ್ಚಲೇಬೇಕು.



ಗೋಸಂಗಿಗಳು ತಯಾರಿಸಿದ ಹಲ್ಲಿನ ಸೆಟ್ಟುಗಳು

ಹಲ್ಲು ಕಟ್ಟುವ ಇವರ ಕೈಚಳಕ ಹಾಗೂ ಜಾಣ್ಮೆ ವಿಶ್ವವಿದ್ಯಾಲಯಗಳಿಂದ ಮಾನ್ಯತೆ ಪಡೆದ ದಂತವೈದ್ಯ (Dentist)ರನ್ನು ನಾಚಿಸುವಂತಹದ್ದು. ಹಿಂದೆ ಆನೆ ದಂತದಿಂದ, ಲಂಬಾಣಿಗರು ಹಾಕುತ್ತಿದ್ದ ಗಟ್ಟಿ ಪ್ಲಾಸ್ಟಿಕ್ ಬಳೆಗಳಿಂದ ವಿವಿಧ ನಮೂನೆಯ ಹಲ್ಲುಗಳನ್ನು ಸಿದ್ಧಪಡಿಸಿಕೊಳ್ಳುತ್ತಿದ್ದರಂತೆ. ಅಂದರೆ

ಇತ್ತೀಚೆಗೆ ,ಬೆಂಗಳೂರು, ದಾವಣಗೆರೆ, ಹುಬ್ಬಳ್ಳಿಯಂತಹ ನಗರಗಳಲ್ಲಿ ಸಿದ್ಧಪಡಿಸಿದ (Ready made) ವಿವಿಧ ನಮೂನೆಯ ವಿವಿಧ ಬಣ್ಣದ ಹಲ್ಲುಗಳು ಸಿಗುವುದರಿಂದ ಅವುಗಳನ್ನೇ ಹೆಚ್ಚಾಗಿ ಬಳಸುವುರು. ಸಿಗರೇಟ್, ಬೀಡಿ ಸೇದುವವರ ಹಲ್ಲುಗಳು ಹಳದಿ ಬಣ್ಣ ಇರುವುದರಿಂದ ಅವರಿಗೆ ಅದೇ ಬಣ್ಣದ ಹಲ್ಲುಗಳನ್ನು, ಎಲೆ ಅಡಿಕೆ ಹಾಕಿಕೊಳ್ಳುವವರ ಹಲ್ಲುಗಳು ಕೆಂಪಾಗಿರುವುದರಿಂದ ಕೆಂಪು ಹಲ್ಲುಗಳನ್ನು, ಹೀಗೆ ವ್ಯಕ್ತಿಗಳ ಹಲ್ಲುಗಳ ಬಣ್ಣಕ್ಕೆ ಹೊಂದಿಕೊಳ್ಳುವಂತಹ ಹಲ್ಲುಗಳನ್ನೇ ಆಯ್ಕೆಮಾಡಿ, ಜೋಡಿಸುವರು. ಬಿಡಿ ಹಲ್ಲೊಂದು ಕಟ್ಟಲು ಐವತ್ತರಿಂದ ನೂರು ರೂಪಾಯಿಗಳು ಇಡಿಯಾಗಿ (Complete one set) ಕಟ್ಟಲು ಸಾವಿರದಿಂದ ಎರಡು ಸಾವಿರದವರೆಗೆ ಸಂಭಾವನೆಯನ್ನು ಪಡೆಯುವರು. ಇದು ಸ್ಥಿರ (Fix) ವಾದ ಬೆಲೆಯೇನಲ್ಲ. ವ್ಯಕ್ತಿಯ ಆರ್ಥಿಕ ಸ್ಥಿತಿಗತಿಯನ್ನವಲಂಬಿಸಿ ಸಂಭಾವನೆಯನ್ನು ಪಡೆಯುವರು. ಹಲ್ಲುಗಳ ಜೋಡಣೆಯಲ್ಲಿ ತುಂಬಾ ಪರಿಣಿತಿಯನ್ನು ಹೊಂದಿದ್ದಾರೆ. ನಾನು ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಹಲ್ಲುಗಳನ್ನು ಕಟ್ಟಿಸಿಕೊಳ್ಳಲು ಬಂದಂತಹ ವ್ಯಕ್ತಿಗಳ ಅನುಭವವನ್ನು ಕೇಳಿದಾಗ ಇವರು ಜೋಡಿಸಿದ ಹಲ್ಲುಗಳನ್ನು ತೋರಿಸಿ ಮೆಚ್ಚುಗೆ ವ್ಯಕ್ತಪಡಿಸಿದರು. ಹೀಗೆ ಗೋಸಂಗಿಗಳು ಏನೆಲ್ಲಾ ಬುದ್ಧಿ ಕಸರತ್ತುಗಳನ್ನು ಉಪಯೋಗಿಸಿ, ವಿವಿಧ ನಮೂನೆಯ ಕಸುಬುಗಳಿಗೆ ಬಹುಬೇಗ ಹೊಂದಿಕೊಂಡು ಮಾಡುವ ಕಸುಬುಗೆ ಎಲ್ಲಿಯೂ ಅಪಚಾರವಾಗದಂತೆ ನೋಡಿಕೊಳ್ಳುವರು. ಕೂತು ಉಂಡರೆ ಕುಡಿಕೆ ಹೊನ್ನು ಸಾಲದು ಎಂಬುದನ್ನರಿತ ಗೋಸಂಗಿಗಳು ಒಂದಲ್ಲ ಒಂದು ಕೆಲಸದಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡು ಕಷ್ಟದ ಬದುಕನ್ನು ಸಾಗಿಸುತ್ತಿದ್ದಾರೆ.

**೩. ಪ್ಲಾಸ್ಟಿಕ್‌ಕೊಡ, ಬಕೆಟ್ ರಿಪೇರಿ :** ಆರ್ಥಿಕ ಭದ್ರತೆ ಇಲ್ಲದ ಗೋಸಂಗಿಗಳು ತಮ್ಮ ಬುದ್ಧಿಶಕ್ತಿಯನ್ನು ಉಪಯೋಗಿಸಿಕೊಂಡು ಕಡಿಮೆ ಬಂಡವಾಳ ಬಯಸುವಂತಹ ಕಸುಬುಗಳ ಕಡೆಗೆ ಹೆಚ್ಚು ಗಮನ ಕೊಡುತ್ತಿದ್ದಾರೆ. ಇಂದು, ಬಹುತೇಕ ಬುಡಕಟ್ಟುಗಳು ಈ ರೀತಿಯ ಕಸುಬುಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವುದನ್ನು ನಾವು ಕಾಣಬಹುದು. ಈ ರೀತಿಯ ಕಸುಬುಗಳಿಗೆ ಕಾಲಮಿತಿ ಇರುತ್ತದೆ. ಹೊಸ ಹೊಸ ಆವಿಷ್ಕಾರಗಳು ನಡೆದಂತೆಲ್ಲ, ಬದಲಾವಣೆಗಳ ಜೊತೆ ಜೊತೆಗೆ ಹೊಸ ರೂಪಗಳನ್ನು ಪಡೆಯುತ್ತಾ ಸಾಗುತ್ತವೆ. ಹಾಗಾಗಿ ಇಂತಹ ಕಸುಬುಗಳಿಗೆ ಎಲ್ಲಾ ಕಾಲಕ್ಕೂ ಬೇಡಿಕೆ ಇರುತ್ತದೆ ಎಂಬುದು ಹೇಳಲಾಗದು. ಈ ಬದಲಾವಣೆಯ ಪ್ರಕ್ರಿಯೆ ಬರೀ ಇಂತಹ ಕಸುಬುಗಳಿಗಷ್ಟೇ ಸೀಮಿತವಲ್ಲ. ವ್ಯವಸಾಯ ಮಾಡುವ ರೈತನಿಗೂ ಸಹ ಈ ನಿಯಮ ಅನ್ವಯವಾಗುತ್ತದೆ. ಹಾಗಾಗಿ ಬದಲಾವಣೆಯ ಪ್ರಕ್ರಿಯೆ ಯಾರನ್ನೂ ಬಿಟ್ಟಿಲ್ಲ. ಆದ್ದರಿಂದ ಇಂತಹ ಕಸುಬುಗಳು ಗೋಸಂಗಿಗಳಿಗೆ ಯಾವುದೇ ರೀತಿಯ ಭದ್ರತೆಯನ್ನು ಒದಗಿಸಿಕೊಡದೇ ಇದ್ದರೂ, ತತ್ಪೂರ್ತಿಯ ಹಸಿವನ್ನು ನೀಗಿಸುವಲ್ಲಿ ಸಹಕಾರಿಯಾಗುತ್ತೇವೆ ಎಂಬುದರಲ್ಲಿ ಯಾವುದೇ ಅನುಮಾನವಿಲ್ಲ.

ಪ್ಲಾಸ್ಟಿಕ್‌ಕೊಡ ಅಥವಾ ಬಕೇಟ್ ರಿಪೇರಿ ಮಾಡಲು ಬೇಕಾದ ಬಹುಮುಖ್ಯ ಪರಿಕರಗಳೆಂದರೆ ಕಟ್ಟಿಗೆ ಅಥವಾ ಪ್ಲಾಸ್ಟಿಕ್ ಹಿಡಿಕೆಯುಳ್ಳ ಅಗಲವಾದ ಎರಡು ಕಬ್ಬಿಣದ ಪಟ್ಟಿಕೆಗಳು. ಎಲ್ (L)

ಆಕಾರದ ಒಂದು ಕಬ್ಬಿಣದ ಸಲಾಕೆ (ಇದು ಇಕ್ಕಟ್ಟಿದ್ದ ಸ್ಥಳಗಳಲ್ಲಿ ಬೆಸಿಗೆಯಾಕಲು ಬಳಸುವರು), ಚಿಕ್ಕ ಚಿಕ್ಕ ರಂದ್ರಗಳು ಒಂದು ತಗಡಿನ ಡಬ್ಬಿ (ಇದಕ್ಕೆ ಒಂದು ತಂತಿಯ ಹಿಡಿಕೆಯನ್ನು ಹಾಕಿರುತ್ತಾರೆ.) ತೇಪೆ ಹಾಕಲು ಬಳಸುವ ಸಾಧನೆಗಳನ್ನು ಬಿಸಿಮಾಡಲು ಇದ್ದಲಿ, ಬೆಂಕಿಮಾಡಲು ಊದಲು ಬೇಕಾಗುವ ಒಂದು ಊದೋಗಳವಿ ಮತ್ತು ಶೇವ್ ಮಾಡಿಬಿಟ್ಟ ಹಳೆಬ್ಲೇಡು, ತೇಪೆಹಾಕಲು ಪ್ಲಾಸ್ಟಿಕ್ ತುಂಡುಗಳು ಇವಿಷ್ಟು ಪರಿಕರಗಳು ಬೇಕಾಗುತ್ತವೆ. ಇವು ನುರಿತ ವ್ಯಕ್ತಿಯ ಕೈಗೆ ಸಿಕ್ಕರೆ ಆ ದಿನದ ಊಟಕ್ಕೆ ಏನೂ ತೊಂದರೆಯಿಲ್ಲ, ಇವುಗಳ ರಿಪೇರಿ ಮೊಡಲು ಬೇಕಾಗುವ ಪರಿಕರಗಳಿಗೆ ಹೆಚ್ಚಿಗೆ ಬಂಡವಾಳದ ಅವಶ್ಯಕತೆಯೂ ಇಲ್ಲ. ಹೆಚ್ಚೆಂದರೆ ೧೦ ೩೦ ರೂಪಾಯಿಗಳಲ್ಲಿ ಈ ಎಲ್ಲಾ ಪರಿಕರಗಳನ್ನು ಸಿದ್ಧಪಡಿಸಿಕೊಳ್ಳಬಹುದು. ವಿವಿಧ ರೀತಿಯ ಗುಣಮಟ್ಟದ ಪ್ಲಾಸ್ಟಿಕ್ ವಸ್ತುಗಳನ್ನು ರಿಪೇರಿ ಮಾಡಬೇಕಾಗಿ ಬಂದ ಸಂದರ್ಭದಲ್ಲಿ ರಿಪೇರಿ ಮಾಡುವವನ ಬುದ್ಧಿವಂತಿಕೆ ಹಾಗೂ ಕೈಚಳಕಕ್ಕೆ ಹೆಚ್ಚಿನ ಬೆಲೆ ಇರುತ್ತದೆ. ಹಾಗಾಗಿ ಈ ಕಸುಬಿನಲ್ಲಿ ತೊಡಗುವವನಿಗೆ ಅದರ ಬಗ್ಗೆ ಸರಿಯಾದ ಜ್ಞಾನವಿರಬೇಕು. ಈ ರೀತಿಯ ಜ್ಞಾನಗಳಿಗೆ ನಿರಂತರ ಬೆಲೆ ಸಿಗುವುದು ಕಷ್ಟಸಾಧ್ಯ.

ಹಿಂದೆ ಕಬ್ಬಿಣ ಹಾಗೂ ತಾಮ್ರದ ಕೆಲಸ ಮಾಡುವವರಿಗೆ ಹಳ್ಳಿ ನಗರಗಳಲ್ಲಿ ಕೈತುಂಬ ಕೆಲಸವಿತ್ತು. ನಂತರ ಈ ಕೆಲಸವನ್ನು ಕಾರ್ಖಾನೆಗಳು ಮಾಡತೊಡಗಿದಾಗ ಈ ವೃತ್ತಿಯಲ್ಲಿರುವವರಿಗೆ ಸ್ವಲ್ಪ ಆತಂಕ ಉಂಟಾಯಿತು. ಆದರೆ ಇತ್ತೀಚೆಗೆ ಅದರ ಸ್ಥಾನವನ್ನು ಪ್ಲಾಸ್ಟಿಕ್ ಆಕ್ರಮಿಸಿಕೊಂಡಾದ ಅವರ ಬದುಕೇ ಅತಂತ್ರ ಸ್ಥಿತಿಯಲ್ಲಿ ನಿಂತಿತು. ಅದೇ ರೀತಿ ಕಾಫಿ-ಟೀ, ನೀರು, ಇನ್ನಿತರೆ ಸ್ಟೀಲ್ ಸಿಲ್ವರ್ ವಸ್ತುಗಳ ಸ್ಥಾನವನ್ನು ಇಂದು ಒಮ್ಮೆ ಮಾತ್ರ ಬಳಸಿ ಬಿಸಾಕುವಂತಹ ವಸ್ತುಗಳು ಆಕ್ರಮಿಸಿಕೊಂಡಿರುವುದರಿಂದ [ಸ್ಟೀಲ್, ಸಿಲ್ವರ್ ವಸ್ತುಗಳ ಸ್ಥಾನವನ್ನು ಇಂದು ಒಮ್ಮೆ ಮಾತ್ರ ಬಳಸಿ ಬಿಸಾಕುವಂತಹ {Use and throw) ವಸ್ತುಗಳು ಆಕ್ರಮಿಸಿಕೊಂಡಿರುವುದರಿಂದ] ಸ್ಟೀಲ್, ಸಿಲ್ವಾರ್ ವಸ್ತುಗಳನ್ನು ತಯಾರಿಸುವ ಕಂಪನಿಗಳ ಗತಿಯೇನು? ಇಂತಹ ಬದಲಾವಣೆಗಳಿಂದ ದುಡಿಯುವ ಕೈಗಳಿಗೆ ತೊಂದರೆಯಾಗುತ್ತಿದ್ದರೂ, ತೀವ್ರಗತಿಯಲ್ಲಿ ಬೆಳೆಯುತ್ತಿರುವ ಜನಸಂಖ್ಯೆಗನುಗುಣವಾಗಿ ವಸ್ತುಗಳನ್ನು ತಯಾರಿಸಿಕೊಡುವಲ್ಲಿ ಸಾಧ್ಯವಾಗುತ್ತಿಲ್ಲ. ಹಾಗಾಗಿ ಪರಿಸರಕ್ಕೆ ಹಾನಿಯಾಗುತ್ತಿದ್ದರೂ ಸಹ ಜನಸಂಖ್ಯೆ, ಸಮಯದ ಅಭಾವ, ವ್ಯವಸ್ಥೆಗಳಲ್ಲಿನ ಅನಾನುಕೂಲಗಳನ್ನು ಸರಿಪಡಿಸಲು ಕಂಪನಿಗಳ ಪ್ರವೇಶ ಅನಿವಾರ್ಯವೆಂದು ಒಪ್ಪಿಕೊಂಡಿರುವುದೇ ಬದಲಾವಣೆಗೆ ಕಾರಣವಾಗಿರಬೇಕು.

'ಒಂದನ್ನು ಪಡೆಯುವಾಗ ಇನ್ನೊಂದನ್ನು ಕಳೆದುಕೊಳ್ಳಬೇಕು' ಎನ್ನುವಂತೆ ಬದಲಾವಣೆ ಬಯಸಿದ ಪ್ರತಿಯೊಂದು ಜೀವ ಜಂತುಗಳಿಗೂ ಒಂದಲ್ಲಾ ಒಂದು ಪ್ರಶ್ನೆಗಳು ಇದ್ದೆ ಇರುತ್ತವೆ. ಹಾಗೂ ಅವು ಅನಿವಾರ್ಯವೂ ಆಗಿರುತ್ತವೆ. ಈ ಕಾರಣಕ್ಕಾಗಿ ಗೋಸಂಗಿಗಳು ಮಾಡುವ ಪ್ರತಿಯೊಂದು ಕಸುಬಿಗೂ ನಿರಂತರ ಸ್ಥಾನಮಾನ ಇಲ್ಲದೇ ಇದ್ದರೂ, ಅವುಗಳ ಬದಲಾವಣೆಯ ಪ್ರಕ್ರಿಯೆಗಳನ್ನು ಸ್ವಾಗತಿಸಿ,

ಹೊಸದಾದ ಕಸುಬುಗಳಿಗೆ ಹೊಂದಿಕೊಂಡು ಹೋಗುವುದು, ಅನಿವಾರ್ಯವಾಗಿಬಿಟ್ಟಿದೆ. ಈ ರೀತಿಯ ಹೊಂದಾಣಿಕೆ ಗೋಸಂಗಿಗಳಲ್ಲಿ ಕಾಣಬಹುದಾಗಿದೆ.

೪. ಸೀಮೆಣ್ಣೆಸ್ಟೌವ್ ರಿಪೇರಿ : 'ಆಡು ಮುಟ್ಟದ ಸೊಪ್ಪಿಲ್ಲ ಎನ್ನುವಂತೆ ಗೋಸಂಗಿಗಳು ಮಾಡದ ಕಸುಬಿಲ್ಲ ಎಂದು ಹೇಳಬಹುದು. 'ಕಾಯಕವೇ ಕೈಲಾಸ' ಎಂದರಿತಿರುವ ಗೋಸಂಗಿಗಳು ಯಾವುದೇ ಕೆಲಸಕ್ಕೆ ಬೇಗನೆ ಹೊಂದಿಕೊಳ್ಳುವ ಬುದ್ಧಿವಂತಿಕೆ ಇವರಲ್ಲಿದೆ. ಈ ರೀತಿಯ ಕಸುಬುಗಳಿಗೆ ಪಾರಂಪರಿಕ ಇತಿಹಾಸ ಇಲ್ಲದೇ ಹೋದರೂ ಆಯಾ ಪರಿಸರ ಹಾಗೂ, ಸಂದರ್ಭಗಳಿಗನುಣವಾಗಿ ತಮ್ಮ ಬುದ್ಧಿಶಕ್ತಿಯನ್ನು ಬಳಸಿ ಕುಟುಂಬದ ಒಂದೊತ್ತಿನ ಗಂಜಿಗೆ ದುಡಿಯುವ ಶಕ್ತಿ ಇವರಲ್ಲಿದೆ.

ಸ್ಟೌವ್ ರಿಪೇರಿ ಮಾಡಲು ಬೇಕಾಗುವ ಪರಿಕರಗಳೆಂದರೆ ವಸ್ತುಗಳನ್ನು ಬಿಸಿಮಾಡಲು ಒಂದು ಹೀಟರ್, ಬೆಸಿಗೆ ಹಾಕಲು ತಾಮ್ರದ ತಂತಿ, ನೌಸಾಗರ್‌ಪುಡಿ, ಸ್ವಚ್ಛಮಾಡಲು ಆಸ್ಸಿಡ್ ಹಾಗೂ ವಿವಿಧ ನಮೂನೆಯ ತಿರುಗಣೆ (Spanner) ಹಾಗೂ 'ನವರಂಗ್' ಕ್ರಾಂತಿ, ರಾಜಾರಾಮ್ ಇನ್ನಿತರೆ ಹೆಸರಿನ ವಿವಿಧ ಸಂಖ್ಯೆಯ ಬರ್ನಾರ್‌ಗಳು ಇವಿಷ್ಟು ಪರಿಕರಗಳು ಅತ್ಯವಶ್ಯಕವಾಗಿ ಬೇಕು. ಪ್ರಾರಂಭದಲ್ಲಿ ಈ ಕಸುಬು ಹೆಚ್ಚು ಬಂಡವಾಳವನ್ನು ಬಯಸಿದರೂ ಸಹ, ಇದರಿಂದ ಬರುವ ಲಾಭವೂ ಸಹ ಅಷ್ಟೇ ಹೆಚ್ಚಿನದಿರುತ್ತದೆ. ಸೂಕ್ಷ್ಮಬುದ್ಧಿಯುಳ್ಳ ವ್ಯಕ್ತಿ ಮಾತ್ರ ಇಂತಹ ಕೆಲಸಗಳನ್ನು ನಿಭಾಯಿಸಬಲ್ಲನು. ಇತ್ತೀಚೆಗೆ 'ಗ್ಯಾಸ್'ನ ಪ್ರಭಾವ ಜಾಸ್ತಿಯಾಗಿದ್ದು, ಸೀಮೆಣ್ಣೆ ಸ್ಟೌವ್‌ಗಳ ಬಳಕೆ ಕಡಿಮೆಯಾಗುತ್ತಿದೆ. ಹಾಗಾಗಿ ದುಡಿಯುವ ಇಂತಹ ಕೈಗಳಿಗೆ ಕೆಲಸ ಕಡಿಮೆಯಾಗುತ್ತಿದೆ. ವಿವಿಧ ವಸ್ತುಗಳಲ್ಲಿ ಸೀಮೆಎಣ್ಣೆ ಬೆರಸುವುದು ಹೆಚ್ಚಾಗಿರುವುದರಿಂದ ಅದರ ಪೂರೈಕೆಯಲ್ಲೂ ಕೊರತೆ ಇದೆ. ಜೊತೆಗೆ ಗ್ಯಾಸ್‌ಗೆ ತಗಲುವ ವೆಚ್ಚಕ್ಕಿಂತ ಸೀಮೆಎಣ್ಣೆಗೆ ತಗಲುವ ವೆಚ್ಚ ಜಾಸ್ತಿಯಾಗುವುದರಿಂದ 'ಗ್ಯಾಸ್' ಕಡಗೆ ಜನರ ಒಲವು ಹೆಚ್ಚುತ್ತಿರುವುದು ಸತ್ಯ ಸಂಗತಿ.

ಹೀಗೆ ಗೋಸಂಗಿಗಳು ಮಾಡುವ ಇಂತಹ ಅಸ್ಥಿರ ಕಸುಬುಗಳು ಅವರ ಒಂದೊತ್ತಿನ ಹೊಟ್ಟೆಯನ್ನು ತುಂಬಬಹುದೇ ವಿನಃ ನಾಳೆಯ ಊಟಕ್ಕೆ ಏನೂ ಮಾಡಬೇಕು ಎಂಬ ಪ್ರಶ್ನೆ ಸದಾ ಕಾಲ ಅವರನ್ನು ಕಾಡುತ್ತಿದೆ. ಈ ರೀತಿಯಾಗಿ ಜೀವನ ಸಾಗಿಸುವ ಅಲೆಮಾರಿ ಗೋಸಂಗಿಗಳಿಗೆ ಮನೆ ಕಟ್ಟಲು ಬೇಕಾಗುವಷ್ಟು ಹಣ ಎಲ್ಲಿಂದ ಬರಬೇಕು? ಸರ್ಕಾರ ಇಂತಹ ಸಮುದಾಯಗಳ ಕಡೆಗೆ ಗಮನಹರಿಸದೆ ಇರುವುದು, ದುರ್ದೈವ, ಕೆಲವೊಮ್ಮೆ ಸರ್ಕಾರ ಇಂತಹ ಸಮುದಾಯಗಳ ಕಡೆ ಗಮನ ಹರಿಸಿ, ವಿವಿಧ ಯೋಜನೆಗಳನ್ನು ಹಾಕಿ ಅಧಿಕಾರಿಗಳಿಗೆ ಸೂಚನೆ ನೀಡಿದರೂ ಸಹ ಫಲಕಾರಿಯಾಗಿಲ್ಲ. ಇಂತಹ ಯೋಜನೆಗಳು ಅಧಿಕಾರಗಳ ಶಾಮೀಲಿನಿಂದ ಉಳ್ಳವರ ಪಾಲಾಗುತ್ತಿರುವುದು ಇಂದೂ ಸಹ ನೋಡಬಹುದಾಗಿದೆ. ಇಂತಹ ಎಷ್ಟೋ ಅಲೆಮಾರಿ ಸಮುದಾಯಗಳ ನಾಗರಿಕ ಪ್ರಪಂಚದ ಸುತ್ತ ಮುತ್ತಲು ಬದುಕುತ್ತಿದ್ದರೂ ಇವರ ಬದುಕು

ನೀರೊಳಗಿನ ಎಣ್ಣೆ ಬಿಂದುವಿನಂತಾಗಿದೆ. ಇಂತಹ ಕಠಿಣ ಪರಿಸ್ಥಿತಿಯಲ್ಲೂ ಗೋಸಂಗಿಗಳು ತಮ್ಮ ಬುದ್ಧಿ ಶಕ್ತಿ, ಶ್ರಮವನ್ನು ಬಳಸಿಕೊಂಡು ಯಾರ ಹಂಗಿಗೂ ಒಳಗಾಗದೆ ಅರೆಹೊಟ್ಟೆ ತುಂಬಿಸಿ ಕೊಳ್ಳುತ್ತಿರುವುದು ಸಾಮಾನ್ಯ ಸಂಗತಿಯಾಗಿದೆ.

೫. **ಪೇಪರ್ ಆಯುವುದು :** ಗೋಸಂಗಿ ಸಮುದಾಯದ ಹೆಣ್ಣು ಮಕ್ಕಳಿಗೆ ಖಾಯಂ ಆದಂತ ಕಸುಬೊಂದಿಲ್ಲ. ಪುರುಷರು ಸಾಮಾನ್ಯವಾಗಿ ಸಂಚಾರಿ ಕಸುಬುಗಳನ್ನು ಅವಲಂಬಿಸಿದರೆ, ಹೆಣ್ಣು ಮಕ್ಕಳು ದಿನಗೂಲಿ ಕೆಲಸದಿಂದ ಹಿಡಿದು ಎಲ್ಲವನ್ನೂ ಮಾಡುವರು.

ನಾನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಗಮನಿಸದಂತೆ ಇತ್ತೀಚೆಗೆ ಎಲ್ಲಾ ಪ್ರದೇಶದ ಗೋಸಂಗಿ ಸಮುದಾಯದ ಹೆಣ್ಣು ಮಕ್ಕಳು (ಚಿಕ್ಕವರಿಂದ ಹಿಡಿದು) ಬೀದಿ ಬೀದಿಗಳಲ್ಲಿ ಕಸದ ತೊಟ್ಟಿ ಮನೆಯ ಅಕ್ಕಪಕ್ಕ ಶಾಲಾಕಾಲೇಜು, ಬಸ್‌ನಿಲ್ದಾಣ ಇನ್ನಿತರೆ ಪ್ರದೇಶಗಳಲ್ಲಿ ಬಿದ್ದಿರುವ ಹಳೆ ಪ್ಲಾಸ್ಟಿಕ್ ಪೇಪರ್, ಪ್ಲಾಸ್ಟಿಕ್ ಚಪ್ಪಲಿ, ಪ್ಲಾಸ್ಟಿಕ್‌ನಿಂದ ತಯಾರಿಸಿದ ಇತರ ವಸ್ತುಗಳನ್ನು ಆಯುವ ಕೆಲಸದಲ್ಲಿ ತೊಡಗಿಸಿಕೊಂಡಿದ್ದಾರೆ. ಇದರ ಜೊತೆಗೆ ಕಬ್ಬಿಣ, ಸಿಲ್ವಾರ್ ಇನ್ನಿತರ ವಸ್ತುಗಳನ್ನೂ ಸಹ ಆಯ್ದುಕೊಂಡು ತಂದು ಡೇರಾದ ಮುಂದೆ ಸುರುವಿದರೆ, ನಡೆದಾಡಲು ಶಕ್ತ ಇಲ್ಲದ ಮುದುಕಿಯರು ಆಯ್ದು ತಂದಂತ ಕಲಬರಕೆ ವಸ್ತುಗಳನ್ನು ಬೇರ್ಪಡಿಸಿಡುವರು. ಹೀಗೆ ಬೇರ್ಪಡಿಸಿದ ವಸ್ತುಗಳನ್ನು 'ಗುಜರಿ ಅಂಗಡಿಗಳಿಗೆ' ಹಾಕಿ ಬಂದಂತಹ ಬಿಡಿಗಾಸಿನಿಂದ ಸಂಸಾರದ ಸಣ್ಣ ಪುಟ್ಟ ಅಗತ್ಯಗಳನ್ನು ಪೂರೈಸಿಕೊಳ್ಳುವರು. ಬರೀ ಪುರುಷರಷ್ಟೇ ದುಡಿದರೆ ಸಂಸಾರ ತೂಗಿಸಲು ಸಾಧ್ಯವಿಲ್ಲ. ಹಾಗಾಗಿ ಮಕ್ಕಳಿಂದ ಹಿಡಿದು ಹಿರಿಯರವರೆಗೆ ಗಂಡು-ಹೆಣ್ಣು ಎಂಬ ಭೇದ ಭಾವವಿಲ್ಲದೆ ಕುಟುಂಬದ ಎಲ್ಲಾ ಸದಸ್ಯರು ಕೂಡಿ ದುಡಿಯುವರು.

ಇತ್ತೀಚೆಗೆ ಇದೇ ಸಮುದಾಯದಲ್ಲಿ ಆರ್ಥಿಕವಾಗಿ ಸಬಲರಿದ್ದವರು 'ಗುಜರಿ ಅಂಗಡಿಗಳನ್ನು' ತೆರೆದಿರುವುದರಿಂದ ಆಯ್ದಂತಹ ತ್ಯಾಜ್ಯ ವಸ್ತುಗಳನ್ನು ಹೊರಗಡೆ ಮಾರಾಟ ಮಾಡುವ ಕಿರಿಕಿರಿ ತಪ್ಪಿದೆ. ಜೊತೆಗೆ ಲಾಭವು ಸಹ ಸರಿಯಾದ ಪ್ರಮಾಣದಲ್ಲಿ ಸಿಗುತ್ತಿರುವುದು ಸಂತೋಷದ ವಿಷಯ.

ತ್ಯಾಜ್ಯವಸ್ತುಗಳನ್ನು ಆಯುವ ಕಾಯಕದಿಂದಲೇ ಗೋಸಂಗಿಗಳ 'ಜಾತಿ'ಯನ್ನು ಗುರುತಿಸುವಷ್ಟರ ಮಟ್ಟಿಗೆ ಪ್ರಭಾವ ಬೀರಿದೆ. (ಈ ಮಾತು ನನ್ನ ಕ್ಷೇತ್ರ ಕಾರ್ಯದ ಪ್ರದೇಶಗಳಿಗೆ ಮಾತ್ರ ಅನ್ವಯವಾಗುತ್ತದೆ) ನಗರ ಪ್ರದೇಶಗಳ ಸುತ್ತಮುತ್ತಲು ವಾಸಿಸುತ್ತಿದ್ದರೂ, ನಾಗರಿಕತೆಯ ಪ್ರಭಾವದಿಂದ ತುಂಬಾ ದೂರ ಉಳಿದಿದ್ದಾರೆ, ಸರ್ಕಾರದ ಸವಲತ್ತುಗಳಂತೂ ಇವರ ಸಮೀಪಕ್ಕೂ ಸುಳಿದಿಲ್ಲ. ಎಲ್ಲೋ ಎರಡು ಮೂರು ಪ್ರದೇಶಗಳಲ್ಲಿ ಮಾತ್ರ. ಬೇರೆಯವರ ಹೆಸರಿನಲ್ಲಿ ಅಲ್ಪ ಸ್ವಲ್ಪ ಸಹಾಯವನ್ನು ಪಡೆದು ಸಾಧಾರಣ ಜೀವನ ಸಾಗಿಸುತ್ತಿದ್ದಾರೆ. ಇದಿಷ್ಟನ್ನು ಬಿಟ್ಟರೆ ಉಳಿದಂತೆ ನೂರಕ್ಕೆ ತೊಂಬತ್ತೆಂಟರಷ್ಟು ಜನ ಯಾರ ಸಹಾಯವಿಲ್ಲದೆ ಅಸ್ಥಿರ ಕಸುಬುಗಳನ್ನು ನೆಚ್ಚಿಕೊಂಡು ಕಾಲ ನೂಕುತ್ತಿದ್ದಾರೆ. ಶೇಖಡ ಐವತ್ತರಷ್ಟು

ಜನ ಅಲೆಮಾರಿ ಜೀವನಕ್ಕೆ ಕಡಿವಾಣಹಾಕಿ ಸ್ಥಿರ ಜೀವನ ನಡೆಸಲು ಹಾತೊರೆಯುತ್ತಿದ್ದಾರೆ. ಆದರೆ ಇವರಿಗೆ 'ಜಾತಿ' ಹಾಗೂ ಅದರ ರೀತಿರಿವಾಜುಗಳು, ನೀತಿ ನಿಯಮಗಳು ಎಂಬ ಪಡೆಂಬೂತದಂತೆ ಸಮಸ್ಯೆಯಾಗಿರುವುದರಿಂದ ಎಲ್ಲಿಯೂ ಸಲ್ಲದವರಾಗಿ ಪರಕೀಯ ಮನೋಭಾವನೆ ಮನೆಮಾಡಿ ಕುಳಿತಿದೆ. ಅಲೆಮಾರಿಗಳಾಗಿದ್ದಾಗ ಈ ರೀತಿಯ ಸಮಸ್ಯೆಗಳು ಅವರನ್ನು ಎಂದೂ ಕಾಡಲಿಲ್ಲ. ಆಗ ಅವರಿಗೆ ಅದರ ಅವಶ್ಯಕತೆಯೂ ಇದ್ದಿಲ್ಲ 'ಹಚ್ಚಗಿದ್ದಲ್ಲಿ ಮೇಯ್ದು ಬೆಚ್ಚಗಿದ್ದಲ್ಲಿ ಮಲಗು' ಎನ್ನುವಂತೆ ಬೇಟೆ-ಭಿಕ್ಷೆಗೆ ಸಮೃದ್ಧಿ ಕಾಲವಾಗಿದ್ದ, ಅಂದಿನ ಸಂದರ್ಭ ಇಂದು ಇಲ್ಲದಾಗಿ ಜನಸಂಖ್ಯೆ ಬೆಳೆದಂತೆಲ್ಲಾ ಅವಕಾಶಗಳು ಕಡಿಮೆಯಾಗಿ ಪ್ರತಿಯೊಂದುಕ್ಕೂ ಕಾನೂನು ಚೌಕಟ್ಟನ್ನು ರೂಪಿಸಿರುವುದರಿಂದ ಸಹಜವಾಗಿಯೇ ಇವರು ಅಲೆಮಾರಿತನಕ್ಕೆ ಕಡಿವಾಣ ಹಾಕಬೇಕಾಯಿತು. ಇಷ್ಟಾದರೂ ಇವರ ಸಮಸ್ಯೆ ಬಗೆಹರಿದಿಲ್ಲ. ಎಲ್ಲವನ್ನೂ ಕೊಂಡುತಿನ್ನುವ ಇಂದಿನ ಸಂಕೀರ್ಣ ಬದುಕಿನಲ್ಲಿ ಕುಟುಂಬದ ಸದಸ್ಯರೆಲ್ಲ ದುಡಿದರೂ ಸಹ ಅಂದಂದಿಗೆ ಸರಿಹೋಗುವುದು. ಯಾವ ಕೆಲಸವನ್ನೇ ಕೊಟ್ಟರು ನಿಷ್ಠೆಯಿಂದ ಮಾಡುವ ಇಂತಹ ಸಮುದಾಯಗಳ ಕಡೆಗೆ ಸರ್ಕಾರ ಕಣ್ಣು ತೆರೆಯದೇ ಇರುವುದು ದುರ್ದೈವ ಅಷ್ಟೇ ಅಲ್ಲ, ಗೋಸಂಗಿಗಳು ವಾಸಿಸುವ ಪ್ರದೇಶದ ಜನ (ಸ್ಥಳೀಯರು) ಇವರನ್ನು ಪರಕೀಯರಂತೆ ನಡೆಸಿಕೊಳ್ಳುತ್ತಾರೆ. ಹೀಗೆ ತಮ್ಮ ಅಲೆಮಾರಿ ಬುದುಕಿನಿಂದ ಹಿಡಿದು ಇಂದಿನ ಅರೆ ಅಲೆಮಾರಿ ಬದುಕಿನವರೆಗೂ ಒಂದಲ್ಲಿ ಒಂದು ಕಷ್ಟಗಳನ್ನು ಅನುಭವಿಸುತ್ತಾ ಜೀವನ ಸಾಗಿಸುತ್ತಿದ್ದಾರೆ.

## ಬೇಟೆ

ಪ್ರಾಚೀನ ಕಾಲದಲ್ಲಿ ಬೇಟೆಯು ಆದಿವಾಸಿಗಳ ಸಹಜ ವೃತ್ತಿಯಾಗಿತ್ತು. ಈ ವೃತ್ತಿ ಮುಖ್ಯವಾಗಿ ಎರಡು ಕಾರಣಗಳಿಗಾಗಿ ರೂಪಗೊಂಡಿರಬೇಕು. ಒಂದು ಕಾಡು ಪ್ರಾಣಿಗಳ ದಾಳಿಯಿಂದ ತಮ್ಮನ್ನು ರಕ್ಷಿಸಿಕೊಳ್ಳಲು, ಮತ್ತೊಂದು ಬೇಟೆಯಾಡಿದ ಪ್ರಾಣಿಗಳಲ್ಲಿ ಆಹಾರಕ್ಕೆ ಯೋಗ್ಯವಾದವುಗಳನ್ನು ಬಲಸುವುದು. ಹೀಗೆ ತಮ್ಮ ರಕ್ಷಣೆ ಹಾಗು ಆಹಾರಕ್ಕಾಗಿ ಪ್ರಾರಂಭಿಸಿದ ಈ ಬೇಟೆ ಕ್ರಮ ಇಂದು ಒಂದು ಸಂಪ್ರದಾಯವಾಗಿ ಮಾತ್ರ ಉಳಿದು ಕೊಂಡಿದೆ. ಅರಣ್ಯ ಕಾನೂನಿನ ನಿಯಂತ್ರಣಕ್ಕೊಳಪಟ್ಟಿರುವುದರಿಂದ ಆದಿವಾಸಿಗಳ ಹಿಂದಿನ ನಿರಂತರ ಬೇಟೆ ಇಂದು ನಿಯಂತ್ರಮಗೊಂಡು ಕೇವಲ ಹಬ್ಬ ಹರಿದಿನಗಳಲ್ಲಿ ಮಾತ್ರ ಉಳಿದುಕೊಂಡು ಬಂದಿದೆ.

ಅಲೆಮಾರಿಗಳಾದ ಗೋಸಂಗಿಗಳು ಮೂಲತಃ ಮಾಂಸಹಾರಿಗಳು. ಹಾಗಾಗಿ ಅವರ ದಿನನಿತ್ಯದ ಆಹಾರಕ್ಕೆ ಬೇಟೆ ಅನಿವಾರ್ಯವಾಗಿದೆ. ನಿರಕ್ಷರಿಗಳಾದ ಗೋಸಂಗಿಗಳು ವಿವಿಧ ತಂತ್ರಗಳನ್ನು ಬಳಸಿ ವಿವಿಧ ಪ್ರಾಣಿಗಳನ್ನು ಬೇಟೆಯಾಡುವ ವಿಧಾನ ಆಧುನಿಕ ಬೇಟೆ ವಿಧಾನಕ್ಕೆ ಸವಾಲಾಗಿದೆ. ಸಮೂಹಿಕ ಬೇಟೆ ಕ್ರಮವನ್ನೇ ಹೆಚ್ಚಾಗಿ ಅನುಸರಿಸುತ್ತಿರುವ ಗೋಸಂಗಿಗಳು ಬೇಟೆಯ ಬಗೆಗೆ ಅವರದೇ ಆದ ನೀತಿ ನಿಯಮಗಳನ್ನು ರೂಢಿಸಿಕೊಂಡಿದ್ದಾರೆ. ಬಿಗಿಗೊಂಡ ಅರಣ್ಯ ನೀತಿಯ ಇಂದಿನ ಸಂದರ್ಭದಲ್ಲೂ ಹತ್ತು

ಹಲವು ಪ್ರಾಣಿ ಪಕ್ಷಿಗಳನ್ನು ಬೇಟೆಯಾಡಿ ಆಹಾರಕ್ಕಾಗಿ ಬಳಸುತ್ತಿದ್ದಾರೆ. ಅವುಗಳಲ್ಲಿ ಕೆಲವು ಮುಖ್ಯವಾದ ಪ್ರಾಣಿ ಪಕ್ಷಿಗಳ ಬೇಟೆ ವಿಧಾನಗಳನ್ನಿಲ್ಲಿ ವಿವರಿಸಲಾಗಿದೆ.

೧. ನರಿ (ಗೇಂದರ್)

೨. ಚೀರುನಾಯಿ (ರುದಡ)

೩. ಮುಂಗ(ಲಿ)ಸಿ (ಬುಂಗರ್)

೪. ಆಮೆ (ಟುಸ್‌ಮುರಗಿ)

೫. ಮುಳ್ಳಂದಿ (ಸ್ಹೇವ್)

೬. ಪುನಗಿನ ಬೆಕ್ಕು (ಪೋಸಡಿ)

೭. ಅಡವಿ ಬೆಕ್ಕು (ಬಲಾಡ)

೮. ಉಡ (ಚಿಪ್ಪಟ್)

೯. ಮೊಸಳೆ (ಮಗರ್)

೧೦. ಕಾಡು ಹಂದಿ (ಡುಕ್ಕರ್)

೧೧. ಮೊಲ (ಸಸೌ)

೧೨. ನವಿಲು (ಮೋರ್)

೧೩. ಕೌಜಿ(ಜ) (ತಿತ್ತರ್)

೧೪. ಪುರಲಕ್ಕಿ (ಬುರಗುಂಜ)

೧೫. ಕಾಡು ಕೋಳಿ (ರಾನ್‌ಕುಕಡೋ)

ಅಲೆಮಾರಿ ಗೋಸಂಗಿ ಸಮುದಾಯದವರು ದಿನನಿತ್ಯದ ಆಹಾರಕ್ಕಾಗಿ ಹತ್ತುಹಲವು ಪ್ರಾಣಿ-ಪಕ್ಷಿಗಳನ್ನು ಬೇಟೆಯಾಡುತ್ತಾರೆ. ಅವುಗಳಲ್ಲಿ ಕೆಲವು ಮುಖ್ಯವಾದ ಪ್ರಾಣಿ ಪಕ್ಷಿಗಳ ಬೇಟೆಯ ವಿಧಾನಗಳನ್ನಿಲ್ಲಿ ವಿವರಿಸಲಾಗುತ್ತದೆ.

**೧. ನರಿಬೇಟೆ (ಗೇಂದರ್) :** ಗೋಸಂಗಿಗಳಿಗೆ ಬಹು ಪ್ರಿಯವಾದ ಬೇಟೆಗಳಲ್ಲಿ ನರಿಬೇಟೆಯೂ ಒಂದು. ಜನಪದರ ಬದುಕಿನಲ್ಲಿ ನರಿಯ ಬಗ್ಗೆ ಅನೇಕ ನಂಬಿಕೆಗಳಿವೆ. ಆ ಹಿನ್ನೆಲೆಯಲ್ಲಿ ಗಾದೆಗಳು ಜನ್ಮ ತಳೆದಿವೆ. ಒಬ್ಬ ವ್ಯಕ್ತಿಯಲ್ಲಿನ ಚಾಣಾಕ್ಷತನ, ಬುದ್ಧಿವಂತಿಕೆ, ತಂತ್ರಗಾರಿಕೆಯನ್ನು ಗುರುತಿಸುವಾಗ 'ನರಿ'ಯನ್ನು ಪ್ರಾಸಂಗಿಕವಾಗಿ ನೆನಪಿಸಿಕೊಳ್ಳುತ್ತಾರೆ. ನರಿಬುದ್ಧಿಯವನು, ನರಿಗಳ ನ್ಯಾಯ, ಬೆಳಿಗ್ಗೆ ಎದ್ದು ನರಿ ಮುಖ ನೋಡಿದ್ದಾನೆ ಮೊದಲಾದ ಮಾತುಗಳು ಸೃಷ್ಟಿಗೊಂಡದ್ದು ಈ ಹಿನ್ನೆಲೆಯಲ್ಲಿಯೇ ಎಂಬುದು ಗಮನಿಸಬಹುದಾದ ವಿಚಾರ. ಇಂತಹ ಚಾಣಾಕ್ಷತನದ ಬೇಟೆಯ ಮಾಂಸವನ್ನು ಭಕ್ಷಿಸಿದರೆ ಬುದ್ಧಿಯು ಚುರುಕುಗೊಳ್ಳುತ್ತದೆಂಬ ಸಾಮಾನ್ಯ ನಂಬಿಕೆ ಗೋಸಂಗಿಗಳಲ್ಲಿ ಇಂದಿಗೂ ಇದೆ. 'ಗೇಂದರ್ ನೇ ಸೋಳಾ ಬುದ್ಧಿ, ಅಪಾನೆ ಸತ್ರಾ ಬುದ್ದಿ' (ನರಿಗೆ ಹದಿನಾರು ಬುದ್ದಿ ಇದ್ದರೆ ನಮಗೆ (ಗೋಸಂಗಿಗಳಿಗೆ) ಹದಿನೇಳು

ಬುದ್ಧಿ) ಎಂಬ ಗಾದೆ ಪ್ರಚಲಿತದಲ್ಲಿರುವುದನ್ನು ಗಮನಿಸಬಹುದು. ನರಿಯ ಮಾಂಸವನ್ನು ಗೋಸಂಗಿಗಳು ರುಚಿಗಾಗಿ, ರೋಗ ನಿರೋಧಕ್ಕಾಗಿ ಬಳಸುತ್ತೇವೆಂದು ಹೇಳಿಕೊಳ್ಳುತ್ತಾರೆ. 'ಗೇಂದರ್ ತೋ ಬಾರಾಸೌ ರೋಗ್‌ನೆ ಮಾರೆ' ಎಂಬ ಗಾದೆ ಅವರಲ್ಲಿ ಪ್ರಚಲಿತವಿರುವುದನ್ನು ಈ ಹಿನ್ನೆಲೆಯಲ್ಲಿ ಗಮನಿಸಬಹುದು. ನರಿಗಿಂತ ಒಂದು ಬುದ್ಧಿ ಹೆಚ್ಚಾಗಿರುವುದು ಯಾವುದೆಂದರೆ ನರಿಯನ್ನು ಬೇಟೆಯಾಡಲು ಬಳಸುವ ತಂತ್ರಗಾರಿಕೆ ಎಂದು ಗೋಸಂಗಿಗಳು ಹೆಮ್ಮೆಯಿಂದ, ಭಾವುಕರಾಗಿ ಹೇಳಿಕೊಳ್ಳುತ್ತಾರೆ.

ಆಧುನಿಕ ತಂತ್ರಜ್ಞಾನವಿಲ್ಲದೆ ಸಾಂಪ್ರದಾಯಿಕವಾದ ರೀತಿಯಲ್ಲಿ ನರಿಬೇಟೆಯನ್ನು ಆಡುತ್ತಾರೆ. ವಂಶಪಾರಂಪರಾಗತವಾಗಿ ಬಂದ ಬೇಟೆಯ ತಂತ್ರವನ್ನೆ ಅನುಸರಿಸುತ್ತಾರೆ. ಬಲೆ, ಬಡಿಗೆಯನ್ನು ಈ ಬೇಟೆಗೆ ಬಳಸುತ್ತಾರೆ. ಜೊತೆಗೆ ವಿಶೇಷವಾಗಿ ತರಬೇತಿ ಪಡೆದ ಬೇಟೆನಾಯಿಗಳನ್ನು ಬೇಟೆಗೆ ಹೋಗುವಾಗ ಜೊತೆಗೆ ಕರೆದೊಯ್ಯುತ್ತಾರೆ. ಪ್ರಕೃತಿಯಲ್ಲಿ ತಾವೂ ಪ್ರಕೃತಿಯಂತೆ ಬದುಕುವ ಗೋಸಂಗಿಗಳು ಕಾಡು ಪ್ರಾಣಿಗಳ ಚಲನವಲನಗಳನ್ನು ಚೆನ್ನಾಗಿ ಅರಿತವರಾಗಿರುತ್ತಾರೆ. ಯಾವ ಪ್ರಾಣಿಗಳು ಎಂತಹ ಸ್ಥಳದಲ್ಲಿ ಇರುತ್ತವೆ? ಅವುಗಳನ್ನು ಎಂತಹ ಸಂದರ್ಭದಲ್ಲಿ ಯಾವ ರೀತಿಯಲ್ಲಿ ಬೇಟೆಯಾಡಬಹುದೆಂಬ ತಿಳುವಳಿಕೆಯುಳ್ಳವರಾಗಿದ್ದಾರೆ. ಪ್ರಾಣಿಗಳಲ್ಲಿಯೇ ಅತ್ಯಂತ ಚಾಣಾಕ್ಷ ಹಾಗೂ ಚುರುಕು ಬುದ್ಧಿಯುಳ್ಳ ಪ್ರಾಣಿ ಎಂಬ ಹೆಗ್ಗಳಿಕೆಗೆ ನರಿ ಪಾತ್ರವಾಗಿದೆ. ಇಂತಹ ಅನುಮಾನ ಪ್ರಾಣಿಯನ್ನು ಗೋಸಂಗಿಗಳು ತುಂಬಾ ಸೂಕ್ಷ್ಮವಾಗಿ ಗ್ರಹಿಸಿ, ಗಾಳಿಗೆ ವಿರುದ್ಧ ದಿಕ್ಕಿನಲ್ಲಿ ಬಲೆಯನ್ನು ಕಟ್ಟುತ್ತಾರೆ. ಬೇಟೆಗಾರನ ವಾಸನೆ ನರಿಗೆ ತಿಳಿಯಬಾರದೆಂಬ ಬುದ್ಧಿಯಿಂದ ಬಲೆಗೆ ವಿರುದ್ಧವಾಗಿ ಬೇಟೆಯ ನಾಯಿಗಳನ್ನು ಚೂ ಬಿಡುತ್ತಾ 'ಉಸ್‌ಪಕಡ್, ಉಸ್‌ಪಕಡ್' ಎಂಬ ಉದ್ಘೋಷಗಳಿಂದ ನರಿಯನ್ನು ಅಟ್ಟಿಸಿಕೊಂಡು ಹೋಗುತ್ತಾರೆ. ಬಲೆಗೆ ಬಿದ್ದ ನರಿಯನ್ನು ಮರೆಯಲ್ಲಿ ನಿಂತ ಬೇಟೆಗಾರರು ಬಡಿಗೆಗಳಿಂದ ಹೊಡೆದು ಕೊಲ್ಲುತ್ತಾರೆ. ಕೊಂದ ಪ್ರಾಣಿಯ ಮಾಂಸದಿಂದ ಮಾಡಿದ ಸಾರಿನ ತಿಳಿಯನ್ನು ಒಂದು ಗ್ಲಾಸ್ ಕುಡಿದರೆ ತುಂಬಾ ಚೆನ್ನಾಗಿರುತ್ತದೆಯಂತೆ ಬಾಣತಿಯರಿಗೆ ಇದರ ಮಾಂಸ ತಿನ್ನಿಸಿದರೆ ಎದೆ ಹಾಲು ವೃದ್ಧಿಯಾಗುತ್ತದೆಂದು ಹೇಳುತ್ತಾರೆ.

ಬೇಟೆಯಾಡುವ ಸಂದರ್ಭದಲ್ಲಿ ನರಿಗಳಿಂದ ಕಚ್ಚಿಸಿಕೊಂಡ ಉದಾಹರಣೆಗಳು ಇವೆ. ಅಂಥಹ ಸಂದರ್ಭದಲ್ಲಿ ಅದೇ ಪ್ರಾಣಿಯ ಮಾಂಸದಿಂದ ಮಾಡಿದ ಸಾರನ್ನು (ಸಾರಿಗೆ ಉಪ್ಪು ಬೆರಸಬಾರದು) ಗಾಯದ ಜಾಗಕ್ಕೆ ಹಾಕಿ ಕಟ್ಟಿದರೆ ಗಾಯ ವಾಸಿಯಾಗುವುದಂತೆ. ಹೀಗೆ ಬೇಟೆಯ ಸಂದರ್ಭದಲ್ಲಿ ಕಚ್ಚಿದ ಪ್ರಾಣಿಯ ಮಾಂಸದ ಸಾರನ್ನು ಗಾಯಕ್ಕೆ ಹಾಕಿ ಕಟ್ಟುವರು. ಇದು ಅವರು ಕಂಡುಕೊಂಡ ವೈದ್ಯ ಪದ್ಧತಿ.

ವಿವಿಧ ವೃತ್ತಿಗಳಲ್ಲಿ ನಿರತರಾಗಿರುವ ಗೋಸಂಗಿಗಳು 'ನರಿ' ಮಾಂಸವನ್ನು ತಿಂದ ನಂತರ ಸ್ನಾನ ಮಾಡಿ ಊರೊಳಗೆ ಹೋಗುವರು. ಹಾಗೆ ಮಾಡದಿದ್ದರೆ, ಇವರ ಮೈಯಿಂದ ಬರುವ ನರಿ ಮಾಂಸದ

ವಾಸನೆಗೆ ಊರಲ್ಲಿನ ನಾಯಿಗಳು ಬೊಗಳಿ ಹಿಂಬಾಲಿಸುತ್ತವಂತೆ. ಹಾಗಾಗಿ ನರಿ ಮಾಂಸ ಉಂಡ ಮರುದಿನ ತಪ್ಪದೆ ಸ್ನಾನಮಾಡಿ ವಿವಿಧ ಕೆಲಸ ಕಾರ್ಯಗಳಲ್ಲಿ ತೊಡಗುವರು.

ಕೆಲವೊಮ್ಮೆ ಬೇಟೆಯ ಮಾಂಸವನ್ನು ಅಡವಿಯಲ್ಲೇ ಬೇಯಿಸಿ ತಿನ್ನುವ (ಪಾತ್ರೆಗಳ ಸಹಾಯವಿಲ್ಲದೆ) ವಿಶಿಷ್ಟ ಪದ್ಧತಿಯೊಂದು ಇವರಲ್ಲಿದೆ. ಪ್ರಾಣಿಯ ಕರುಳನ್ನು ಬಿಡಿಸಿ. ಅದರಲ್ಲಿನ ಕಸವನ್ನು ತೊಳೆದು ಮೊದಲು ಒಂದು ತುದಿಗೆ ದಾರದಿಂದ ಕಟ್ಟಿ ಮತ್ತೊಂದು ತುದಿಯ ಕಡೆಯಿಂದ ಅದೇ ಪ್ರಾಣಿಯ ಮಾಂಸವನ್ನು ತುಂಬಿ. ಆ ತುದಿಯನ್ನು ದಾರದಿಂದ ಬಿಗಿದು ಬೆಂಕಿಯಲ್ಲಿ ಹಾಕಿ ಸುಡುವರು. ಹೀಗೆ ಸುಡುವಾಗ ಅದು ಊದಿಕೊಳ್ಳುತ್ತದೆ. ಆಗ ಮುಳ್ಳಿನಿಂದ ಮಾಂಸ ತುಂಬಿದ ಕರುಳನ್ನು ತೂತು ಮಾಡುವರು. ಅದು ಚೆನ್ನಾಗಿ ಕುದ್ದ ನಂತರ ತಿನ್ನುವರು. ಈ ರೀತಿಯಾಗಿ ಸುಟ್ಟ ಮಾಂಸ ತುಂಬಾ ರುಚಿಯಾಗಿರುತ್ತದೆಯಂತೆ. ಹೀಗೆ ವಿಶಿಷ್ಟ ರೀತಿಯಲ್ಲಿ ಮಾಂಸವನ್ನು ಸುಟ್ಟು ತಿನ್ನುವ ಗೋಸಂಗಿಗಳಿಗೆ ಬುಡ್ಗಜಂಗಾಲ ಸಮುದಾಯದವರು, 'ಪೇಗುಲೋಳು' (ಕರುಳಿನೋರು) ಎಂದು ಕರೆಯುವರು. ಬಹುಶಃ ಕರುಳಿನಲ್ಲಿ ಮಾಂಸ ತುಂಬಿ ಸುಟ್ಟು ತಿನ್ನುವುದರಿಂದ ಇವರಿಗೆ ಈ ಹೆಸರು ಬಂದಿರಬೇಕು. ಹೀಗೆ ಗೋಸಂಗಿಗಳು ಅತ್ಯಂತ ಸರಳ ರೀತಿಯ ಸಾಂಪ್ರದಾಯಿಕ ಬೇಟೆಯ ವಿಧಾನವನ್ನು ಅನುಸರಿಸುತ್ತಾರೆ.

**೨. ಚೀರುನಾಯಿ (ರುದಡ) ಬೇಟೆ :** ನಾಯಿ ಜಾತಿಗೆ ಸೇರಿದ ಕಾಡುಪ್ರಾಣಿ. ಇದನ್ನು 'ಸೀಳ್‌ನಾಯಿ' 'ನೀರುನಾಯಿ, ಕೂರ' ಎಂತಲೂ ಕರೆಯುವರು. ಇದು ನಸಿಪುಡಿ ಬಣ್ಣದ ರೂಪದಿಂದ ಕೂಡಿದ್ದು, ಬಾಲ ಅಗಲವಾಗಿರುತ್ತದೆ. ನೀರಿರುವ ಜಾಗದ ಸುತ್ತ ಮುತ್ತಲ ಪ್ರದೇಶದಲ್ಲೇ ಹೆಚ್ಚಾಗಿ ವಾಸಿಸುವ ಇದನ್ನು ಬೇಟೆಯಾಡಲು ಸಾಂಪ್ರದಾಯಿಕವಾದ ವಿಧಾನವೊಂದು ಗೋಸಂಗಿಗಳಲ್ಲಿ ರೂಢಿಯಲ್ಲಿದೆ. ಇದರ ಬೇಟೆಗೆ 'ವಯರಿನಬಲೆ' ಮತ್ತು 'ಕತ್ತರಿಬಲೆ' ಪ್ರಮುಖ ಪರಿಕರಗಳನ್ನಾಗಿ ಬಳಸುವರು.

ಬೇಟೆಯಲ್ಲಿ ನಿಪುಣರಾದ ಗೋಸಂಗಿಗಳು ಯಾವುದೇ ಪ್ರಾಣಿಯನ್ನು ಬೇಟೆಯಾಡಿದರು. ಆ ಪ್ರಾಣಿಯ ಚಲನವಲನಗಳನ್ನು ಚೆನ್ನಾಗಿ ಗಮನಿಸುವರು. ಜೊತೆಗೆ ಆ ಪ್ರಾಣಿಗಳು ವಾಸಿಸುವ ಸ್ಥಳಗಳ ಬಗೆಗೆ ಚೆನ್ನಾಗಿ ಅರಿತಿರುವುದರಿಂದ ಬೇಟೆ ಇವರಿಗೆ ಸುಲಭವಾಗುವುದು. ಸಹಾಯಕ್ಕಾಗಿ ತರಬೇತಿ ಪಡೆದ ನಾಯಿಗಳನ್ನು ಸಹ ಬಳಸುವುರು. ಚೀರುನಾಯಿಯ ಒಂದು ಮುಖ್ಯ ದೌರ್ಬಲ್ಯವೇನೆಂದರೆ ಆಹಾರ ಮುಗಿಯುವವರೆಗೂ ಒಂದೇ ಪ್ರದೇಶದಲ್ಲಿ ವಾಸಿಸುವದು. ಆ ಸಂದರ್ಭದಲ್ಲಿ ಅದು ಮೊದಲು ಎಲ್ಲಿ ಕಕ್ಕಸು ಮಾಡಿರುತ್ತದೋ ಅಲ್ಲೇ ದಿನಾಲು ಬಂದು ಕಕ್ಕಸು ಮಾಡುತ್ತದೆಯಂತೆ. ಹಾಗಾಗಿ ಬೇಟೆಗಾರರಿಗೆ ಇದನ್ನು ಹುಡಕಲು ಸುಲಭವಾಗುತ್ತದೆ. ಈ ನಾಯಿಗೆ ಸಂಬಂಧಿಸಿದ ಸ್ವಾರಸ್ಯಕರವಾದ ಗಾದೆಯೊಂದು ಇರುಳಿಗರಲ್ಲಿದೆ. "ಕೂರ್ಗ ಯಂಗ್ ಕೆಡ್ತು ಅಂದ್ರೆ ಏತ್ (ಕಕ್ಕಸ್ಸು ಮಾಡಿ) ಕೆಡ್ತು. ಕಾರಣ ಕೇಳಿದರೆ ಇರುಳಿಗರು ತಮ್ಮದೇ ಧಾಟಿಯಲ್ಲಿ ಏನಿಲ್ಲ ಸ್ವಾಮಿ ಈ ಕೂರ್ಗ ಎಲ್ಲಾ, ಎಲ್ಲಾ ತನ್ನೇಲುನ್ ಗಡ್ಡೆ ಮ್ಯಾಲಿಂದಾನೆ ಕೈಲಾಸ ತಲುಪ್‌ಬೋದು ಅನ್ಕೊಂಡು ಒಂದೇ ಕಡೆ ಏಲುಕ್ ಬತ್ತುದೆ. ಆವಾಗ ನಾವು

ಕಾಯ್ಕೊಂಡಿದ್ನು ಒಂದೇ ಏಟೆ ವೊಡ್ಡಾಕ್ ಬುಡ್ತೀವಿ"[೭] ಎಂದು ಹೇಳುತ್ತಾರೆ. ಹೀಗೆ ಚೀರುನಾಯಿ ಒಂದೇ ಕಡೆ ಕಕ್ಕಸು ಮಾಡಿ ತನ್ನ ಜೀವಕ್ಕೆ ತಾನಾಗಿ ಸಂಚಕಾರ ತಂದುಕೊಳ್ಳುತ್ತದೆ.

ಚೀರುನಾಯಿ ಬೇಟೆಗೆ ದಾರದ ಬಲೆಗಿಂತ 'ಕತ್ತರಿಬಲೆ'ಯನ್ನೇ ಹೆಚ್ಚಾಗಿ ಬಳಸುವರು. ಗರಗಸದಂತಿರುವ ಕತ್ತರಿ ಬಲೆಯನ್ನು ಬಿಡಿಸಿ ಅದರ ಸೂತ್ರದ ನಾಲಗೆಗೆ ಮಾಂಸದ ತುಂಡನ್ನು ಕಟ್ಟಿ ನೆಲದ ಮೇಲೆ ಪ್ರಾಣಿಗೆ ತಿಳಿಯದಂತೆ ಅಡಗಿಸಿಡುವರು. ಅದರ ಮೇಲೆ ತರಗೆಲೆಗಳನ್ನು ಹಾಕಿ ಅದರ ಸುತ್ತಾ ಪರಿಮಳಯುಕ್ತ, ಪದಾರ್ಥಗಳನ್ನು ಚೆಲ್ಲುವರು. ಇದರ ವಾಸನೆಯನ್ನು ಹಿಡಿದು ಬಂದ ಚೀರುನಾಯಿ ನೆಲದಲ್ಲಿ ಅಡಗಿಸಿಟ್ಟ ಕತ್ತರಿಯ ಸೂತ್ರದ ನಾಲಿಗೆಯ ಮೇಲೆ ಕಾಲಿಡುವುದು. ಆಗ ಕತ್ತರಿ ಸಿಡಿದು ಅದರ ಕಾಲನ್ನು ಬಿಗಿಯಾಗಿ ಹಿಡಿದುಕೊಳ್ಳುವುದು ಆಗ ಮರೆಯಲ್ಲಿ ಕುಳಿತ ಬೇಟೆಗಾರರು ಬಡಿಗೆಗಳಿಂದ ಬಡಿದು ಕೊಲ್ಲುವರು. ಚೀರುನಾಯಿಯನ್ನು ಹಗಲು ಮತ್ತು ಬೆಳದಿಂಗಳ ರಾತ್ರಿಯಲ್ಲೂ ಸಹ ಬೇಟೆಯಾಡುವರು.

ಹಿಂದೆ ಚೀರುನಾಯಿಯನ್ನು ಎರಡು ಕಾರಣಗಳಿಗಾಗಿ ಬೇಟೆಯಾಡುತ್ತಿದ್ದರಂತೆ. ಒಂದು ಅದರ ಮಾಂಸಕ್ಕಾಗಿ, ಎರಡನೆಯದು, ಅದರ ಚರ್ಮ ಮಾರಿ ಹಣ ಸಂಪಾದಿಸಲು ಇದರ ಚರ್ಮವನ್ನು ಈಜುಡುಗೆಯಾಗಿ ಬಳಸುತ್ತಿರುವುದರಿಂದ ವಿದೇಶಗಳಲ್ಲೂ ಇದಕ್ಕೆ ಬೇಡಿಕೆ ಇದೆಯಂತೆ. ಒಂದು ಪ್ರಾಣಿಯ ಚರ್ಮ ಕನಿಷ್ಟವೆಂದರೂ ಹತ್ತುಸಾವಿರ ರೂಪಾಯಿಯವರೆಗೂ ಬೆಲೆ ಬಾಳುವುದಂತೆ. ಹೀಗೆ ಆಹಾರ ಮತ್ತು ಹಣಕ್ಕಾಗಿ ಬೇಟೆಯಾಡುತ್ತಿದ್ದ ಗೋಸಂಗಿಗಳು ಇತ್ತೀಚೆಗೆ ಈ ಕೆಲಸವನ್ನು ನಿಲ್ಲಿಸಿದ್ದಾರೆ. ಅಡವಿ ಜೀವದಾನಗಳ ಆಹಾರವನ್ನೇ ನೆಚ್ಚಿಕೊಂಡು ಬದುಕುತ್ತಿರುವ ಇಂತಹ ಸಮುದಾಯಗಳಿಗೆ ಸರ್ಕಾರದ ಅರಣ್ಯ ನೀತಿ ಕಡಿವಾಣ ಹಾಕಿದೆ. ಹಾಗಾಗಿ ಇತ್ತೀಚೆಗೆ ಬೇರೆ ಬೇರೆ ಆಹಾರ ವಿಧಾನಗಳಿಗೆ ಒಗ್ಗಿಕೊಳ್ಳುವುದು ಇವರಿಗೆ ಅನಿವಾರ್ಯವಾಗಿದೆ.

**೨.೧. ಸಣ್ಣ ಚೀರು ನಾಯಿ (ಧೋಳ ರುದಡೊ) ಬೇಟೆ :** ಇದು ಸಹ ನಾಯಿ ಜಾತಿಗೆ ಸೇರಿದ ಕಾಡುಪ್ರಾಣಿ. ಇದರ ಹೊಟ್ಟೆಯ ಕೆಳ ಭಾಗ ಬಿಳಿಯ ಬಣ್ಣವನ್ನು ಹೊಂದಿರುವುದರಿಂದ ಇದಕ್ಕೆ 'ಬಿಳಿಚೀರು ನಾಯಿ' ಅಂತಲೂ ಕರೆಯುವರು. ಇವು ಎರಡು ಅಥವಾ ಮೂರು ಜೊತೆಗೂಡಿ ತಿರುಗುತ್ತಿರುತ್ತವೆ. ಗೋಸಂಗಿಗಳು ಚೀರು ನಾಯಿಯನ್ನು ಬೇಟೆಯಾಡುವ ರೀತಿಯಲ್ಲೇ ಇದನ್ನು ಬೇಟೆಯಾಡುವರು. ಇವುಗಳ ಸಂಖ್ಯೆ ತೀರಾ ಕಡಿಮೆಯಿದ್ದು, ಎಲ್ಲೊ ಒಂದೊಂದು ಕಡೆ ಅಪರೂಪವಾಗಿ ಕಾಣಸಿಗುತ್ತವೆಯಂತೆ.

**೩. ಮುಂಗುಲಿ (ಬುಂಗರ್) ಬೇಟೆ :** ಮುಂಗಲಿ ಬೇಟೆಗೂ ಸಹ ತಂತಿಯ ಉರಲನ್ನು ಬಳಸುವರು. ಇದು ಬೆಳದಿಂಗಳ ರಾತ್ರಿ ಸಂದರ್ಭದಲ್ಲಿ ರಾತ್ರಿ ಉರುಲು ಕಟ್ಟಿ ಬೇಟೆಯಾಡುವರು. ಕೆಲವೊಮ್ಮೆ ಹಗಲಿನಲ್ಲಿ ಬೇಟೆಯಾಡುವಾಗ ನಾಯಿಗಳ ಸಹಾಯವೇ ಹೆಚ್ಚು.

ಮುಂಗಲಿ ಬೇಟೆಗೆ ಕನಿಷ್ಟ ಮೂರು ನಾಲ್ಕು ಜನ ಹೋಗುವರು. ೧೦-೨೦ ಅಡಿ ಉದ್ದನೆಯ ತಂತಿಗೆ ನಾಲ್ಕೈದು ಅಂಗುಲಕ್ಕೆ ಒಂದರಂತೆ ಉರುಲನ್ನು ಕಟ್ಟಿ ಸಿದ್ಧಪಡಿಸಿ, ಅವು ಹೆಚ್ಚಾಗಿ ವಾಸಿಸುವ

ರಾಗಿ, ಜೋಳ, ಬತ್ತ, ಕಬ್ಬಿನ ಹೊಲದ ಬದುಗಳಿಗೆ ರಾತ್ರಿ ಸಮಯದಲ್ಲಿ ಕಟ್ಟಿ ಬರುವರು. ಬೆಳಿಗ್ಗೆ ಹೋಗಿ ನೋಡಿದರೆ, ಕನಿಷ್ಟ ಒಂದೆರಡು ಮುಂಗಲಿಗಳು ಬಿದ್ದಿರುತ್ತವೆ. ಅವನ್ನು ಮನೆಗೆ ತಂದು ಸಾರು ಮಾಡಿ ಉಣ್ಣುವರು. ಹಾವಿನ ಜೊತೆ ಜಗಳವಾಡುವ ಇದರ ಕರಳು ವಿಷಪೂರಿತವಾಗಿರುತ್ತದಂತೆ ಹಾಗಾಗಿ ಕೊಯ್ಯುವಾಗ ಅತ್ಯಂತ ಎಚ್ಚರಿಕೆ ವಹಿಸುವರು. ಇದರ ಮಾಂಸ ತುಂಬಾ ರುಚಿಯಾಗಿರುತ್ತದೆಯೆಂದು ಗೋಸಂಗಿಗಳು ಹೇಳುವರು. ಮಾಂಸಹಾರಿಗಳಾದ ಗೋಸಂಗಿಗಳಿಗೆ ದಿನಾಲು ಸ್ವಲ್ಪವಾದರೂ ಅಡವಿ ಜೀವ ದಾನಗಳ ಮಾಂಸ ಬೇಕೇಬೇಕು ಎಂದು ಹೇಳುವರು.

**೪. ಆಮೆ ಬೇಟೆ (ಟುಸಮುರಗಿ) :** ಇದರಲ್ಲಿ ಮುಖ್ಯವಾಗಿ ಎರಡು ವಿಧಗಳಿವೆ. ೧. ನೀರಾಮೆ, ೨.ನೆಲದಾಮೆ. ನೀರಿನಲ್ಲಿ ವಾಸಿಸುವ ಆಮೆಗೆ 'ಟುಸ್‌ಮುರಗಿ' ಎಂದು ನೆಲದಲ್ಲಿ ವಾಸಿಸುವ ಆಮೆಗೆ 'ಸೂರ್ಕಕಚಬ' ಎಂದು ಕರೆಯುವರು. ನೀರಿನಲ್ಲಿ ವಾಸಿಸುವ ಇತರ ಆಮೆಗಳೆಂದರೆ 'ಬಿಳಿ ಆಮೆ' (ಗುಂಡ ಕಾಚಬೋ) ಮತ್ತು 'ದೊಡ್ಡಾಮೆ' (ಕತಾಳಿ ಕಾಚಬೋ) ನೆಲದ ಮೇಲೆ ಹೆಚ್ಚು ವಾಸಿಸುವ ಇತರ ಆಮೆಗಳೆಂದರೆ 'ಕಲ್ಲಾಮೆ' (ಕೌಡೆ ಕಾಚಬೋ) ಮತ್ತು 'ಅಡವಿ ಆಮೆ' (ಸೂರ್ಕ ಕಾಚಬೋ)

**೪.೧. ದೊಡ್ಡಾಮೆ (ಕತಾಳಿ ಕಾಚಬೋ) :** ಇದು ಆಮೆಗಳಲ್ಲಿ ಅತ್ಯಂತ ದೊಡ್ಡದು. ಇದರ ತೂಕ ಸಾಮಾನ್ಯವಾಗಿ ೩೦ರಿಂದ ೫೦ ಕೆ.ಜಿಯವರೆಗೆ ಇರುತ್ತದೆ. ಇವು ದೊಡ್ಡ ದೊಡ್ಡ ಮಡುವುಗಳಲ್ಲಿ ವಾಸಿಸುತ್ತಿದ್ದು, ಕೆಲವೊಮ್ಮೆ ಮಡುಗಳ ಪಕ್ಕ ಕೆಸರಿನಲ್ಲಿ ಮುಚ್ಚಿಕೊಂಡಿರುತ್ತವೆಯಂತೆ ಇದನ್ನು ಹಿಡಿಯಲು 'ಬಲೆ' ಮತ್ತು ಕಬ್ಬಿಣದ ಬರ್ಚಿಯನ್ನು ಬಳಸುವರು.

ನೀರಿನಲ್ಲಿರುವ ದೊಡ್ಡಾಮೆಗಳನ್ನು ಹಿಡಿಯಲು ದೊಡ್ಡ ದೊಡ್ಡ ಬಲೆಗಳನ್ನು ಬಳಸುವರು. ಭಾರವಾಗಿರುವ ಈ ಆಮೆಗಳನ್ನು ಹಿಡಿಯಲು ನೀರಿಗಿಳಿಸುವ ವ್ಯಕ್ತಿ ಈಜಿನಲ್ಲಿ ಪರಿಣಿತಿಯನ್ನು ಹೊಂದಿರಬೇಕು. ಹೀಗೆ ಪರಿಣಿತಯನ್ನು ಹೊಂದಿದ ಇಬ್ಬರು ವ್ಯಕ್ತಿಗಳು ಇಳಿದು ಆಮೆಯ ಹೊಟ್ಟೆಯ ಕೆಳಗಡೆಯಿಂದ ಬಲೆಯನ್ನು ಹಾಕಿ ಮೇಲೆತ್ತುವರು. ಇನ್ನೂ ಕೆಲವೊಮ್ಮೆ ನೀರಿನಲ್ಲಿ ಕೆಸರಿನೊಳಗಡೆ ಊತಿದ್ದರೆ. ಉದ್ದನೆಯ ಬರ್ಚಿಯಿಂದ ಶೋಧಿಸುತ್ತಾ ಬರುವರು. ಹೀಗೆ ಶೋಧಿಸುವಾಗ ಆಮೆಯ ಬೆನ್ನಿಗೆ ಬರ್ಚಿ ಬಿದ್ದು ದೊಪ್ ಎಂಬ ಶಬ್ದ ಬಂದರೆ, ಆಮೆ ಇಲ್ಲೇ ಇದೆಯೆಂದು ಅರಿತು ಒಂದು ಬರ್ಚಿಯನ್ನು ನೇರವಾಗಿ ಇಟ್ಟುಕೊಂಡು ಮತ್ತೊಂದು ಬರ್ಚಿಯಿಂದ ಸುತ್ತಲು ಶೋಧಿಸುವರು. ಹಾಗೆ ಶೋಧಿಸುವಾಗ ಮಧ್ಯೆ ಇರುವ ಬರ್ಚಿ ಬಿಟ್ಟು ಉಳಿದ ಜಾಗದಲ್ಲಿ ಬರ್ಚಿ ಜಾರಿದರೆ ಅದು ಇಲ್ಲೇ ಇದೆ ಎಂದು ಗ್ರಹಿಸಿ, ಮೇಲೆತ್ತಲು ಸಿದ್ಧರಾಗುತ್ತಾರೆ. ಹೀಗೆ ಕೆಸರಿನಲ್ಲಿ ಅಡಗಿರುವ ಆಮೆಯ ಬೆನ್ನಿಗೆ ಉದ್ದನೆಯ ಬರ್ಚಿಯನ್ನು ಇಟ್ಟು, ಕೆಳಗಡೆ ತೂರವವರೆಗೆ ಸುತ್ತಿಗೆಯಿಂದ ಹೊಡೆಯುವರು. ಹೀಗೆ ಹೊಡೆದಾದ ಮೇಲೆ ಮತ್ತೊಂದು ಬರ್ಜಿಯಿಂದ ಅದನ್ನು ಮೇಲೆಬ್ಬಿಸಿ ಬಲೆಯಲ್ಲಿ ಹಿಡಿದು ಮೇಲೆತ್ತುವರು. ಬಲೆ ಇಲ್ಲದಿದ್ದ ಪಕ್ಷದಲ್ಲಿ ಬರ್ಚಿಗಳ ಸಹಾಯದಿಂದಲೆ, ನಾಲ್ಕೈದು ಜನ ಸೇರಿ ಮೇಲೆತ್ತುವರು. ಹೀಗೆ

ವಿವಿಧ ರೀತಿಯ ಆಮೆಗಳನ್ನು ವಿವಿಧ ತಂತ್ರಗಳನ್ನು ಬಳಸಿ ಬೇಟೆಯಾಡುವುದು ಇಂದೂ ಸಹ ಗೋಸಂಗಿಗಳಲ್ಲಿ ಕಾಣಬಹುದಾಗಿದೆ.

**೪.೨. ಕಲ್ಲಾಮೆ (ಕೌಡಿ ಕಾಚಬೊ) ಬೇಟೆ :** ಇದು ನೀರು ಮತ್ತು ನೆಲದ ಮೇಲೆ ವಾಸಿಸುತ್ತದೆ. ನೀರಿನಲ್ಲಿ ಚೆನ್ನಾಗಿ ಆಹಾರ ಸೇವಿಸಿದ ನಂತರ ಬಿಸಿಲು ಕಾಯಿಸಲು ಬಂಡೆಯ ಮೇಲೆ ಬಂದು ಕೂಡುವುದಂತೆ. ಇದರ ಬೆನ್ನು ಮತ್ತು ಕೆಳಬಾಗ ಗಟ್ಟಿ ಚಿಪ್ಪಿನಿಂದ ಕೂಡಿದ್ದರಿಂದ ಕಾಡು ಪ್ರಾಣಿಗಳು ಎಷ್ಟೇ ಕಡಿದರು ಇದಕ್ಕೆ ಏನೂ ಆಗುವುದಿಲ್ಲವಂತೆ. ಬೇಟೆಗಾರರು ಬಲವಾಗಿ ತುಳಿದರೂ ಸಹ ಅದಕ್ಕೆ ಯಾವುದೇ ರೀತಿಯ ಅಪಾಯವಾಗುವುದಿಲ್ಲ, ಹಾಗಾಗಿ ಇದಕ್ಕೆ ಕಲ್ಲಾಮೆ ಎಂದು ಕರೆಯುವರು. ಇದರಲ್ಲಿ ಮಾಂಸ ಸ್ವಲ್ಪವೇ ಇದ್ದರೂ, ಬಹಳ ರುಚಿಯಾಗಿರುತ್ತದೆಯಂತೆ ಮತ್ತು ಇದನ್ನು ಸೇವಿಸುವುದರಿಂದ ಕಣ್ಣಿನ ದೃಷ್ಟಿ ಚೆನ್ನಾಗಿರುತ್ತದೆಂದು ಅನುಭವಸ್ಥ ಗೋಸಂಗಿ ಹಿರಿಯರು ಹೇಳುವರು. ಇದರ ಬೇಟೆಗೆ ನಾಯಿಗಳ ಸಹಾಯ ಅತಿಮುಖ್ಯ. ಅವು ವಾಸನೆಯ ಮೂಲಕ ಕಲ್ಲಾಮೆ ಅವಿತಿರುವ ಸ್ಥಳವನ್ನು ತೋರಿಸಿ ಬೊಗಳುತ್ತವೆ. ಆಗ ಇಂತಹದೇ ಜೀವದಾನ ಅಡಗಿದೆಯೆಂದು ಬೇಟೆಗಾರ ಗ್ರಹಿಸಿ ಹಿಡಿಯಲು ಸನ್ನದ್ಧನಾಗುತ್ತಾನೆ. ಇದನ್ನು ಹಿಡಿಯಲು ಬರ್ಚಿಯಂತಹ ಸಲಕರಣೆಗಳನ್ನು ಬಿಟ್ಟರೆ ವಿಶಿಷ್ಟವಾದ ಪರಿಕರಗಳೇನನ್ನೂ ಬಳಸುತ್ತಿರುವುದು ಕಂಡುಬಂದಿಲ್ಲ.

**೪.೩. ಬಿಳಿಆಮೆ (ಗುಂಡಕಾಚಬೊ) ಬೇಟೆ :** ಜಲಚರ ಪ್ರಾಣಿಯಾದ ಇದು ನೋಡಲು ಬೆಳ್ಳಗಿರುವುದರಿಂದ ಇದಕ್ಕೆ ಬಿಳಿಆಮೆ ಎಂದು ಕರೆಯುವರು. ಕಡಿಮೆ ನೀರಿರುವ ಪ್ರದೇಶದಲ್ಲಿ ವಾಸಿಸುವ ಈ ಆಮೆ ಕೈಗೆ ಸುಲಭವಾಗಿ ಸಿಗುವುದರಿಂದ ಬಲೆಯನ್ನು ಬಳಸುವುದಿಲ್ಲ. ದೊಡ್ಡ ಪ್ರಮಾಣದ ನೀರಿನಲ್ಲಿ ಮಾತ್ರ ಬಲೆಯನ್ನು ಬಳಸಿ ಹಿಡಿಯುವರು. ಹೀಗೆ ಆಯಾ ಸಂದರ್ಭಕ್ಕೆ ತಂತ್ರಗಳನ್ನು ಬಳಸಿ ಪ್ರಾಣಿಗಳನ್ನು ಹಿಡಿಯುವರು. ಇದು ಗೋಸಂಗಿಗಳಿಗೆ ಅನುಭವದಿಂದ ಬಂದ ವಿದ್ಯೆಯಾಗಿದೆ. ಬಿಳಿಆಮೆಯ ಮಾಂಸ ಗೋಸಂಗಿಗಳಿಗೆ ಅತ್ಯಂತ ಪ್ರಿಯವಾದದ್ದು.

**೪.೪. ಅಡವಿಆಮೆ (ಸೂರ್ಯ ಕಚಬ) :** ಸೂರ್ಯನ ಹುಲ್ಲಿನಲ್ಲೇ ಹೆಚ್ಚು ವಾಸಿಸುವುದರಿಂದ ಇದಕ್ಕೆ 'ಸೂರ್ಯ ಕೌಚಬೊ' ಎಂದೂ, ಅಡವಿಯಲ್ಲೇ ಹೆಚ್ಚಾಗಿ ವಾಸಮಾಡುವ ಇದಕ್ಕೆ 'ಅಡವಿಆಮೆ' ಎಂದು ಸಹ ಕರೆಯುವರು. ಇದು ನೀರನ್ನು ಆಶ್ರಯಿಸುವುದಿಲ್ಲ. ಹುಲ್ಲುಗಾವಲು ಹಾಗೂ ಚಿಕ್ಕ ಚಿಕ್ಕ ಪೊದೆಗಳಲ್ಲಿ ಆಶ್ರಯ ಪಡೆಯುವುದು. ಇದರ ಮೇಲ್ಮೈ ಚಿಪ್ಪು ಕೆಂಪು ಮಿಶ್ರಿತ ಬಣ್ಣದಿಂದ ಕೂಡಿದ್ದು ನೋಡಲು ತುಂಬಾ ಸುಂದರವಾಗಿರುತ್ತದೆ. ಹುಲ್ಲು ಸ್ವಲ್ಪ ಒಣಗಿ ಕೆಂಪು ಬಣ್ಣ ತಿರುಗಿದರೆ ಇದನ್ನು ಹುಡಕುವುದು ಬೇಟೆಗಾರರಿಗೆ ತುಂಬಾ ಕಷ್ಟದ ಕೆಲಸ. ಆದರೆ ಇದನ್ನು ಹಿಡಿಯಲು ಬೇಟೆ ನಾಯಿಗಳು ಹೆಚ್ಚು ಸಹಕಾರಿಯಾಗಿರುವುದರಿಂದ ನಾಯಿಗಳಿಂದ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ಎಲ್ಲಾ ಪ್ರಾಣಿಗಳ ವಾಸನೆಯನ್ನು ಚೆನ್ನಾಗಿ ಗ್ರಹಿಸಬಲ್ಲ ಬೇಟೆನಾಯಿಗಳು ಅವುಗಳ ವಾಸನೆಯುನ್ನು ಹಿಡಿದು ಅವು ಇರುವ ಜಾಗವನ್ನು

ಪತ್ತೆಹಚ್ಚುವವು. ಆಮೆಗಳಂತೆ ಚಿಪ್ಪುಳ್ಳ ಪ್ರಾಣಿಗಳನ್ನು ಹಿಡಿಯಲು ನಾಯಿಗಳಿಗೆ ಸಾಧ್ಯವಾಗದಿದ್ದಲ್ಲಿ ಅವು ಇರುವ ಜಾಗವನ್ನು ಒಡೆಯನಿಗೆ ತೋರಿಸುವವು. ಆಗ ನಾಯಿಯ ಸೂಚನೆಯ ಮೇರೆಗೆ, ಒಡೆಯ ಇದರ ಮಾಂಸವು ಬಹಳ ರುಚಿಯಾಗಿರುತ್ತದಂತೆ, ದೃಷ್ಟಿದೋಷ ನಿವಾರಿಸುವ ಶಕ್ತಿ ಇದರ ಮಾಂಸಕ್ಕಿರುವುದರಿಂದ ಶೀಘ್ರವಾಗಿ ಗುಣಮುಖರಾಗುತ್ತಾರಂತೆ ಮೂಲವ್ಯಾದಿ ಇದ್ದವರಿಗೆ ಇದರ ತಲೆಯನ್ನು ಸುಟ್ಟು ತಿನ್ನಿಸಿದರೆ ರೋಗ ನಿವಾರಣೆಯಾಗುವುದೆಂದು ಹೇಳುವರು. ಹಾಗಾಗಿ ಇದರ ಮಾಂಸವನ್ನು ಆಹಾರವಾಗಿ ಸೇವಿಸುವುದು ಇವರಿಗೆ ಅನಿವಾರ್ಯವಾಗಿದ್ದರೂ ಅದರಲ್ಲಿ ರೋಗ ನಿರೋಧಕ ಗುಣಗಳಿರುವುದು ಇನ್ನೂ ಹೆಚ್ಚು ಅನುಕೂಲವಾಗಿದೆ. ಹೀಗೆ ವಿವಿಧ ನಮೂನೆಯ ಆಮೆಗಳನ್ನು ಬೇಟೆಯಾಡಿ ತಮ್ಮ ದಿನನಿತ್ಯದ ಹಸಿವನ್ನು ನೀಗಿಸಿಕೊಳ್ಳುವ ಗೋಸಂಗಿಗಳು ಎಂದೂ ಹಣಕ್ಕಾಗಿ ಮಾರಾಟ ಮಾಡಿದವರಲ್ಲ.

**೫. ಮುಳ್ಳಂದಿ ಬೇಟೆ (ಸ್ಥೀವ್‌ರಿ ಸಿಕಾರ್) :** ಇದನ್ನು ಕಣೆಹಂದಿ, ಏದು,ಎಂದೆಲ್ಲಾ ಕರೆಯುವರು. ಮೈತುಂಬಾ ಮುಳ್ಳುಗಳನ್ನು ಹೊಂದಿರುವ ಈ ಪ್ರಾಣಿ. ಚಿಕ್ಕ ಚಿಕ್ಕ ಗವಿ ಹಾಗೂ ಮಣ್ಣಿನ ಬಿಲಗಳಲ್ಲಿ ವಾಸಿಸುವುದು. ಇವುಗಳನ್ನು ಹಿಡಿಯಲು ತರಬೇತಿ ಹೊಂದಿದ ಬೇಟೆ ನಾಯಿಗಳನ್ನು ಬಳಸುತ್ತಾರೆ.. ಬೇಟೆ ನಾಯಿಗಳು ಇತರ ಪ್ರಾಣಿಗಳಿಗಿಂತ ಮುಳ್ಳಂದಿ ಇರುವ ಸ್ಥಳವನ್ನು ಬಹುಬೇಗ ಗುರುತಿಸುತ್ತವೆಯಂತೆ.[೮] ಅದು ಇರುವ ಸುಳಿವು ಕಂಡೊಡನೆ ಹಿಡಿಯಲು ತುಂಬಾ ಆವೇಷದಿಂದ ಮುನ್ನುಗುತ್ತವೆಯಂತೆ. ಇವು ಆವೇಷಕ್ಕೊಳಗಾಗಿರುವ ಸನ್ನಿವೇಷವನ್ನೂ ನೋಡಿದ ಬೇಟೆಗಾರರು ಇಂಥಹದೇ ಜೀವದಾನ ಇಲ್ಲಡಗಿದೆ ಎಂದು ಗ್ರಹಿಸಿ ಹಿಡಿಯಲು ಸಿದ್ಧರಾಗುವರು. ಮೈತುಂಬಾ ಬಾಣಗಳಂತ ಮುಳ್ಳಿನ ಕಡ್ಡಿಗಳನ್ನು ಹೊಂದಿರುವ ಏದನ್ನು ಹಿಡಿಯಲು ತುಂಬಾ ಚಾಣಾಕ್ಷತನ ಬೇಕು. ಹಾಗೂ ಅಷ್ಟೇ ಎಚ್ಚರಿಕೆಯಿಂದರಬೇಕು. ಏದನ್ನು ಹಿಡಿಯುವಾಗ ಸ್ವಲ್ಪ ಮೈಮರೆತರೆ ಸಾಕು. ಅಪಾಯ ತಪ್ಪಿದ್ದಲ್ಲ ಎಂದು ಹೇಳುವರು. ಅದು ಒಮ್ಮೆ ಮೈ ಕೊಡವಿದರೆ ಸಾಕು ಮುಳ್ಳಿನ ಕಡ್ಡಿಗಳು ಬಾಣದಂತೆ ಶತ್ರುಗಳ ಮೈ ಸೇರಿ ನಂಜಿನಿಂದ ಊದಿಕೊಂಡು ಬಳಲುತ್ತಾನೆ. ಈ ಕಾರಣಕ್ಕಾಗಿ ಇದನ್ನು ಹಿಡಿಯುವಾಗ ವಿವಿಧ ತಂತ್ರಗಳನ್ನು ಬಳಸಿ. ಅದರಿಂದ ಯಾವುದೇ ಅಪಾಯಕ್ಕೆ ಒಳಗಾಗದಂತೆ ಎಚ್ಚರ ವಹಿಸುತ್ತಾರೆ.

ಏದು ಅಡಗಿರುವ ಜಾಗವನ್ನು ಬೇಟೆನಾಯಿಗಳು ತೋರಿಸಿದಾಗ ಅದು ಸುರಕ್ಷಿತವಾದ ಸ್ಥಳ ಹೌದೇ ಅಲ್ಲವೋ ಎಂದು ಮೊದಲು ಖಚಿತ ಪಡಿಸಿಕೊಳ್ಳುವರು. ನೆಲದ ಬಿಲದಲ್ಲಿದ್ದರೆ ಅದರ ಸುತ್ತಲೂ ಇನ್ನೂ ಎಷ್ಟು ಬಿಲಗಳಿದ್ದಾವೆ ಎಂದು ಪರೀಕ್ಷಿಸಿ, ಒಂದೇ ಒಂದು ಬಿಲ ಮಾತ್ರ ಇರುವಂತೆ ಮಾಡಿಕೊಂಡು ಉಳಿದೆಲ್ಲ ಬಿಲಗಳನ್ನು ಮುಚ್ಚಿ ಅಗೆಯಲು ಪ್ರಾರಂಭಿಸುವರು. ಹೀಗೆ ಅಗೆಯಲು ಪ್ರಾರಂಭಿಸಿದಾಗ ಮುಂದೆ ಒಂದು ತೆಳುವಾದ ಬಂಡೆಯನ್ನು ಅಡ್ಡ ಹಿಡಿದುಕೊಂಡೇ ಬಿಲವನ್ನು ಅಗೆಯಲು ಪ್ರಾರಂಭಿಸುವರು. ಇದು ಬಿಲದಲ್ಲಿರುವ ಏದನ್ನು ಹಿಡಿಯಲು ಬಳಸುವ ಕ್ರಮ. ಹೀಗೆ ಬಂಡೆ ಅಡ್ಡ ಇರುವುದರಿಂದ ಹೊರ ಹೋಗಲು ಬಂದ ಏದನ ಮುಳ್ಳು ಬೇಟೆಗಾರನಿಗೆ ತಗಲುವುದಿಲ್ಲ. ಒಂದು ವೇಳೆ ಕಲ್ಲು

ಪೊಟರೆಗಳಲ್ಲಿದ್ದರೆ, ಅದು ತುಂಬಾ ಇಕ್ಕಟ್ಟಾಗಿದ್ದರೆ ನಾಯಿಗಳ ಸಹಾಯದಿಂದಲೇ ಹಿಡಿಯುವರು. ಇನ್ನು ಕೆಲವೊಮ್ಮೆ ನಾಯಿಗಳು ಸಹ ಪ್ರವೇಶ ಮಾಡಲು ಸಾಧ್ಯವಾಗದೇ ಇದ್ದಂತಹ ಪರಿಸ್ಥಿತಿಯಲ್ಲಿ ಹಸಿ ಸೊಪ್ಪು ಅಥವಾ ಒಣ ಹುಲ್ಲನ್ನು ತೆಗೆದುಕೊಂಡು ಬಿಲದ ಹತ್ತಿರ ಬೆಂಕಿ ಹಾಕಿ ಬಿಲದ ತುಂಬಾ ಹೊಗೆ ತುಂಬುವರು. ಆಗ ಅದರೊಳಗಿರುವ ಪ್ರಾಣಿ ಉಸಿರುಗಟ್ಟಿ ಹೊರಬರುತ್ತದೆ. ಅಂತಹ ಸಂದರ್ಭದಲ್ಲಿ, ಬಿಲದ ಹೊರಗೆ ಬಡಗಿಯನ್ನು ಹಿಡಿದು ಅದು ಬರುವುದನ್ನೇ ಕಾದು ಹೊಡೆದು ಕೊಲ್ಲುವರು. ತಲೆಯ ಭಾಗಕ್ಕೆ ಹೊಡೆದರೆ ಮಾತ್ರ ಏದು ಸಾಯುತ್ತದೆ. ಇಲ್ಲವಾದರೆ ಎಷ್ಟೇ ಬಡಿದರೂ ಅದು ಸಾಯುವುದಿಲ್ಲ. ಹಾಗಾಗಿ ತಲೆಯ ಭಾಗಕ್ಕೆ ಹೊಡೆದು ಕೊಲ್ಲುವರು. ಅದರ ತಲೆಯ ಭಾಗ ಮಾತ್ರ ತುಂಬಾ ಮೃದುವಾಗಿರುತ್ತದೆಯಂತೆ.

ಉಳಿದ ಭಾಗವೆಲ್ಲಾ ಮುಳ್ಳುಗಳಿಂದ ಕೂಡಿದ್ದು ಶತ್ರುವಿನ ಸುಳಿವು ಗೊತ್ತಾದ ತಕ್ಷಣ ಮೈ ಕೊಡವಿ ಅಪಾಯದಿಂದ ಪಾರಾಗುತ್ತದೆ. ಹಾಗಾಗಿ ಅದು ಬಿಲದಿಂದ ಹೊರಬರುವಾಗ ತಲೆ ಹೊರಹಾಕುವುದನ್ನೇ ಕಾದು ತಲೆಗೆ ಹೊಡೆದು ಕೊಲ್ಲುವರು. ಹದಿನೆಂಟು ಗಿಡಮೂಲಿಕೆಗಳನ್ನು ತಿಂದಿರುವ ಏದುವಿನ ಮಾಂಸ ತುಂಬಾ ರುಚಿಕಟ್ಟಾಗಿರುತ್ತದೆಯಂತೆ. ಅಷ್ಟೇ ಅಲ್ಲ ಹಲವು ರೋಗಗಳನ್ನು ಗುಣ ಪಡಿಸುವ ಶಕ್ತಿಯನ್ನು ಸಹ ಹೊಂದಿರುವುದಾಗಿ ಹೇಳುತ್ತಾರೆ." ಅಕ್ಕಪಕ್ಕದ ಹಳ್ಳಿಯ ರೈತರು ಏದುವಿನ ಕರುಳನ್ನು ಗೋಸಂಗಿಗಳಿಂದ ಪಡೆದು ಮುಸುರೆಯಲ್ಲಿ ಹಾಕಿ ರಾಸುಗಳಿಗೆ ಕುಡಿಸುವರು. ಹೀಗೆ ಕುಡಿಸುವುದರಿಂದ ರಾಸುಗಳಿಗೆ ಯಾವುದೇ ಕಾಯಿಲೆ ತಟ್ಟುವುದಿಲ್ಲವಂತೆ, ಹೀಗೆ ಒಂದೊಂದು ಪ್ರಾಣಿಯಿಂದ ಒಂದೊಂದು ರುಚಿ, ಒಂದೊಂದು ರೋಗ ನಿರೋಧಕ ಗುಣವನ್ನು ಕಂಡುಕೊಂಡಿರುವುದರಿಂದಲೇ ಗೋಸಂಗಿಗಳು ಇಂದಿಗೂ ಸಹ ಹೃಷ್ಟಪುಷ್ಟರಾಗಿ ಆರೋಗ್ಯದಿಂದಿರಲು ಸಾಧ್ಯವಾಗಿರಬೇಕು.

**. ಪುನಗಿನ ಬೆಕ್ಕು (ಪೋಸಡಿ) ಬೇಟೆ :** ಒಂದು ಬಗೆಯ ಸುಗಂಧವನ್ನು ಸೂಸುವ ಈ ಬೆಕ್ಕಿಗೆ 'ಕಸ್ತೂರಿ ಮೃಗ'ವೆಂತಲೂ ಕರೆಯುವರು. ಇವು ಸಾಮಾನ್ಯವಾಗಿ ಚಿಕ್ಕ ಚಿಕ್ಕ ಗವಿ, ಕಬ್ಬು, ರಾಗಿ ಮತ್ತು ಜೋಳದ ಹೊಲಗಳಲ್ಲಿ ಹೆಚ್ಚಾಗಿ ವಾಸಿಸುತ್ತವೆ. ಇವುಗಳನ್ನು ಬಲೆ ಹಾಗೂ ಬೇಟೆ ನಾಯಿಗಳ ಸಹಾಯದಿಂದ ಹಿಡಿಯುತ್ತಾರೆ.

ಪುನಗಿನ ಬೆಕ್ಕಿನ ಹಿಂದಿನ ಕಾಲುಗಳ ಮಧ್ಯೆ ಗಡ್ಡೆಯಿದ್ದು ಅದು ನಡೆದಾಡುವಾಗ ಕಾಲುಗಳ ಘರ್ಷಣೆಯಿಂದ ಒಂದು ಬಗೆಯ ಸುಗಂಧ ಹೊರ ಸೂಸುತ್ತದೆಯಂತೆ. ಹೀಗೆ ಬಂದಂತಹ ವಾಸನೆಯ ಜಾಡನ್ನು ಹಿಡಿದ ಬೇಟಾಗರರು ಆಯಾಕಟ್ಟಿನ ಸ್ಥಳದಲ್ಲಿ ಬಲೆಯನ್ನು ಒಡ್ಡುವರು. ನಂತರ ಉಸ್‌ಪಕಡ್, ಉಸ್‌ಪಕಡ್ ಎಂದು ಕೂಗುತ್ತಾ ನಾಯಿಗಳನ್ನು ಹುರಿದುಂಬಿಸುವರು. ಆಗ ನಾಯಿಗಳು ಬೆಕ್ಕಿನ ವಾಸನೆಯ ಜಾಡನ್ನು ಹಿಡಿದು ಅವು ಅವಿತಿರುವ ಸ್ಥಳದಿಂದ ಚದುರಿಸಿ ಬಲೆಯತ್ತ ಓಡಿಸಿಕೊಂಡು ಬರುವವು. ಹೀಗೆ ಬಂದ ಬೆಕ್ಕುಗಳು ಒಡ್ಡಿದ ಬಲೆಗೆ ಬೀಳುತ್ತವೆ. ಕೆಲಮೊಮ್ಮೆ ನಾಯಿಗಳೇ ಹಿಡಿದು ಒಡೆಯನಿಗೆ

ಒಪ್ಪಿಸುತ್ತವೆಯಂತೆ. 'ಗೋರಜನ' ಹಾಗೂ 'ಕಸ್ತೂರಿ'ಯನ್ನು ಪರೀಕ್ಷಿಸಲು ಪುನುಗುಬೆಕ್ಕಿನ 'ಗಡ್ಡೆ'[೧೦]ಯಿಂದ ಬಂದ ಎಣ್ಣೆಯನ್ನು ಬಳಸುತ್ತಾರಂತೆ. ಪುನುಗು ಬೆಕ್ಕಿನ ಇನ್ನೊಂದು ವಿಶೇಷತೆಯೇನೆಂದರೆ ತಮಿಳುನಾಡಿಲ್ಲಿ ಕೆಲವು ಕಡೆ ಹೂ ಮಾರುವವರು ಈ ಬೆಕ್ಕುಗಳನ್ನು ಸಾಕುತ್ತಾರಂತೆ. ಕಾರಣ ಇದರ ವಾಸನೆ ಹಿಡಿದು ಬಂದವರು ಹೂವನ್ನು ಕೊಂಡೇಕೊಳ್ಳುವರಂತೆ. ಹೀಗೆ ವಿವಿದೋಪಯೋಗಿಯಾದ ಇಂತಹ ಪ್ರಾಣಿಗಳ ಸಂತತಿ ಇತ್ತೀಚೆಗೆ ಕಡಿಮೆಯಾಗುತ್ತಿದೆ ಎಂದು ವಕ್ತೃಗಳು ನೊಂದುಕೊಂಡು ಹೇಳುವರು. ಪರಿಶುದ್ಧವಾದ ಕಾಡು ಮಾಯವಾಗಿ ಮಾಲಿನ್ಯ ನಾಡಾಗುತ್ತಿರುವ ಇಂದಿನ ಸಂದರ್ಭದಲ್ಲಿ ಇಂತಹ ಪ್ರಾಣಿಗಳು ಉಳಿಯುವುದಾದರೂ ಹೇಗೆ? ಅಭಿವೃದ್ಧಿಯ ಹೆಸರಿನಲ್ಲಿ ವಿದೇಶಿ ಕಂಪನಿಗಳಿಗೆ ಇಲ್ಲಿ ಅವಕಾಶಕೊಟ್ಟು, ಕಾಡನ್ನು ನಾಡಾಗಿಸಿ ಹೊರಟ ಆಡಳಿತ ಪಕ್ಷಗಳೇ ಇದಕ್ಕೆ ಉತ್ತರ ಕೊಡಬೇಕು. ಜೊತೆಗೆ ಜನರೂ ಸಹ ಎಚ್ಚೆತ್ತುಕೊಳ್ಳಬೇಕು.

**೭. ಅಡವಿ ಚೆಕ್ಕಿ (ಬಲಾಡ)ನ ಬೇಟೆ :** ಗೋಸಂಗಿಗಳು ಇದನ್ನು ಬಲ್ನ, ಬಲಾಡ ಎಂದು ಕರೆಯುವರು. ಕರುಚಲು ಕಾಡುಗಳಲ್ಲೆ ಹೆಚ್ಚಾಗಿ ವಾಸಿಸುವ ಇದನ್ನು ಬಲೆ ಮತ್ತು ನಾಯಿಗಳ ಸಹಾಯದಿಂದ ಹಿಡಿಯುವರು. ಚಿಕ್ಕ ಚಿಕ್ಕ ಗವಿ,ಹಾಗೂ ಮರದ ಪೊಟರು ಪೊದೆಗಳಲ್ಲಿ ವಾಸಿಸುವ ಇದನ್ನು ಬೇಟೆಯಾಡುವುದು ಇತರ ಪ್ರಾಣಿಗಳ ಬೇಟೆಯಷ್ಟು ಕಷ್ಟದ್ದಲ್ಲವಂತೆ. ಇವು ವಾಸಿಸುವ ಪೊದೆಗಳಲ್ಲಿ ದೊಡ್ಡನಾಯಿಗಳು ಹೋಗುವುದು ಕಷ್ಟವಾಗುವುದರಿಂದ ಚಿಕ್ಕ ನಾಯಿಗಳ ಸಹಾಯವನ್ನು ಪಡೆಯವರು. ಈ ಮಾದರಿಯ ಚಿಕ್ಕನಾಯಿಗಳನ್ನು ಬಳಸಿ ಮಾಡುವ ಬೇಟೆಗೆ 'ಇಂಗ್ರೇಜಿ ಕುತ್ರ ಶಿಕಾರ್' (ಅಡಸಿಕಾರ್) ಎಂದು ಕರೆಯುವರು. ಈ ನಾಯಿಗಳನ್ನು ಬೆಂಗಳೂರು, ಉರಿಗೆಂ (K.G.F.), ನೀಲಗಿರಿ ಪ್ರದೇಶಗಳಿಂದ ತಂದು ತರಬೇತಿಕೊಡುತ್ತಾರೆ. ಈ ನಾಯಿಗಳು ಮರಗಳನ್ನು ಸುಲಭವಾಗಿ ಏರಿ ಬೇಟಾಯಾಡುವವು. ನಾಯಿಗಳ ಅವಶ್ಯಕತೆ ಇಲ್ಲದಿರುವಾಗ ಬಲೆಗಳನ್ನೇ ಬಳಸಿ ಬೇಟೆಯಾಡುವರು. ಇನ್ನೂ ಕೆಲವೊಮ್ಮೆ, ಅವು ಇರುವ ಬಿಲವನ್ನು ಹುಡುಕಿ ಒಣಕಟ್ಟಿಗೆಗೆ ಬೆಂಕಿಹಚ್ಚಿ, ಮೇಲೆ ಸ್ವಲ್ಪ ಹಸಿ ಸೊಪ್ಪನ್ನು ಹಾಕಿ ಹೊಗೆ ಎಬ್ಬಿಸಿ ಬಿಲದೊಳಗೆ ಹೋಗುವಂತೆ ಮಾಡುವರು. ಹೀಗೆ ಮಾಡುವುದರಿಂದ ಬಿಲದಲ್ಲಿರುವ ಬೆಕ್ಕು ಉಸಿರುಗಟ್ಟಿ ಹೊರಬರುತ್ತದೆ. ಕೆಲಮೊಮ್ಮೆಅಲ್ಲೆ ಸಾಯುವುದೂ ಉಂಟು. ಅಂತಹ ಸಂದರ್ಭದಲ್ಲಿ ಉದ್ದನೆಯ ತಂತಿಗೆ ಕೊಂಡಿಯನ್ನು ಮಾಡಿ ಒಳ ತೂರಿಸಿ ಎಳೆದು ಸುಟ್ಟು ತಿನ್ನುವರಂತೆ, ಇದರ ಮಾಂಸ ಅಷ್ಟೇನು ಗುಣವರ್ಧವಲ್ಲದಿದ್ದರೂ, ಬೇಕೆಂದಾಗ ಸುಲಭವಾಗಿ ಸಿಗುವ ಬೇಟೆಯಾಗಿರುವುದರಿಂದ ಆಹಾರ ಕೊರತೆ ಇರುವ ಸಂದರ್ಭದಲ್ಲಿ ಇದನ್ನು ಬಳಸುತ್ತಾರೆ. ಇದರ ಮಾಂಸದ ರುಚಿ, ಕೋಳಿ ಸಾರಿನ ರುಚಿಯ ಹಾಗೆ ಇರುತ್ತದೆಯೆಂದು ವಕ್ತೃಗಳು ಹೇಳುವರು. ಹಾಗಾಗಿ ಊರಲ್ಲಿನ ಜೀವದಾನಗಳ ಮಾಂಸಕ್ಕಿಂತ ಅಡವಿ ಜೀವದಾನಗಳ ಮಾಂಸವನ್ನೇ ಹೆಚ್ಚಾಗಿ ಇಷ್ಟ ಪಡುವರು.

**೮. ಉಡ (ಚಿಪ್ಪಟ್)ದ ಬೇಟೆ :** ಹಲ್ಲಿ ಜಾತಿಗೆ ಸೇರಿದ ದೊಡ್ಡ ಪ್ರಾಣಿಯಾದ ಉಡವನ್ನು ಗೋಸಂಗಿಗಳು ಚಿಪ್ಪಟ್ ಎಂದು ಕರೆಯುವರು. ಇದು ಸಾಮಾನ್ಯವಾಗಿ ಬಂಡೆಸಂದಿ, ಹುತ್ತ, ಹಾಗೂ ಮರದ

ಪೊಟರೆಗಳಲ್ಲಿ ವಾಸಿಸುತ್ತದೆ. ಇದರಲ್ಲಿ ಎರಡು ವಿಧ. ೧. ದೊಡ್ಡ ಉಡ (ಬಡಿ ಚಿಪ್ಪಟ್) ೨. ಸಾಮಾನ್ಯ (ಉಡ ಜವಾರಿ ಚಿಪ್ಪಟ್), ದೊಡ್ಡ ಉಡದ ಬಣ್ಣ ಕಪ್ಪಗಿದ್ದು ಹತ್ತರಿಂದ ಹದಿನೈದು ಕೆ.ಜಿ. ತೂಕ ಬರುತ್ತದೆ. ಸಾಮಾನ್ಯ ಉಡದ ಬಣ್ಣ ಕೆಂಪಗಿದ್ದು, ಎರಡರಿಂದ ಮೂರು ಕೆ.ಜಿ. ತೂಕವಿರುತ್ತದೆ. ಇವುಗಳ ತೂಕ ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿರುತ್ತವೆಯೆಂದು ಸಹ ಹೇಳುತ್ತಾರೆ. ಪಕ್ಷಿಗಳ ಮೊಟ್ಟೆ, ಗೆದ್ದಲು, ಹುಳ-ಹುಪ್ಪಡಿಗಳನ್ನು ತಿನ್ನುವ ಉಡ ಬಹುಪಯೋಗಿ ಪ್ರಾಣಿ. ಶಬ್ದ ಹಾಗೂ ವಾಸನೆಯನ್ನು ಹಿಡಿದು ಇಂತಹದ್ದೇ ಪ್ರಾಣಿ ಎಂದು ಗ್ರಹಿಸುವ ಶಕ್ತಿ ಹೊಂದಿರುವ ಬೇಟೆ ನಾಯಿಗಳು ಇಂತಹ ಪ್ರಾಣಿಗಳ ಬೇಟೆಗೆ ಹೆಚ್ಚು ಸಹಕಾರಿಯಾಗಿವೆ. ಗೋಸಂಗಿಗಳು ಹೇಳುವಂತೆ ಕಲ್ಲು ಸಂದಿಗಳಲ್ಲಿರುವ ಉಡಗಳನ್ನು ಹಿಡಿಯುವುದು ಕೆಲವೊಮ್ಮೆ ಕಷ್ಟವಾದರೂ, ಹುತ್ತದಲ್ಲಿರುವ ಉಡಗಳನ್ನು ಹಿಡಿಯುವುದು ಅಷ್ಟೇನು ಕಷ್ಟವಲ್ಲವೆನ್ನುತ್ತಾರೆ. ಉಡ ಹುತ್ತದಲ್ಲಿದ್ದರೆ ಮಾತ್ರ ನಾಯಿಗಳ ಬೊಗಳಿ ಕೆದರುತ್ತವೆಯಂತೆ ಹಾಗಾಗಿ ಬೇಟೆಗಾರರು ಅದರ ನಿರ್ದೇಶನದಂತೆ ಹುತ್ತ ಅಗೆಯಲು ಪ್ರಾರಂಭಿಸುವರು. ಹೀಗೆ ಅಗೆಯುವಾಗ ಉಡದ ಬಾಲ ಕಂಡಾಕ್ಷಣ ಬಾಲಕ್ಕೆ ಹಗ್ಗಕಟ್ಟಿ ಗುದದ್ವಾರದ ಮೂಲಕ ಹೊಟ್ಟೆಯಲ್ಲಿ ಹೋಗುವಂತೆ ಉದ್ದನೆಯ ಬೆತ್ತವನ್ನಾಗಲಿ ಅಥವಾ ಉದ್ದನೆಯ ಕಬ್ಬಿಣದ ಸಲಾಕೆಯನ್ನಾಗಲಿ ತೂರಿಸುವರು. ಬೆತ್ತ ಸಲಾಕೆ ಹೊಟ್ಟೆಯೊಳಗೊದಂತೆಲ್ಲಾ ಕಾಲುಗಳಲ್ಲಿ ಶಕ್ತಿ ಕಡಿಮೆಯಾಗಿ ನೆಲವನ್ನು ಬಿಗಿಯಾಗಿ ಹಿಡಿದ ಉಡ ಬಿಟ್ಟು ಬಿಡುವುದು. ಆಗ ಅದನ್ನು ಹಿಡಿದು ಅದರ ಕಾಲುಗಳನ್ನು ಮಡಚಿ ಉಡವಿನ ಬಾಲದಿಂದಲೇ ಕಾಲಿನ ನರಕ್ಕೆ ಸೇರಿಸಿ ಕಟ್ಟುವರು. ನಂತರ ಮನೆಗೆ ತಂದು ಅದರಿಂದ ಸಾರು ಮಾಡಿ ತಿನ್ನುವರು. ಉಡದ ದೇಹದಲ್ಲಿ ಎಣ್ಣೆ ಜಾಸ್ತಿ ಇರುವುದರಿಂದ ಸಾರು ಮಾಡುವಾಗ ಎಣ್ಣೆ ಹಾಕುವ ಅವಶ್ಯಕತೆಯೇ ಇಲ್ಲವಂತೆ. ಉಡವನ್ನು ಹಿಡಿಯಲು ಇನ್ನೊಂದು ವಿಧಾನವನ್ನು ಸಹ ಗೋಸಂಗಿಗಳು ಬಳಸುತ್ತಿರುವುದು ಕಂಡುಬರುತ್ತದೆ. ಅದು ಬಿಲದಲ್ಲಿ ಇರುವುದನ್ನು ಖಚಿತಪಡಿಸಿಕೊಂಡು ಮತ್ತೆಲ್ಲಿಯಾದರೂ ಹೊರ ಹೋಗಲು ಬಿಲಗಳು ಇದ್ದಾವೆಯೇ ಎಂಬುದನ್ನು ಸುತ್ತಲು ಪ್ರದೇಶವನ್ನು ಪರೀಕ್ಷಿಸಿ ಹೆಚ್ಚಿನ ಬಿಲಗಳು ಇದ್ದರೆ ಅವೆಲ್ಲವನ್ನು ಮುಚ್ಚಿ, ಒಬ್ಬೊಬ್ಬ ಒಂದೊಂದು ಬಿಲದ ಹತ್ತಿರ ಕಾಯುತ್ತಾ, ಹಸಿ ಸೊಪ್ಪಿನ ಹೊಗೆಯನ್ನು ಬಿಲದಲ್ಲಿ ಹೋಗುವಂತೆ ಗಾಳಿ ಬೀಸಿ ಬಿಲದ ತುಂಬಾ ಹೊಗೆ ತುಂಬುವರು. ಹೀಗೆ ಮಾಡಿದಾಗ, ಹೊಗೆಯನ್ನು ತಾಳಲಾರದೆ ಉಸಿರು ಕಟ್ಟಿದ ಉಡ ಹೊರಬರಲು ಪ್ರಯತ್ನಿಸುತ್ತದೆ. ಹೀಗೆ ಹೊರಬರುವುದನ್ನು ಕಾಯ್ದಿದ್ದ ಬೇಟೆಗಾರರು ಹಿಡಿಯುತ್ತಾರೆ. ಹೀಗೆ ವಿವಿದ ತಂತ್ರಗಳನ್ನು ಬಳಸಿಕೊಂಡು ಉಡದ ಬೇಟೆಯಾಡುವರು.

ಉಡ ಒಮ್ಮೆ ತನ್ನ ಕಾಲುಗಳಿಂದ ಬಂಡೆಯನ್ನೊ ಅಥವಾ ನೆಲವನ್ನೋ ಹಿಡಿದರೆ ಆರು ಜೊತೆ ಎತ್ತುಗಳನ್ನು ಕಟ್ಟಿ ಎಳೆಸಿದರೂ ಅದರ ಹಿಡಿತ ಬಿಡುವುದಿಲ್ಲವಂತೆ. ಹಾಗಾಗಿ ಹಿಂದೆ ರಾಜ ಮಹರಾಜರು ಉಡವನ್ನು ಜೀವಂತವಾಗಿ ಹಿಡಿದು ಸಾಕುತ್ತಿದ್ದರು. ಕಡಿದಾದ ಹಾಗೂ ಎತ್ತರವಾದ ಕೋಟೆ ಕೊತ್ತಲುಗಳನ್ನು ಏರುವಾಗ ಉಡದ ಬಾಲಕ್ಕೆ ಹಗ್ಗಕಟ್ಟಿ ಕೋಟೆ ಗೋಡೆಗೆ ಏರಿಸಿ, ಅದಕ್ಕೆ ಕಟ್ಟಿದ ಹಗ್ಗದ ಸಹಾಯದಿಂದ ಸೈನಿಕರು ಏರುತ್ತಿದ್ದರೆಂದು ತಿಳಿದು ಬರುತ್ತದೆ. (ಶಿವಾಜಿ ಮಹಾರಾಜರ ಸೇನೆಯಲ್ಲಿ ಒಂದು ಪಡೆಯೇ

ಇದ್ದುದನ್ನು ಗಮನಿಸಬಹುದು) 'ಉಡದ ಪಟ್ಟು ಹಿಡಿದಿದ್ದಾನೆ' ಇವನನ್ನು ಒಪ್ಪಿಸಲು ನಮ್ಮಿಂದ ಸಾಧ್ಯವಿಲ್ಲ ಎಂದು ಹಳ್ಳಿಗರಲ್ಲಿ ಈಗಲೂ ಸಹ ಬಳಕೆಯಲ್ಲಿರುವ ಇಂತಹ ಗಾದೆಗಳು ಉಡದ ಸ್ವಭಾವವನ್ನು ಪ್ರತಿನಿಧಿಸುತ್ತವೆ. ಇವು ಅವರ ಜೀವನಾನುಭವದಿಂದ ರೂಢಿಗೆ ಬಂದವುಗಳಾಗಿರುತ್ತವೆ. ಉಡದ ಮಾಂಸ ಸೇವಿಸುವುದರಿಂದ ಬೆನ್ನುಮೂಳೆಗಳು ಗಟ್ಟಿಯಾಗುತ್ತವೆಯಂತೆ, ಹಾಗೆಯೆ ಅದರಿಂದ ತೆಗೆದ ಎಣ್ಣೆ ಕೀಲು ನೋವುಗಳಿಗೆ ರಾಮಬಾಣ ಹಾಗಾಗಿ, ಇಂದೂ ಸಹ ಬಹುತೇಕ ಎಲ್ಲಾ ಬುಡಕಟ್ಟು ಸಮುದಾಯಗಳು ಇಷ್ಟಪಡುವ ಮಾಂಸ ಇದಾಗಿದೆ.

**೯. ಮೊಸಳೆ (ಮಗರ್) ಬೇಟೆ :** ದೊಡ್ಡ ದೊಡ್ಡ ಮಡುವು ಹಾಗೂ ನದಿಯ ಪಕ್ಕ ದೊಡ್ಡ ಪ್ರಮಾಣದಲ್ಲಿ ನಿಂತ ನೀರಿನಲ್ಲಿರುವ ಮೊಸಳೆಗಳನ್ನು ಗೋಸಂಗಿಗಳು ಅತ್ಯಂತ ಚಾಣಾಕ್ಷತನದಿಂದ ಬೇಟೆಯಾಡುವರು. ಅತ್ಯಂತ ಶಕ್ತಿಶಾಲಿಯಾದ ಮೊಸಳೆಯನ್ನು ಹಿಡಿಯಲು ತುಂಬಾ ಚಾಣಾಕ್ಷತನ ಬೇಕು. ಜೊತೆಗೆ ಬೇಟೆಗಾರನಿಗೆ ಸರಿಯಾಗಿ ಈಜು ಬರುತ್ತಿರಬೇಕು. ಹಾಗಾದಾಗ ಮಾತ್ರ ಇಂತಹ ಬೇಟೆಗಳಲ್ಲಿ ಸ್ವಲ್ಪಮಟ್ಟಿಗೆ ಯಶಸ್ಸನ್ನು ಕಾಣಬಹುದು.

ಮೊಸಳೆ ಬೇಟೆಗೆ ಬಳಸುವ ಮುಖ್ಯ ಪರಿಕರಗಳೆಂದರೆ ಅರ್ಧ ಇಂಚು ದಪ್ಪದ ಎರಡು ಕಬ್ಬಿಣದ ಗಾಳಗಳು, ಒಂದು ಕಪ್ಪೆ ಅಥವಾ ಯಾವುದಾದರೂ ಪ್ರಾಣಿಯ ದೊಡ್ಡದಾದ ಮಾಂಸದ ತುಂಡು, ಹಾಗೂ ಒಂದು ಅಥವಾ ಎರಡಿಂಚು ದಪ್ಪನೆಯ ಉದ್ದವಾದ ಹಗ್ಗ ಇವಿಷ್ಟಿದ್ದರೆ ಮೊಸಳೆ ಬೇಟೆಗೆ ಗೋಸಂಗಿಗಳು ಸಿದ್ಧ. ಮೊಸಳೆ ವಾಸಿಸುವ ಪ್ರದೇಶವನ್ನು ಸರಿಯಾಗಿ ಗಮನಿಸಿ, ಅದು ವಾಸವಾಗಿರುವ ನೀರಿನ ಆಳ ಅಗಲಗಳನ್ನು ನೋಡಿ, ಅಲ್ಲಿ ಬೇಟೆಯಾಡಲು ಯೋಗ್ಯವಾದ ಸ್ಥಳ ಹೌದೋ ಅಲ್ಲವೋ ಎಂಬುದನ್ನು ಖಚಿತಪಡಿಸಿಕೊಂಡು ಬೇಟೆ ಸಲಕರಣೆಗಳೊಂದಿಗೆ ಸಿದ್ಧವಾಗುವರು.

ಮೊಸಳೆ ಬೇಟೆಗೆ ಇವರೇ ತಯಾರಿಸಿದ ಕಬ್ಬಿಣದ ಗಾಳ (ಪರಸ್ಪರ ವಿರುದ್ಧ ದಿಕ್ಕಿನಲ್ಲಿರುವ)ಕ್ಕೆ ಗಟ್ಟಿ ಮುಟ್ಟಾದ ಒಂದು ಹಗ್ಗವನ್ನು ಕಟ್ಟುವರು. ನಂತರ ಒಂದು ಕಪ್ಪೆಯನ್ನು ತೆಗೆದುಕೊಂಡು ಅದರ ಕುತ್ತಿಗೆಗೆ ಗಾಳಿಯಾಡದಂತೆ ದಾರದಿಂದ ಬಿಗಿದು, ಅದರ ಗುದದ್ವಾರಕ್ಕೆ ಒಂದು ಪೈಪ್ ಸಿಕ್ಕಿಸಿ ಊದುವರು. ಆಗ ಕಪ್ಪೆ ಬಲೂನಿನಂತೆ ಊದಿಕೊಳ್ಳುತ್ತದೆಯಂತೆ. ಆಗ ಗಾಳಿ ಹೋಗದಂತೆ ಗುದದ್ವಾರವನ್ನು ಸಹ ದಾರದಿಂದ ಕಟ್ಟಿ ತದನಂತರ ಉದ್ದನೆಯ ಹಗ್ಗಕ್ಕೆ ಕಟ್ಟಿದ ಕಬ್ಬಿಣದ ಗಾಳವನ್ನು ಕಪ್ಪೆಯ ಬೆನ್ನಿಗೆ ಕಟ್ಟಿ ಮೊಸಳೆ ಇರುವ ಸ್ಥಳವನ್ನು ನೋಡಿ ನೀರಿನಲ್ಲಿ ಒಗೆಯುವರು. ಇನ್ನೊಂದು ತುದಿಯನ್ನು ದಡದ ಹತ್ತಿರ ಮರ ಇದ್ದರೆ ಮರಕ್ಕೆ ಅಥವಾ ಒಂದು ಗೂಟ ಹೊಡೆದು ಅದಕ್ಕೆ ಕಟ್ಟುವರು. ನೀರಿನಲ್ಲಿ ಒಗೆದಂತ ಹಗ್ಗ ಎಲ್ಲಿದೆ ಮತ್ತು ಮೊಸಳೆ ಹಿಡಿದಿದೆಯೇ ಇಲ್ಲವೋ ಎಂಬುದನ್ನು ತಿಳಿಯುವ ಸಲುವಾಗಿ ಉದ್ದನೆಯ ಹಗ್ಗದ ಮೂರ್ನಾಲ್ಕು ಸ್ಥಳಗಳಲ್ಲಿ 'ಬೆಂಡ'ನ್ನು ಕಟ್ಟಿರುತ್ತಾರೆ. (ಬೆಂಡು ನೀರಲ್ಲಿ ತೇಲುತ್ತಿರುತ್ತದೆ) ಬೆಂಡು ನೀರಲ್ಲಿ ಮುಳಗಿದ್ದರೆ ಮೊಸಳೆ ಗಾಳಕ್ಕೆ ಸಿಕ್ಕಿದೆ ಎಂದರ್ಥ. ಇಲ್ಲದಿದ್ದರೆ ಮೊಸಳೆ

ನ್ನೂ ಬಿದ್ದಿಲ್ಲವೆಂದರ್ಥ. ಮೊಸಳೆಯ ನಾಲಿಗೆ ಚಿಕ್ಕದಾಗಿರುವುದರಿಂದ ಕಪ್ಪೆಯನ್ನು ಹಿಡಿದು ಬಾಯಲ್ಲಿ ಚ್ಚಿದರೆ ಗಾಳಕ್ಕೆ ಸಿಗುವುದಿಲ್ಲ. ಆದ್ದರಿಂದ ಕಪ್ಪೆಯನ್ನು ಹಿಡಿದು ತಲೆ ಮೇಲೆತ್ತಿದರೆ ಮಾತ್ರ ಗಾಳ ಳಹೋಗಿ ಗಂಟಲಲ್ಲಿ ಸಿಕ್ಕಿಕೊಳ್ಳುವುದು. ಆಗ ಮಾತ್ರ ಬೇಟೆಗಾರರಿಗೆ ಇದನ್ನು ಹಿಡಿಯಲು ಾಧ್ಯವಾಗುವುದು. (ತುಂಬಾ ಎಚ್ಚರವಿರುವ ಕೆಲವು ಮೊಸಳೆಗಳು ಗಾಳವನ್ನು ಅತ್ಯಂತ ಉಪಾಯದಿಂದ ಡಿಸಿಕೊಳ್ಳುತ್ತವೆಯಂತೆ)

ಗಾಳಕ್ಕೆ ಸಿಕ್ಕ ಮೊಸಳೆಯನ್ನು ದಡಕ್ಕೆ ಎಳೆಯುವಾಗ ಮೈಯೆಲ್ಲಾ ಕಣ್ಣಾಗಿರಬೇಕು. ಗಾಳಕ್ಕೆ ಸಿಕ್ಕ ೊಸಳೆಯನ್ನು ಗಲಾಟೆ ಮಾಡದಂತೆ ಹಂತ ಹಂತವಾಗಿ ಮೆಲ್ಲನೆ ದಡಕ್ಕೆ ಎಳೆಯುವರು. ಮೊಸಳೆ ಡಕ್ಕೆ ಸಮೀಪಿಸುತ್ತಿದ್ದಂತೆ ಅದರ ತಲೆಯ ಮೇಲಿನ ಕೆಂಪನೆಯ ಭಾಗಕ್ಕೆ ಉದ್ದನೆಯ ಸುತ್ತಿಗೆಯಿಂದ ೊಡೆದು ಸಾಯಿಸುವರು. ಸುತ್ತಿಗೆಯಿಂದ ಹೊಡೆಯುವಾಗ ಮೊಸಳೆ ಬಾಲ ಹೊಡೆಯದಂತೆ ಚ್ಚರವಹಿಸುವರು. ಆ ಜಾಗವನ್ನು ಬಿಟ್ಟು ಬೇರೆಲ್ಲಿಗೆ ಹೊಡದರೂ ಮೊಸಳೆ ಅಷ್ಟು ಸಾಯುವುದಿಲ್ಲವಂತೆ, ಲವೊಂದು ಸಲ ಮೊಸಳೆಗೆ ಅರೆ ಪೆಟ್ಟು ಕೊಟ್ಟು, ಚಿಕ್ಕ ಪುಟ್ಟ ಗಾಯಗಳನ್ನು ಮಾಡಿಕೊಂಡು ್ರಾಣಾಪಾಯದಿಂದ ಪಾರಾದ ಘಟನೆಗಳನ್ನು ವಕ್ತೃಗಳು ನೆನೆಯುತ್ತಾರೆ.

ಮೊಸಳೆ ಮಾಂಸ ತುಂಬಾ ರುಚಿಯಾಗಿರುತ್ತದೆಯಂತೆ, ಬಾಣಂತಿಯರಿಗೆ ಇದರ ಮಾಂಸವನ್ನು ್ನಿಸಿದರೆ, ಹಾಲು ವೃದ್ಧಿಯಾಗುವುದೆಂದು ಹೇಳುವರು. ಇದರಲ್ಲಿರುವ ಎಣ್ಣೆ ಅಂಶದ ಮಾಂಸವನ್ನು ಟ್ಟು ಶೇಖರಿಸಿಟ್ಟುಕೊಳ್ಳುವರು. ಹೀಗೆ ಶೇಖರಿಸಿಟ್ಟ ಮಾಂಸವನ್ನು, ಸಣ್ಣ ಪುಟ್ಟ ಕಾಯಿಲೆಗಳು ಬಂದಾಗ ದರ ಎಣ್ಣೆಯನ್ನು ಸವರಿ ರೋಗವನ್ನು ನಿವಾರಿಸಿಕೊಳ್ಳುವರು. ವಕ್ತೃಗಳೇ ಹೇಳುವಂತೆ ೧೯೭೨ರಲ್ಲಿ ೊಸಳೆ ಚರ್ಮಕ್ಕೆ ಹೆಚ್ಚು ಬೇಡಿಕೆ ಇದ್ದು, ಆಗ ಒಂದು ಇಂಚು ಚರ್ಮ ೧೯ ರಿಂದ ೨೦ರೂ ವರೆಗೆ ಮಾರಾಟ ಮಾಡುತ್ತಿದ್ದರು. ಈಗ ಅದೇ ಮೊಸಳೆ ಚರ್ಮ, ಒಂದು ಇಂಚಿಗೆ ಅರವತ್ತರಿಂದ ಬತ್ತು ರೂಪಾಯಿಗಳವರೆಗೆ ಮಾರುತ್ತಾರಂತೆ. ಇದರ ಮೇಲಿನ ಚರ್ಮ ಮಾತ್ರ ಉಪಯೋಗಕ್ಕೆ ುವುದಿಲ್ಲವಂತೆ ಹಾಗಾಗಿ ಕೆಳಭಾಗದ ಚರ್ಮವನ್ನು ಮಾತ್ರ ಮಾರಾಟಮಾಡುವರು. ಮೊಸಳೆ ರ್ಮವನ್ನು ಮಾರುವಾಗ ಉದ್ದ ಎಷ್ಟೇ ಇದ್ದರೂ ಲೆಕ್ಕವಿಲ್ಲ. ಅಡ್ಡ ಮಾತ್ರ ಅಳತೆ ಮಾಡಿ ಮಾರುವರು. ಷ್ಟು ಒಂದೊಂದು ಮೊಸಳೆಯ ಎದೆಭಾಗದ ಚರ್ಮದ ಅಳತೆ 'ಹದಿನಾರು' ಇಂಚಿನಿಂದ 'ಮೂವತ್ತು' ಚಿನವರೆಗೂ ಇರುತ್ತದೆಯಂತೆ. ಈ ರೀತಿಯಾಗಿ ಮೊಸಳೆಯನ್ನು ಮಾಂಸಕ್ಕಾಗಿಯಲ್ಲದೆ ಮಾರಾಟಕ್ಕಾಗಿಯೂ ಟೆಯಾಡುತ್ತಿದ್ದರೆಂದು ತಿಳಿದು ಬರುತ್ತದೆ. ಆದರೆ ಇತ್ತೀಚೆಗೆ ಸರ್ಕಾರದಾಜ್ಞೆಯಾನುಸಾರ ಬೇಟೆ ದ್ಧವಾಗಿರುವುದು. ಈ ರೀತಿ ಪ್ರಾಣಿಗಳನ್ನು ಬೇಟೆಯಾಡಿ ಚರ್ಮ ಮಾರಾಟ ಮಾಡುವುದನ್ನು ಸಿದ್ದಾರೆ. ಕೆಲವು ಕಡೆ ಕ್ವಚಿತ್ತಾಗಿ, ಯಾರಿಗೂ ತಿಳಿಯದಂತೆ ಗುಟ್ಟಾಗಿ ಬೇಟೆಯಾಡಿ ಆಹಾರಕ್ಕಾಗಿ ಸುತ್ತಿದ್ದಾರೆ. (ಮೊಸಳೆ ಬೇಟೆ ಹೊಸಪೇಟೆ ತಾಲ್ಲೂಕಿನಲ್ಲಿ (ಬಳ್ಳಾರಿ ಜಿಲ್ಲೆ) ಮಾತ್ರ ಕಂಡುಬರುತ್ತಿದೆ) ೆ ದಿನಾಲು ಒಂದಲ್ಲ ಒಂದು ಪ್ರಾಣಿಗಳನ್ನು ಬೇಟೆಯಾಡಿ ಆಹಾರಕ್ಕಾಗಿ, ಬಳಸುತ್ತಿರುವುದು, ಇಷ್ಟೆಲ್ಲಾ

ಬೇಟೆಯಲ್ಲಿ ಪರಿಣಿತಿ ಹೊಂದಿರುವ ಗೋಸಂಗಿಗಳು ಅಪರೂಪದ ಪ್ರಾಣಿಗಳನ್ನು ಬೇಟೆಯಾಡಬಾರದೆಂಬ ಎಚ್ಚರಿಕೆಯೂ ಸಹ ಅವರಲ್ಲಿದೆ.

**೧೦. ಕಾಡುಹಂದಿ (ಡುಕ್ಕರ್) ಬೇಟೆ :** ಬಹುತೇಕ ಅಲೆಮಾರಿ ಬುಡಕಟ್ಟುಗಳು ಇಷ್ಟಪಡುವ ಪ್ರಾಣಿಯೆಂದರೆ 'ಕಾಡುಹಂದಿ'. ಇದನ್ನು ಕೆಲವು ಪ್ರದೇಶಗಳಲ್ಲಿ 'ಮಿಕ' ಎಂತಲೂ ಕರೆಯುವರು. ಗೋಸಂಗಿಗಳು ಹಿಂದೆ ಮಿಕವನ್ನು ಬೇಟೆಯಾಡುತ್ತಿದ್ದಿಲ್ಲ. ಇತ್ತೀಚೆಗೆ ರೂಢಿಸಿಕೊಂಡಿರುವ ಬೇಟೆ ಇದಾಗಿದೆ. ಹಿಂದೆ 'ಮಿಕ' ಬೇಟೆಯಾಕಾಗಿ ನಿಷೇಧಿಸಿದ್ದರು ಎಂಬುದಕ್ಕೆ ಕಾರಣ ತಿಳಿಯದು. ಕರ್ನಾಟಕದ ಬಹುತೇಕ ಎಲ್ಲಾ ಪ್ರದೇಶಗಳಲ್ಲೂ ಕಂಡುಬರುವ ಮಿಕದ ಮುಖ್ಯ ಆಹಾರ ಶೇಂಗಾ (ನೆಲಗಡ್ಲೆ) ಮತ್ತು ಗಡ್ಡೆ-ಗೆಣಸು.

'ಮಿಕ'ವನ್ನು ಹಿಡಿಯಲು ಬಲಿಷ್ಠವಾದ ಬಲೆ ಹಾಗೂ ಬರ್ಚಿಗಳನ್ನೂ ಬಳಸುವರು. ಕೋವಿ ಬಳಸುವುದು ತೀರಾ ಕಡಿಮೆ ಅತ್ಯಂತ ಬಲಿಷ್ಟವಾದ ಪ್ರಾಣಿಯಾಗಿರುವ ಮಿಕ ಬೇಟೆಗಾರನಿಗೆ ಅಷ್ಟು ಸುಲಭವಾಗಿ ಸಿಗುವ ಪ್ರಾಣಿಯಲ್ಲ. ಇದು ಒಮ್ಮೆ ನುಗ್ಗಿದರೆ ಎದುರಿಗೆ ಏನೇ ಬಂದರೂ, ಛಿದ್ರ ಛಿದ್ರವಾಗಬೇಕು. 'ಮಿಕ ನುಗ್ಗಿದಂಗೆ ನುಗ್ಗತೀಯಲ್ಲ', 'ಒಳ್ಳೆ ಹಂದಿ ನುಗ್ಗಿದಾಗೆ ನುಗ್ಗತೀಯಲ್ಲ' ಎಂಬ ಮಾತುಗಳು ಸಹ ಈ ಪ್ರಾಣಿಯ ಸ್ವಭಾವವನ್ನು ಕುರಿತೇ ರೂಢಿಗೆ ಬಂದಿರಬೇಕು. ಬೇಟೆಯ ಸಂದರ್ಭದಲ್ಲಿ ಮಿಕ ಕೈಗೆ ಸಿಕ್ಕ ಎಷ್ಟೊ ಮಂದಿಗೆ ಸಣ್ಣ ಪುಟ್ಟ ಗಾಯಗಳಾಗಿರುವ ನಿದರ್ಶನಗಳಿವೆ. ಆದರೆ ಇದರ ಬಹುಮುಖ್ಯ ದೌರ್ಬಲ್ಯವೇನೆಂದರೆ ನೇರವಾಗಿ ನುಗ್ಗುವಾಗ ಇದ್ದಕ್ಕಿದ್ದಂತೆ ಕತ್ತನ್ನು ಹೊರಳಸಲು ಬರುವುದಿಲ್ಲ. ಏನಿದ್ದರೂ ನೇರವಾಗಿಯೇ ನುಗ್ಗುವುದು. ಅಂತಹ ಸಂದರ್ಭದಲ್ಲಿ ಬೇಟೆಗಾರ ಅದರ ಬರುವಿಕೆಯನ್ನು ನೋಡಿ ಸ್ವಲ್ಪ ಪಕ್ಕಕ್ಕೆ ಸರಿದರೆ ಸಾಕು. ಸದ್ಯದ ಅಪಾಯದಿಂದ ತಪ್ಪಿಸಿಕೊಳ್ಳಬಹುದು. ಅಪರೂಪಕ್ಕೆ ಕೋವಿ ಬಳಸುವ ಗೋಸಂಗಿಗಳು 'ಮಿಕ'ಗಳು ಗುಂಪಾಗಿ ಆಹಾರ ಹುಡುಕುವಾಗ ನಿಪುಣ ಬೇಟೆಗಾರರು ಕೋವಿಯಿಂದ ಗುರಿ ಒಂದಕ್ಕೆ ಎರಡೆರಡು ಮಿಕಗಳನ್ನು ಬೀಳಿಸಿದ ಉದಾಹರಣೆಗಳಿವೆ. ಮರಿಹಾಕಿದ ಮಿಕವನ್ನು ಬೇಟೆಯಾಡುವುದು ತುಂಬಾ ಕಷ್ಟದ ಕೆಲಸವಂತೆ. ಹಾಗಾಗಿ ಬೇಟೆಯಲ್ಲಿ ತುಂಬಾ ಪರಿಣಿತ ಇರುವ ಮತ್ತು ಅಷ್ಟೇ ಚುರುಕಾಗಿರುವ ವ್ಯಕ್ತಿಗಳನ್ನು ಮಾತ್ರ ಬೇಟೆಗೆ ಕರೆದುಕೊಂಡು ಹೋಗುವರು. ಸಾಮಾನ್ಯವಾಗಿ ಐದರಿಂದ ಹತ್ತು ಜನ 'ಮಿಕ' ಬೇಟೆಗೆ ಹೋಗುವರು. ಈ ಸಂದರ್ಭದಲ್ಲಿ ಬಲಿಷ್ಟವಾದ ಬೇಟೆ ನಾಯಿಗಳ ಪಾತ್ರವೂ ಅಷ್ಟೇ ಮುಖ್ಯವಾಗಿರುತ್ತದೆ. ಹೀಗೆ ಬೇಟೆಯಾಡಿ ತಂದ ಮಿಕ ಮಾಂಸವನ್ನು ಎಲ್ಲರೂ ಹಂಚಿಕೊಂಡು ತಿನ್ನುವರು. ಗೆಡ್ಡೆ-ಗೆಣಸುಗಳು ತಿಂದಿರುವ ಇದರ ಮಾಂಸ ತುಂಬಾ ರುಚಿಕಟ್ಟಾಗಿರುತ್ತದಂತೆ.

**೧೧. ಮೊಲದ ಬೇಟೆ (ಸಸೌ ಶಿಕಾರ್) :** ಮಾಂಸಹಾರಿಗಳಾದ ಗೋಸಂಗಿಗಳು ಅಡವಿ ಜೀವದಾನಗಳನ್ನು ತಿಂದರೆ ಎಂಥೆಂಥಾ ರೋಗಗಳನ್ನು ಗುಣಪಡಿಸಬಹುದೆಂಬುದನ್ನು ಚೆನ್ನಾಗಿ ಅರಿತವರಾಗಿದ್ದಾರೆ. ಮೊಲದ

ಬೇಟೆಗೆ ಹೋದಾಗ ಒಂದೇ ಮೊಲ ಸಿಕ್ಕರೂ ಎಷ್ಟು ಜನ ಹೋಗಿರುತ್ತಾರೋ ಅಷ್ಟು ಜನಕ್ಕೂ ಒಂದೊಂದು ಹಿಡಿಯಷ್ಟಾದರೂ ಮಾಂಸ ಸಿಕ್ಕೇ ಸಿಗುತ್ತದೆಂಬ ನಂಬಿಕೆ ಇವರಲ್ಲಿದೆ. (ಈ ರೀತಿಯ ರೂಢಿಮಾತು ಬಹುತೇಕ ಎಲ್ಲಾ ಬುಡಕಟ್ಟುಗಳಲ್ಲಿ ಕಂಡುಬರುತ್ತದೆ.) ಈ ಹಿನ್ನೆಲೆಯಲ್ಲಿ ನೋಡಿದಾಗ "ಸಸೌ ಬಾರಾಗರ್ ರಸೌ" (ಒಂದು ಮೊಲ ಹನ್ನೆರಡು ಮನೆ ಸಾರು) ಎಂಬ ಗಾದೆ ಹೆಚ್ಚು ಪ್ರಸ್ತುತವೆನಿಸುತ್ತದೆ. ಅಷ್ಟೇ ಅಲ್ಲ 'ಮೊಲದ ಮಾಂಸಕ್ಕೆ ಹನ್ನೆರಡು ನೂರು ರೋಗಗಳನ್ನು (ಸೌಸೌ ಬಾರಾಸೌ ರೋಗ್‌ನೆ ಮಾರೆ) ಗುಣಪಡಿಸುವ' ಶಕ್ತಿ ಅದಕ್ಕಿದೆ. ಎಂಬ ಗಾದೆಗಳು ಅವರಲ್ಲಿ ಪ್ರಚಲಿತವಿದ್ದು, ಅನುಭವದ ಮೂಲಕ ಇಂತಹ ಸತ್ಯಗಳನ್ನು ಅವರು ಕಂಡುಕೊಂಡಿರಬೇಕು. ಮುಂದೆ ಅವು ಗಾದೆಗಳಾಗಿ ರೂಢಿಯಲ್ಲಿ ಬಂದಿರಬೇಕು. ಹೀಗೆ ವಿವಿಧ ಪ್ರಾಣಿಗಳಿಗೆ ಸಂಬಂಧಿಸಿದ ಗಾದೆಗಳು ಗೋಸಂಗಿಗಳಲ್ಲಿ ಇಂದೂ ಸಹ ರೂಢಿಯಲ್ಲಿವೆ. ಬೇಟೆಗೆ ಹೋಗುವಾಗ ಮೊಲ ಹೇಳ್ತದೆಯಂತೆ "ಮೊಲ ಮೊಲ ಎಂದು ಬಂದಿರಲ್ಲೋ ನಿಮ್ಮೆಂಡ್ತಿ ಮೊಲೆನಾಕೆಯ್ಯ"[೫೧] ಎಂಬ ಗಾದೆ ಇರುಳಿಗರಲ್ಲಿ ಪ್ರಚಲಿತವಿರುವುದು ತಿಳಿದು ಬರುತ್ತದೆ. ಇವೆಲ್ಲವೂ ಆಯಾ ಜನಾಂಗದ ಜನರ ಜೀವನಾನುಭವದಿಂದ ಹುಟ್ಟಿಕೊಂಡ ಸತ್ಯ ಸಂಗತಿಗಳಾಗಿವೆ.

ಮೊಲದ ಬೇಟೆಗೆ ಗೋಸಂಗಿಗಳು ಬಳಸುವ ಸಾಧನೆಗಳೆಂದರೆ ದಾರ (ವಯರ್)ದ ಬಲೆ, ಹಾಗೂ ತಂತಿಯ ಉರುಲು, ಗುಂಪಾಗಿ ಬೇಟೆಯಾಡುವಾಗ ಆಯಾಕಟ್ಟಿನ ಸ್ಥಳದಲ್ಲಿ ದಾರದ ಬಲೆಯನ್ನು ಒಡ್ಡಿ ನಾಯಿಗಳ ಸಹಾಯದಿಂದ ಮೊಲಗಳನ್ನು ಹಿಡಿಯುವರು. ಇದು ಹಗಲು ವೇಳೆಯಲ್ಲಿ ಮಾಡುವ ಬೇಟೆ. ಸಾಮಾನ್ಯವಾಗಿ ಜೋಳ, ರಾಗಿ, ಕಬ್ಬಿನ ಗದ್ದೆಗಳು ಹಾಗೂ ಕುರುಚಲು ಹುಲ್ಲುಗಾವಲುಗಳಲ್ಲಿ ಇವುಗಳನ್ನು ಬೇಟೆಯಾಡುವರು.

'ತಂತಿ ಉರುಲಿ'ನ ಸಹಾಯದಿಂದ ಬೇಟೆಯಾಡುವಾಗ ಸಾಮಾನ್ಯವಾಗಿ ಒಬ್ಬರು ಅಥವಾ ಇಬ್ಬರು ಇರುತ್ತಾರೆ. ರಾಗಿ, ಜೋಳ, ಕಬ್ಬಿನ ಗದ್ದೆಗಳ ಹತ್ತಿರ ಮೊಲಗಳು ಸುಳಿದಾಡಿರುವುದನ್ನು ಗಮನಿಸಿ, ಸುಮಾರು ೨೦-೩೦ ಅಡಿ ಉದ್ದನೆಯ ತಂತಿಗೆ ಮೂರ್‍ನಾಲ್ಕು ಅಂಗುಲಕ್ಕೆ ಒಂದರಂತೆ ಬಿಡಿಬಿಡಿಯಾಗಿ ಉರುಲ (ಜೀರುಕಣಿಕೆ)ನ್ನು ತಯಾರಿಸಿ ಕಟ್ಟಿರುತ್ತಾರೆ. ಹೀಗೆ ಸಿದ್ಧಪಡಿಸಿದ ಉರುಲನ್ನೂ ಸಂಜೆ ಹೊತ್ತಿನಲ್ಲಿ ಜನ ಸಂಚಾರ ನಿಂತ ಮೇಲೆ ಹೊಲದ ಬದವು ಅಥವಾ ಅವು ಸಂಚರಿಸುವ ಜಾಗದಲ್ಲಿ ಗೂಟಗಳ (ಕೊಲವೊಮ್ಮೆ ಚಿಕ್ಕ ಚಿಕ್ಕ ಗಿಡಗಳಿಗೂ ಬಲೆಯನ್ನು ಕಟ್ಟುವರು)ನ್ನು ಹೊಡೆದು ಅರ್ಧ ಅಡಿ ಎತ್ತರಕ್ಕೆ ತಂತಿ ಉರುಲನ್ನು ಕಟ್ಟಿ ಬರುತ್ತಾರೆ. ಬೆಳೆ ತಿನ್ನಲು ಅಥವಾ ಓಡಾಡಲು ಬಂದ ಮೊಲಗಳು ರಭಸದಿಂದ ಮುನ್ನುಗ್ಗುವಾಗ ಕತ್ತಲಿನಲ್ಲಿ ಕಾಣದ ಉರುಲಿಗೆ ತಲೆ ತೂರಿಸಿಕೊಂಡು ಸಾಯುವವು. ಹೀಗೆ ಮುಸ್ಸಂಜೆ (ಬೆಳದಿಂಗಳಿನ ಸಮಯ ಮೊಲಗಳ ಬೇಟೆ ಹೆಚ್ಚು ಪ್ರಶಸ್ತ್ಯ ಕಾಲವಂತೆ)ಗೆ ಹಾಕಿ ಬಂದ ಬಲೆಗೆ ಬೆಳಿಗ್ಗೆ ಹೋಗಿ ನೋಡಿದರೆ ಒಂದೆರಡು ಮೊಲಗಳಾದರೂ ಬಿದ್ದಿರುತ್ತವೆ. ನಂತರ ಅವನ್ನು ಮನೆಗೆ ತಂದು ಪಾಲುಮಾಡಿ ಉಣ್ಣುವರು.

ಇತ್ತೀಚೆಗೆ ಮೊಲಗಳನ್ನು ಬ್ಯಾಟರಿ ಮತ್ತು ಕಾಲಿಂಗ್ ಬೆಲ್‌ನಂತಹ ಸಾಧನಗಳನ್ನು ಬಳಸಿ ಬೇಟೆಯಾಡುತ್ತಿರುವುದು ಕಂಡುಬರುತ್ತಿದೆ. ರಾತ್ರಿ ಹಣೆಗೆ ಬ್ಯಾಟರಿಯನ್ನು ಕಟ್ಟಿಕೊಂಡು, ರಾತ್ರಿಯೆಲ್ಲಾ ಹುಡುಕುತ್ತಾ ಹೊರಡುವರು. ಮೊಲಗಳು ಅಡ್ಡ ಬಂದಾಗ ಅದರ ಮುಖಕ್ಕೆ ಬ್ಯಾಟರಿಯನ್ನು ಬಿಟ್ಟರೆ ಅವು ಯಾವ ಕಡೆಗೂ ಚಲಿಸುವುದಿಲ್ಲವಂತೆ ಆಗ ಮೊಲದಂತೆಯೇ ಶಬ್ದ ಮಾಡುವ ಸಾಧನದ ಗುಂಡಿಯನ್ನು ಒತ್ತಿದಾಗ, ಆ ಶಬ್ದಕ್ಕೆ ಮರುಳಾದ ಮೊಲವು ಹತ್ತಿರ ಹತ್ತಿರ ಬರುತ್ತದೆಯಂತೆ. ಆಗ ಬೇಟೆಗಾರನು ಶಬ್ದಮಾಡದಂತೆ ಅದರ ಹತ್ತಿರ ಹೋಗಿ ಬಡಿಗೆಯಿಂದ ಹೊಡೆದು ಸಾಯಿಸುವರಂತೆ. ಹೀಗೆ ಆಧುನಿಕ ಯಂತ್ರಗಳನ್ನು ಬಳಸಿಯೂ ಸಹ ಮೊಲಗಳನ್ನು ಹಿಡಿಯುವುದು ಕಂಡುಬರುತ್ತದೆ. ಇದು ಸ್ವಲ್ಪ ದುಬಾರಿ ಬೇಟೆಯಾದ್ದರಿಂದ ಆರ್ಥಿಕವಾಗಿ ಸಬಲರಿದ್ದ ಗೋಸಂಗಿಗಳು ಮಾತ್ರ ಈ ವಿಧಾನವನ್ನು ಅನುಸರಿಸುತ್ತಿದ್ದರೆ, ಉಳಿದವರು ಹಳೇ ವಿಧಾನವನ್ನು ಅನುಸರಿಸುತ್ತಿದ್ದಾರೆ.

**೧೨. ನವಿಲು (ಮೋರ್) ಬೇಟೆ :** ಗೋಸಂಗಿಗಳಿಗೆ ಪ್ರಿಯವಾದ ಮತ್ತೊಂದು ಬೇಟೆಯೆಂದರೆ 'ನವಿಲು' ಇದನ್ನು ಅವರು 'ಮೋರ್' ಎಂದು ಕರೆಯುವರು. ಮರಾಠಿಯಲ್ಲೂ ಇದಕ್ಕೆ ಮೋರ್ ಎಂಬ ಅರ್ಥವಿದೆ. ಹೊಳೆದಂಡೆಗಳ ಅಕ್ಕಪಕ್ಕ ಹೆಚ್ಚಾಗಿ ವಾಸಿಸುವ ನವಿಲುಗಳನ್ನು ಬೇಟೆಯಾಡುವುದು ಅತ್ಯಂತ ಸುಲಭವೆಂದು ಹೇಳುವರು. ಇದನ್ನು ಹಿಡಿಯಲು ಬಲೆ ಇನ್ನಿತರ ಸಾಮಗ್ರಿಗಳಿಲ್ಲದಿದ್ದರೂ ಪರವಾಗಿಲ್ಲ. ಮೂರ್‍ನಾಲ್ಕು ಜನ ಇದ್ದರೆ ಸುಲಭವಾಗಿ ಸಾಕು ಬೇಟೆಯಾಡಬಹುದಂತೆ.

ನವಿಲು ವಾಸವಾಗಿರುವ ಪ್ರದೇಶವನ್ನು ಶೋಧಿಸಿ ಮೂವತ್ತು ನಲವತ್ತು ಮಾರುದ್ದದ ಅಂತರದಲ್ಲಿ ಆ ಕಡೆಯಿಂದ ಇಬ್ಬರು ಈ ಕಡೆಯಿಂದ ಇಬ್ಬರು ವ್ಯಕ್ತಿಗಳು ನಿಂತು ಹೆಚ್ಚು ಹೊತ್ತು, ಹೆಚ್ಚು ದೂರ ಹಾರಲು ಶಕ್ತವಿಲ್ಲದ ನವಿಲನ್ನು ಕೆಳಗಡೆ ಕೂಡದಂತೆ ಬೆದರಿಸಿ ಮತ್ತೆ ಮತ್ತೆ ಹಾರುವಂತೆ ಮಾಡಿದರೆ ಎದೆಯುಸಿರು ಬಂದು ಬೀಳುತ್ತದೆ. ಆದು ಸುಲಭವಾಗಿ ಬೇಟೆಗಾರನ ಕೈಗೆ ಸಿಗುತ್ತದೆ. ಹೀಗೆ ಸಿಕ್ಕ ನವಿಲನ್ನು ಕೆಲವರು ಸಾಕಿದರೆ ಇನ್ನೂ ಕೆಲವರು ಕೊಯ್ದು ಅಡಿಗೆ ಮಾಡಿ ಉಣ್ಣುವರು.

**೧೩. ಕೌಜ (ತಿತ್ತರ್) ಬೇಟೆ :** ಕೋಳಿ ಜಾತಿಗೆ ಸೇರಿದ ಈ ಪಕ್ಷಿಯನ್ನು 'ಚಿತ್ರಪಕ್ಷಿ' ಎಂದು ಸಹ ಕರೆಯುವರು. ಕೌಜನ್ನು ಬೇಟೆಯಾಡಲು ಬಹುತೇಕ ಎಲ್ಲಾ ಬೇಟೆಗಾರರು ಬಳಸುವಂತಹ ಸಾಧನ-ವಿಧಾನಗಳನ್ನೇ ಗೋಸಂಗಿಗಳು ಬಳಸುವರು.

ಸಣ್ಣ ಸಣ್ಣ ಬಿದಿರಿನ ಕಡ್ಡಿಗಳನ್ನು ಆಯತಾಕಾರವಾಗಿ ಜೋಡಿಸಿ ಅದಕ್ಕೆ ಮಧ್ಯೆ ಮಧ್ಯೆ ಉರುಲನ್ನು ಹೆಣೆಯುವರು. ಇದನ್ನು ಬಿಚ್ಚಿದಾಗ Zig-Zog ಆಕಾರ ಪಡೆಯುತ್ತದೆ. ಮಡಚಿದಾಗ ಪೆಟ್ಟಿಗೆಯಂತಾಗುತ್ತದೆ. ಹಾಗಾಗಿ ಇದನ್ನು ಎಲ್ಲಿಗೆ ಬೇಕಾದರೂ ಸುಲಭವಾಗಿ ಒಯ್ಯಲು ಅನುಕೂಲವಾಗಿರುತ್ತದೆ. ಕೆಲವರು ಇದನ್ನು ಚೀಲದಲ್ಲಿಟ್ಟುಕೊಂಡು ಒಯ್ಯುವುದರಿಂದ ಸೂಟ್‌ಕೇಸ್ ಕಂಡಂತೆ ಕಾಣುವುದು. ಜೊತೆಗೆ ಅರಣ್ಯ ಇಲಾಖೆಯವರನ್ನು ಕಣ್ಣು ತಪ್ಪಿಸಲು ಇದೊಂದು ಸುಲಭ ವಿಧಾನವಾಗಿದೆ. ಈ ರೀತಿಯಾಗಿ ಸಿದ್ಧಪಡಿಸಿದ

ಬಲೆಯನ್ನು ಕೌಜುಗಳು ಇರುವ ಪ್ರದೇಶದಲ್ಲಿ ಒಡ್ಡುವರು. ನಂತರ ಪಳಗಿಸಿದ ಕೌಜನ್ನು ಪಂಜರದಲ್ಲಿಟ್ಟು ಪಂಜರಕ್ಕೆ ಸ್ವಲ್ಪ ಹಸಿರು ಸೊಪ್ಪಿನಿಂದ ಮರೆಮಾಡಿ, ಬೇಟೆಗಾರ ಸೀಟೆ ಹೊಡೆದು ಕೌಜ ಕೂಗುವಂತೆ ಪ್ರೇರೇಪಿಸುವನು. ಈ ಧ್ವನಿಯನ್ನು ಕೇಳಿದ ಇತರೆ ಕೌಜುಗಳು ಓಡಿಬಂದು ಒಡ್ಡಿದ ಬಲೆಯೊಳಗೆ ಬೀಳುತ್ತವೆ. ಕೌಜು ಬಹಳ ಸಿಕ್ಕರೆ ಅವರಿಗೆ ಬೇಕಾದಷ್ಟು ಉಳಿಸಿಕೊಂಡು ಉಳಿದ ಕೌಜುಗಳ ಜೊತೆ ೧೦ರಿಂದ ೩೦ರೂಪಾಯಿಗಳವರೆಗೆ ಮಾರಾಟ ಮಾಡಿ ಹಣ ಸಂಪಾದಿಸುವರು. ತರಬೇತಿ ಪಡೆದ ಕೌಜು ಆರೂಸಾವಿರ ರೂ ಬೆಲೆಬಾಳುವುದಂತೆ. ಹೀಗೆ ಕೌಜುಗಳನ್ನು ಹಿಡಿದು ಅಡಿಗೆ ಮಾಡಿ ಉಣ್ಣುವರು. ಗೋಸಂಗಿಗಳಿಗೆ ಬಹಳ ಪ್ರಿಯವಾದ ಆಹಾರವಿದು.

೧೪. **ಬುರ್ಲಕ್ಕಿ (ಬುರಗುಂಜಿ) ಬೇಟೆ :** ಗುಬ್ಬಿಯಷ್ಟೇ ಗಾತ್ರವನ್ನು ಹೊಂದಿರುವ ಇವು ಬಯಲು ಪ್ರದೇಶದೆಲ್ಲೆಡೆ ಕಂಡುಬರುವವು. ಈ ಹಕ್ಕಿಗಳು ಚಿಕ್ಕ ಚಿಕ್ಕ ಪೊದೆ, ಹುಲ್ಲುಗಾವಲುಗಳಲ್ಲಿ ಗುಂಪು ಗುಂಪಾಗಿ ವಾಸಿಸುತ್ತವೆ. ಇವುಗಳ ಬೇಟೆಗೆ ಬಲೆಗಳನ್ನ ಬಳಸುವರು. ವ್ಯಕ್ತಿ ಅಥವಾ ಪ್ರಾಣಿಗಳು ಹತ್ತಿರಕ್ಕೆ ಹೋಗುವವರೆಗೂ ಸುಮ್ಮನಿದ್ದು ಇದ್ದಕ್ಕಿದ್ದಂತೆ 'ಬುರ್' ಎಂದು ಶಬ್ದಮಾಡಿ ಬೆಚ್ಚಿ ಬೀಳಿಸಿ ಹಾರಿ ಹೋಗುವವು. ಹಾಗಾಗಿಯೇ ಇವಕ್ಕೆ 'ಬುರ್ಲಕ್ಕಿ', 'ಪುರ್ಲಕ್ಕಿ' ಎಂಬ ಪ್ರಾದೇಶಿಕ ಹೆಸರುಗಳು ಬಂದಿರಬಹುದೇನೋ.

೧೫. **ಕಾಡು ಕೋಳಿ (ರಾನ್‌ಕುಕಡೋ) ಬೇಟೆ :** ಊರು ಕೋಳಿಯನ್ನೇ ಹೋಲುವ ಇದು ಅಡವಿಯಲ್ಲೇ ಹೆಚ್ಚಾಗಿ ವಾಸಿಸುವುದು. ಇದು ಊರು ಕೋಳಿಗಿಂತ ಶಕ್ತಿಶಾಲಿ ಹಾಗೂ ಚುರುಕಾಗಿರುತ್ತದೆ. ಇದರ ಬೇಟೆಗೆ 'ಪಾಜಿ'[೨] ಎಂಬ ಬಲೆಯನ್ನು ಬಳಸುತ್ತಾರೆ. ಸಹಾಯಕ್ಕಂತೂ ಯಾವಾಗಲೂ ನಾಯಿಗಳಿರಲೇಬೇಕು. ನಾಯಿಗಳನ್ನೇ ಹೆಚ್ಚಾಗಿ ಬೇಟೆಗೆ ಬಳಸುವ ಗೋಸಂಗಿಗಳನ್ನು ಇತರ ಅಲೆಮಾರಿ ಸಮುದಾಯಗಳಾದ 'ಬುಡ್ಗಜಂಗಾಲಾ', 'ದುರಗಮುರಗಿ'ಯರು ಗೋಸಂಗಿಗಳಿಗೆ 'ಕೈಕ್ ಪಂಥಗಾಳ್ಳು ವಚ್ಚಿರಿ' (ನಾಯಿ ಪಂಥದವರು ಬಂದರು) ಎಂದು ತಮ್ಮಲ್ಲೇ ಮಾತಾಡಿಕೊಳ್ಳುವರಂತೆ.

ಅಡವಿಯಲ್ಲಿ ದೊಡ್ಡ ದೊಡ್ಡ ಪೊದೆಗಳನ್ನು ಶೋಧಿಸಿ ಅವು ಇರುವಿಕೆಯನ್ನು ಖಚಿತಪಡಿಸಿಕೊಂಡು, ಆಯಕಟ್ಟಿನ ಸ್ಥಳದಲ್ಲಿ 'ಪಾಜಿ'ಯನ್ನು ಒಡ್ಡುವರು. ನಂತರ ಮರೆಯಲ್ಲಿ ಕುಳಿತ ಬೇಟೆಗಾರರು, ಕಾಡುಕೋಳಿಗಳು ಕೂಗುವ ಹಾಗೆ ಕೂಗುವರು. ಹೀಗೆ ಕೂಗಿದ ಧ್ವನಿಯ ಜಾಡನ್ನು ಹಿಡಿದು ಕಾಡುಕೋಳಿಗಳು ಬಲೆಯ ಕಡೆ ನುಗ್ಗುವವು. ಅವು ಬರುವ ರಭಸದಲ್ಲಿ ಬಲೆಯನ್ನು ಗಮನಿಸುವುದಿಲ್ಲ. ಹಾಗಾಗಿ ಸುಲಭವಾಗಿ ಬಲೆಯೊಳಗೆ ಸಿಕ್ಕಿಕೊಳ್ಳುವವು. ನಂತರ ಅವನ್ನು ಕುಣಿಕೆಯಿಂದ ಬಿಡಿಸಿ ಸಾರುಮಾಡಿ ಉಣ್ಣುವರು.

೧೬. **ಮರಬೆಕ್ಕಿನ (ಕೊಳಸಾ) ಬೇಟೆ :** ಸಾಮಾನ್ಯವಾಗಿ ಎಲ್ಲಾ ಪ್ರದೇಶಗಳಲ್ಲಿ ಕಂಡುಬರುವ ಈ ಬೆಕ್ಕು ಕಪ್ಪಗೆ, ನಿಂತಕಿವಿ, ಉದ್ದನೆಯ ಬಾಲವನ್ನು ಹೊಂದಿರುತ್ತದೆ. ಕ್ಯಾದಿಗಿಪೆಳೆ (ಪೊದೆ), ಮರದ ಡೊಕರುಗಳಲ್ಲಿ ವಾಸಿಸುವ ಇದನ್ನು ಹಿಡಿಯಲು ಚಿಕ್ಕ ಬೇಟೆನಾಯಿ ಹಾಗೂ ಬಲೆಯ ಸಹಾಯವನ್ನು

ಪಡೆಯುವರು. ಮರದ ಪೊಟರೆಯೊಳಗಿದ್ದ ಬೆಕ್ಕನ್ನು ಹಿಡಿಯಲು ಚಿಕ್ಕ ನಾಯಿಗಳಿಗೆ ಸಾಧ್ಯವಾಗದೇ ಇದ್ದಾಗ ಹಸಿಸೊಪ್ಪಿನ ಬೆಂಕಿಯಿಂದ ಹೊಗೆ ಎಬ್ಬಿಸಿ, ಅಲ್ಲೇ ಉಸಿರುಕಟ್ಟಿ ಸಾಯುವಂತೆ ಮಾಡುವರು. ಕೆಲವೊಮ್ಮೆ ಹೊಗೆಯ ಘಾಟು ತಾಳಲಾರದೆ ಅವು ಹೊರಬರುತ್ತವೆ. ಹೀಗೆ ಹೊರಬಂದಾಗ ಕಾದುಕುಳಿತ ಬೇಟೆಗಾರರು ಬಿದಿರಿನ ಕೋಲು ಇನ್ನಿತರೆ ಆಯುಧಗಳಿಂದ ಬಡಿದು ಕೊಲ್ಲುವರು.

## ಅಡಿಟಿಪ್ಪಣಿಗಳು

೧. ಬಿ.ಆರ್. ಹಿರೇಮಠ, ಶಾಸನಗಳಲ್ಲಿ ಕರ್ನಾಟಕದ ವರ್ತಕರು, ಪುಟ: ೬-೭, ೧೯೮೬

೨. ಅದೇ, ಪುಟ: ೦೭,

೩. ಪುಟ್ಟಪರ್ತಿ ಸಾಯಿಬಾಬು ಮಾಡುವ 'ಪವಾಡ'ಗಳು ಸುಳ್ಳೆಂದು ವಿಜ್ಞಾನ ಸಾಬೀತುಪಡಿಸಿದರೂ ಸಹ ಜನ ಅದನ್ನು ನಂಬುವ ಸ್ಥಿತಿಯಲ್ಲಿಲ್ಲ. ಎಲ್ಲಿಯವರೆಗೂ ಇಂತಹ 'ಪವಾಡ'ಗಳ ಬಗ್ಗೆ ವೈಚಾರಿಕ ಪ್ರಜ್ಞೆ ಮೂಡುವುದಿಲ್ಲವೋ ಅಲ್ಲಿಯವರೆಗೆ ಪವಾಡ ಮಾಡುವವರಿಗೇನು ಕೊರತೆ ಇಲ್ಲ. ಜನರೂ ಸಹ ಹಿಂದೆ ಬೀಳುವುದಿಲ್ಲ.

೪. ಸಾಧುಗಳು ಮೊದಲೇ ಹತ್ತು ಅಕ್ಕಿಕಾಳುಗಳನ್ನು ಹಾಕಿ ಕಟ್ಟಿದ್ದ ಪೊಟ್ಟಣವನ್ನು ಜೋಳಿಗೆಯಲ್ಲಿಟ್ಟುಕೊಂಡು ಕೈಚಳಕದ ಮೂಲಕ ವ್ಯಕ್ತಿಕೊಟ್ಟ ಪೊಟ್ಟಣವನ್ನು ತನ್ನ ಕೈಯಲ್ಲೇ ಮರೆಮಾಡಿಕೊಂಡು ತಾನು ಜೋಳಿಗೆಯಲ್ಲಿಟ್ಟಿದ್ದ ಪೊಟ್ಟಣವನ್ನು ಆತನಿಗೆ ಕೊಡುವನು.

೫. ಬುಡುಗ ಜಂಗಾಲರು ವೇಷ ಹಾಕುವುದರಿಂದ 'ವೇಷಗಾರರು, ಕೊಡಮಾರುವವರು, ಶಾಸ್ತ್ರಗಾರರು'ಎಂದು ಕರೆಯುವುದು ರೂಢಿಯಲ್ಲಿದೆ. ಹೀಗಾಗಿ ಈ ಬಗೆಯ ಅಲೆಮಾರಿ ಸಮುದಾಯಗಳು ಅವಲಂಬಿಸುವ ತತ್‌ಕ್ಷಣದ ವೃತ್ತಿಗಳೇ ಅವುಗಳ ಜಾತಿ ವಾಚಕಗಳಾಗಿಬಿಡುತ್ತವೆ.

೬. ಬುಡ್ಗ ಜಂಗಾಲರಲ್ಲೂ ಸಹ ಈ ರೀತಿಯ ಸಂಘಟನಾ ಮನೋಭಾವವಿರುವುದು ಕಂಡುಬಂದಿದೆ. ಹೊಸಪೇಟೆಯಲ್ಲಿರುವ ಮಾರಪ್ಪ ಎಂಬಾತ ಪ್ಲಾಸ್ಟಿಕ್‌ಕೊಡ ಹಾಗೂ ಅಲ್ಯುಮಿನಿಂಯ ಕೈಗಾರಿಕೆಯನ್ನು ಸ್ಥಾಪಿಸಿದ್ದು. ಅದರಿಂದ ತಯಾರಾದ ವಸ್ತುಗಳನ್ನು ತಮ್ಮ ಸಮುದಾಯದವರಿಂದಲೇ ಮಾರಾಟಮಾಡಿಸಿ, ಬಂದ ಲಾಭವನ್ನು ಸರಿಯಾಗಿ ಹಂಚಿಕೊಳ್ಳುತ್ತಿದ್ದಾನೆ. ಹೀಗೆ ಪ್ರತಿಯೊಂದು ಸಮುದಾಯಗಳು ತಮ್ಮ ತಮ್ಮಲ್ಲೇ ಸಂಘಟನೆಗಳನ್ನು ಮಾಡಿಕೊಂಡು, ದುಡಿದಿದ್ದೇ ಆದರೆ ಅಂತಹ ಸಮುದಾಯಗಳಿಗೆ ಮುಂದೆ ಒಳ್ಳೆಯ ಭವಿಷ್ಯ ಇದ್ದೇ ಇರುತ್ತದೆ.

೭. ಡಾ. ಭೈರೇಗೌಡ, ಇರುಳಿಗರು : ಜಾನಪದ ಅಧ್ಯಯನ, ಪುಟ: ೫೫, ೨೦೦೦

೮. ಮುಳ್ಳಂದಿಯನ್ನ ಬೇಟೆಯಾಡಿದ ಮೇಲೆ ಅದರ ಬಾಲ (ಸ್ಪೇವ್‌ರೋ ಮುರಡೋ)ವನ್ನು ಸುಟ್ಟು ಬೇಟೆನಾಯಿಗಳಿಗೆ ಹಾಕುವರು. ಹಾಗಾಗಿ ಬೇಟೆನಾಯಿಗಳು ಮುಳ್ಳಂದಿ ಎಲ್ಲೆ ಇದ್ದರೂ ಅದರ ವಾಸನೆಯನ್ನು ಹಿಡಿದು ಬೇಟೆಯಾಡುತ್ತವೆ. ಹಿಡಿಯಲು ಸಾಧ್ಯವಾಗದೇ ಇದ್ದಾಗ ಬೇಟೆಗಾರನಿಗೆ ಅವಿರುವ ಜಾಗವನ್ನು ತೋರಿಸುತ್ತವೆಯೆಂದು ವಕ್ತೃಗಳು ಹೇಳುತ್ತಾರೆ.

೯. ಮುಳ್ಳಂದಿ 'ಕೋಚಲ' ಎಂಬ ವಿಷಪೂರಿತ ಗಿಡವನ್ನು ತಿನ್ನುವುದರಿಂದ ಇದರ ಹೊಟ್ಟೆಯೊಳಗಿನ ಕೂಲಿಜ ವಿಷಪೂರಿತವಾಗಿದ್ದು, 'ಬಾಣಂತಿ ಕಾಯಿಲೆ' ಬಂದವರಿಗೆ ಇದರ ಕಲಿಜವನ್ನು ಸುಟ್ಟು ಕಣ್ಣಿಗೆ ಕಾಣಿಸುವುದರಿಂದ ಕಾಯಿಲೆ ಗುಣವಾಗುತ್ತದೆಯಂತೆ. ಹಸಿಮೈಯ ಬಾಣಂತಿಯರು ಇದರ ಮಾಂಸ ತಿಂದರೆ ಎದೆಹಾಲು ವೃದ್ಧಿಯಾಗುತ್ತದೆಯಂತೆ ಇದರ ಕರುಳನ್ನು ಚೆನ್ನಾಗಿ ಒಣಗಿಸಿ ಎದೆಹಾಲಿನಲ್ಲಿ ತೇದು ಮಕ್ಕಳಿಗೆ

ಉಣಿಸಿದರೆ ಯಾವ ಕಾಯಿಲೆಗಳೂ ಬರುವುದಲ್ಲವಂತೆ ಅಷ್ಟೇ ಅಲ್ಲ, ಏದುವಿನ ಬಾಲದಲ್ಲಿರುವ 'ಗಗ್ಗರಿ' (ಗೆಜ್ಜೆ)ಯನ್ನು ಒಣಗಿಸಿ ಮಕ್ಕಳ ಸೊಂಟದ ಉಡುದಾರಕ್ಕೆ ಕಟ್ಟುವುದರಿಂದ ದುಷ್ಟಶಕ್ತಿಗಳು ಹತ್ತಿರ ಸುಳಿಯುವುದಿಲ್ಲವೆಂದು ಅನುಭವಸ್ಥ ವಕ್ತೃಗಳು ಹೇಳುತ್ತಾರೆ.

೧೦. ಪುನುಗು ಬೆಕ್ಕಿನ ಹಿಂದಿನ ಕಾಲುಗಳ ಮಧ್ಯೆ ಇರುವ ವಿಶಿಷ್ಟ ರೀತಿಯ ಗಡ್ಡೆಯಿಂದ ಎಣ್ಣೆಯನ್ನು ತೆಗೆದು ಒಂದು ಕೈಗೆ ಪುನುಗಿನ ಎಣ್ಣೆ ಸವರಿ ಅದರ ಮೇಲೆ 'ಕಸ್ತೂರಿ' ಹಾಗೂ 'ಗೋರಜನ' ಸವರಿದಾಗ ಪುನುಗು ಬೆಕ್ಕಿನ ಎಣ್ಣೆ ವಾಸನೆ ಗೌಣವಾದರೆ, ಗೋರಜನ ಹಾಗೂ ಕಸ್ತೂರಿ ಶುದ್ಧವೆಂದು ತಿಳಿಯುವರು. ಇಲ್ಲದಿದ್ದರೆ ಅದು ನಕಲಿ ಮಾಲೆಂದು ಪರಿಗಣಿಸುವರು. ಹೀಗೆ ಕಸ್ತೂರಿ ಹಾಗೂ ಗೋರಜಗಳ ಪರೀಕ್ಷೆಗೆ ಪುನುಗು ಬೆಕ್ಕಿನ ಎಣ್ಣೆ ಬಳಸುವುದಾಗಿ ತಿಳಿಸುತ್ತಾರೆ. ಇದು ಬುಡಕಟ್ಟು ಸಮುದಾಯಗಳಿಗೊದಗಿದ ವಿಶಿಷ್ಟ ಪರಿಕ್ಷಾಜ್ಞಾನ.

೧೧. ಡಾ. ಭೈರೇಗೌಡ, ಇರುಳಿಗರು : ಜಾನಪದ ಅಧ್ಯಯನ, ಪುಟ: ೫೫ ೨೦೦೦

೧೨. ಕೌಜುಗ, ಕಾಡುಕೋಳಿ ಇತರೆ ಪ್ರಾಣಿಗಳನ್ನ ಹಿಡಿಯಲು ಬಿದಿರು ಕಡ್ಡಿಗಳಿಂದ ಮಾಡದಿ ಬಲೆ. ಮಡಚಲು ಅನುಕೂಲವಾಗಿರುವಂತೆ ಬಿದಿರಿನಂತೆ ಚೌಕಗಳನ್ನು ರಚಿಸಿ ಅದರೊಳಗೆ ಉರುಲನ್ನು ಎಣೆದು ಮಾಡಿರುವ ಬಲೆ. ಇದಕ್ಕೆ 'ಪಾಜಿ' ಎಂದು ಕರೆಯುವರು. ಕಿನ್ನರಿಜೋಗಿಗಳು ಹಾಗೂ ಬುಡ್ಗಜಂಗಾಲರು ಈ ಪಾಜಿಯನ್ನು ತಯಾರಿಸುವಲ್ಲಿ ಪರಿಣಿತರು. ತಯಾರಿಸಿದ ಬಲೆಗಳನ್ನು ಆರುಸಾವಿರದಿಂದ, ಎಂಟು ಸಾವಿರ ರೂಪಾಯಿಗಳಿಗೆ ಮಾರುತ್ತಾರೆ.



# ಭಾಷೆ, ಸಾಹಿತ್ಯ ಮತ್ತು ಕಲೆ

## ಭಾಷೆ

**ಜೆ**.ಎ. ಗ್ರಿಯರ್‌ಸನ್ (೧೮೮೦-೧೯೪೧) ರವರು ಭಾರತದ ಭಾಷೆಗಳ ಬಗ್ಗೆ ನಡೆಸಿದ ಸರ್ವೇಕ್ಷಣೆಯ ಪ್ರಕಾರ ಭಾರತದಲ್ಲಿ ಸುಮಾರು ೧೭೯ಕ್ಕೂ ಹೆಚ್ಚು ಮುಖ್ಯ ಭಾಷೆಗಳು ೫೪೪ಕ್ಕೂ ಹೆಚ್ಚು ಉಪಭಾಷೆಗಳಿವೆ ಎಂದು, ಅದರಲ್ಲಿ ೧೧೬ ಭಾಷೆಗಳು ಚೀನಿ ಟಿಬೆಟೋ ಭಾಷಾವರ್ಗಕ್ಕೆ ಸೇರಿದ್ದು, ಇವು ಭಾರತದ ಉತ್ತರ ಮತ್ತು ಈಶಾನ್ಯ ಗಡಿಯ ಜನರಲ್ಲಿ ಬಳಕೆಯಲ್ಲಿವೆ ಎಂಬುದನ್ನು ತಿಳಿಸುತ್ತಾ, "ಇವುಗಳಲ್ಲಿ ಅನೇಕ ಭಾಷೆಗಳಿಗೆ ಲಿಪಿಯಿಲ್ಲ, ಲಿಪಿಯಿರುವ ಭಾಷೆಗಳಲ್ಲಿ ಹದಿನಾಲ್ಕು ಭಾಷೆಗಳನ್ನು ಸಂವಿಧಾನದ ೮ನೆಯ ಅನುಸೂಚಿಯಲ್ಲಿ ಸೇರಿಸಲಾಗಿದೆ. ಅವುಗಳು ಯಾವುವೆಂದರೆ ಅಸ್ಸಾಮಿ, ಬಂಗಾಳಿ, ಗುಜರಾತಿ, ಹಿಂದಿ, ಕನ್ನಡ, ಕಾಶ್ಮೀರಿ, ಮರಾಠಿ, ಒರಿಯಾ, ಪಂಜಾಬಿ, ಸಂಸ್ಕೃತ, ತಮಿಳು, ತೆಲುಗು, ಮಲೆಯಾಳಂ ಮತ್ತು ಉರ್ದು ಇವುಗಳಲ್ಲಿ ಹಿಂದೀ ಭಾಷೆಯನ್ನು ಭಾರತದ ಆಡಳಿತ ಭಾಷೆಯೆಂದು ಪರಿಗಣಿಸಲಾಗಿದೆ."[೧]

ಹೀಗೆ ಭಾರತೀಯ ಭಾಷೆಗಳ ಚರಿತ್ರೆಯನ್ನು ಅವಲೋಕಿಸಿದಾಗ ಪ್ರತಿಯೊಂದು ಭಾಷೆಗೂ ತನ್ನದೇ ಆದ ಚರಿತ್ರೆ, ವೈವಿಧ್ಯತೆ, ಸಾಮಾಜಿಕ ಸ್ಥಾನಮಾನವಿರುವುದು ಕಂಡುಬರುತ್ತದೆ. ಇವುಗಳಲ್ಲಿ ಎಷ್ಟೋ ಭಾಷೆಗಳು ಮಾತಾಡುವ ಮತ್ತು ಬರಹ ರೂಪಕ್ಕಿಳಿಸುವ ಶಕ್ತಿಯನ್ನು ಪಡೆದಿದ್ದರೆ, ಮತ್ತೆ ಕೆಲವು ಭಾಷೆಗಳು ಬರೀ ಮಾತಾಡುವ ಪರಸ್ಪರ ಅರ್ಥೈಸುವ ಶಕ್ತಿಯನ್ನು ಮಾತ್ರ ಪಡೆದಿವೆ. ಇಂತಹ ಅರ್ಥೈಸುವ ಶಕ್ತಿಯನ್ನು ಪಡೆದಿರುವ ಭಾಷೆಗಳು ಬುಡಕಟ್ಟುಗಳಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಭಾಷೆ ಒಂದು ಸಾಮಾಜಿಕ ಒಪ್ಪಂದವೆಂದರೆ ತಪ್ಪಾಗಲಿಕ್ಕಿಲ್ಲ. ಬುಡಕಟ್ಟು ಭಾಷೆಗಳು ಸಹ ಪರಸ್ಪರ ಒಪ್ಪಂದದಿಂದ ಕೂಡಿರುವಂತಹವು. ಸಮುದಾಯದಲ್ಲಿ ನಡೆಯುವ ಚಟುವಟಿಕೆಗಳು ಪರಸ್ಪರ ಒಬ್ಬರಿಗೊಬ್ಬರಿಗೆ ಅರ್ಥವಾದರೆ ಸಾಕು. ಒಂದು ವೇಳೆ ಒಪ್ಪಂದ ಭಾಷೆಯ ಚರಿತ್ರೆಯನ್ನು ನೋಡಲು ಹೋದರೆ ಅದಕ್ಕೆ ಖಚಿತವಾದ ಆಧಾರಗಳಾವವು ಲಭ್ಯವಿರುವುದಿಲ್ಲ. ಯಾವುದೇ ಒಂದು ಸಮುದಾಯ ತನ್ನ ಸಾಮಾಜಿಕ ವ್ಯವಹಾರಕ್ಕಾಗಿ ಭಾಷೆಯನ್ನು ಮಾಧ್ಯಮವನ್ನಾಗಿ ಬಳಸಿಕೊಳ್ಳುತ್ತದೆ. ಇಂದು ಭಾಷೆ ಎಷ್ಟೊಂದು ಪ್ರಭಾವಶಾಲಿಯಾಗಿದೆಯೆಂದರೆ

ಭಾಷೆಯ ಸಂಪರ್ಕವಿಲ್ಲದೆ ಬದುಕುವುದು ಕಷ್ಟಸಾಧ್ಯ ಎಂಬ ಹಂತಕ್ಕೆ ಬಂದು ತಲುಪಿದೆ ಅಂದರೆ ವ್ಯಕ್ತಿ ಮತ್ತು ಸಮಾಜದ ಯಾವುದೇ ಕಾರ್ಯಚಟುವಟಿಕೆಯನ್ನು ಸ್ಪಷ್ಟವಾಗಿ ಸಂಪೂರ್ಣವಾಗಿ ತಿಳಿದುಕೊಳ್ಳಬೇಕಾದರೆ ಅದು ಭಾಷೆಯಿಂದ ಮಾತ್ರ ಸಾಧ್ಯ ಎಂಬ ನಿರ್ಧಾರಕ್ಕೆ ಬಂದಿದ್ದೇವೆ.

"ಸಮಾಜಶಾಸ್ತ್ರದ ದೃಷ್ಟಿಯಲ್ಲಿ ಭಾಷೆ ಸಾಮಾಜಿಕ ವ್ಯವಹಾರಕ್ಕೆ ಕೇವಲ ಒಂದು ಸಾಧನ. ಈ ದೃಷ್ಟಿಯಿಂದ ಒಂದೇ ಭಾಷೆಗೆ ಒಂದು ವಿಶೇಷ ಸ್ಥಾನಮಾನ ಕೊಡುವುದು, ಒಂದೇ ಭಾಷೆಯನ್ನು ಅಭಿಮಾನದಿಂದ ನೋಡುತ್ತಾ ಇತರೆ ಭಾಷೆಗಳನ್ನು ಖಂಡಿಸುವುದು ಸರಿಯಲ್ಲ. ಸಂಘ ಜೀವನದಲ್ಲಿ ವ್ಯವಹಾರ ಸುಗಮವಾಗಬೇಕಾದರೆ, ಮಾನವರ ಬೇರೆ ಬೇರೆ ಗುಂಪುಗಳಲ್ಲಿ, ಬೇರೆ ಬೇರೆ ಮತೀಯರಲ್ಲಿ, ಬೇರೆ ಬೇರೆ ರಾಷ್ಟ್ರೀಯರಲ್ಲಿ, ಬೇರೆ ಬೇರೆ ಸಾಂಸ್ಕೃತಿಕ ವರ್ಗಗಳಲ್ಲಿ ಪರಸ್ಪರ ಸಂಬಂಧಗಳು ಬೆಳೆಯಬೇಕಾದರೆ ಭಾಷೆಯೇ ಮುಖ್ಯ ಸಾಧನ. ಒಂದು ದೇಶದ ಅಥವಾ ಪ್ರಾಂತ್ಯದ ಜನ ಎಷ್ಟು ಭಾಷೆಗಳನ್ನು ಕಲಿಯಬೇಕೆಂಬುದನ್ನು ಈ ದೃಷ್ಟಿಯಿಂದ ಪರಿಶೀಲಿಸಬೇಕಾಗುತ್ತದೆ."[೨] ಭಾರತವು ವಿವಿಧ ಭಾಷಾ ವರ್ಗದವರಿಂದ ಕೂಡಿದ್ದು ಭಾಷಾವಾರು ಪ್ರಾಂತ್ಯಗಳನ್ನು ಸಹ ಹೊಂದಿದೆ. ಆಡಳಿತದ ದೃಷ್ಟಿಯಿಂದ ಈ ಎಲ್ಲಾ ಭಾಷಾವಾರು ಪ್ರಾಂತ್ಯಗಳು ಬೇರೆ ಬೇರೆಯಾಗಿ ಕಂಡುಬರುತ್ತಿದ್ದರು, ಸಾಮಾಜಿಕ ಸಂಬಂಧದಲ್ಲಿ ಪರಸ್ಪರ ಒಬ್ಬರಿಗೊಬ್ಬರು ಹತ್ತಿರವಾಗಿದ್ದಾರೆ. ಭಾರತದಲ್ಲಿ ವಾಸಿಸುವ ಯಾವುದೇ ಭಾಷೆಯ ವ್ಯಕ್ತಿ ಮತ್ತೊಂದು ಭಾಷಾ ಪ್ರಾಂತ್ಯಕ್ಕೆ ಹೋಗಿ ಜೀವಿಸಬಹುದಾದ ಹಕ್ಕನ್ನು ಪಡೆದಿರುತ್ತಾನೆ. ಇಂತಹ ಸಂದರ್ಭದಲ್ಲಿ ವಿವಿಧ ಭಾಷೆಗಳ ಪರಿಚಯವು ಅವಶ್ಯಕವಾಗಿ ಬೇಕಾಗುತ್ತದೆ. ಅಷ್ಟೆ ಅಲ್ಲ ಗಡಿನಾಡ ಪ್ರದೇಶದಲ್ಲಿನ ಜನರಿಗೆ ಅನಿವಾರ್ಯವಾಗಿ ಎರಡು ಮೂರು ಪ್ರದೇಶಗಳ ಭಾಷೆಯನ್ನು ಕಲಿಯದೇ ವಿಧಿಯಿಲ್ಲ. ಉದಾಹರಣೆಗೆ ಬೆಳಗಾವಿಯ ಕನ್ನಡಿಗರಿಗೆ ಮರಾಠಿ ಬರಲೇಬೇಕು, ಕೋಲಾರ, ಬಳ್ಳಾರಿ ಜನಗಳಿಗೆ ತೆಲುಗು ಕಲಿಯದೇ ವಿಧಿಯಿಲ್ಲ. ಹೀಗೆ ಕೆಲವೊಮ್ಮೆ ಗಡಿಭಾಗದಲ್ಲಿನ ಜನರಿಗೆ ನೆರೆಯ ನಾಡುಗಳ ಭಾಷೆಯನ್ನು ಕಲಿಯುವುದು ಅನಿವಾರ್ಯವಾಗುತ್ತದೆ. ಕೆಲವೊಮ್ಮೆ ಆಡಳಿತದ ಪ್ರಭಾವದಿಂದಲೂ ಸಹ ಭಾಷೆ ಕಲಿಕೆ ಅನಿವಾರ್ಯವಾಗುತ್ತದೆ. ಉದಾಹರಣೆಗೆ ಗುಲ್ಬರ್ಗಾ ಭಾಗದಲ್ಲಿ ನಿಜಾಮರ ಆಳ್ವಿಕೆಯಿಂದ ಉರ್ದು ಭಾಷೆ ಕಲಿಕೆಯ ಒತ್ತಡ, ಭಾರತಕ್ಕೆ ಬ್ರಿಟಿಷ್‌ರ ಆಡಳಿತದ ಪ್ರಭಾವದಿಂದ ಇಂಗ್ಲಿಷ್ ಕಲಿಕೆಯ ಒತ್ತಡ ಹೀಗೆ ಭಾಷೆ ಸಾಮಾಜಿಕವಾಗಿ, ಆಡಳಿತಾತ್ಮಕವಾಗಿ ವಿವಿಧ ರೀತಿಯಲ್ಲಿ ಪ್ರಭಾವ ಬೀರಿರುವುದನ್ನು ನಾವು ಕಾಣಬಹುದಾಗಿದೆ. ಅದರಲ್ಲೂ ಅಲೆಮಾರಿ ಸಮುದಾಯಗಳಿಗೆ ಭಿನ್ನ ಭಾಷೆಗಳ ಕಲಿಕೆ ಅನಿವಾರ್ಯವಾಗಿದೆ. ಯಾವುದೇ ಒಂದು ಅಲೆಮಾರಿ ಸಮುದಾಯ ಬೇರೆ ಬೇರೆ ಪ್ರದೇಶದ ಭಾಷೆಗಳನ್ನು ಕೇವಲ ಸಾಮಾಜಿಕ ವ್ಯವಹಾರಕ್ಕೆ ಮಾತ್ರ ಬಳಸಿಕೊಂಡು ಇವೆಲ್ಲಕ್ಕೂ ಭಿನ್ನವಾದ ಭಾಷೆಯೊಂದನ್ನು ತಮ್ಮಲ್ಲೇ ರೂಪಿಸಿಕೊಳ್ಳುತ್ತದೆ. ಈ ಭಿನ್ನ ಭಾಷೆ ಆ ಸಮುದಾಯದವರಿಗೆ ಮಾತ್ರ ಅರ್ಥವಾಗುವಂತಹದ್ದು. ಇಂತಹ ಭಾಷೆಗಳಿಗೆ ಲಿಪಿ ಎಂಬುದು ಇರುವುದಿಲ್ಲ. ವ್ಯವಹಾರಕ್ಕೆ ಮಾತ್ರ ಸೀಮಿತವಾದ ಭಾಷೆ ಇದಾಗಿರುತ್ತದೆ. ಈ ಭಾಷೆ ಸಮುದಾಯದವರಿಗೆ ಬಿಟ್ಟರೆ ಬೇರೆಯವರಿಗೆ

ಅರ್ಥವಾಗುವುದಿಲ್ಲ. ಇದು ಈ ಭಾಷೆಯ ವಿಶೇಷವು ಹೌದು.

### ಗೋಸಂಗಿಗಳ ಭಾಷೆ

ಮಹಾರಾಷ್ಟ್ರದ ಮೂಲದವರಾದ ಗೋಸಂಗಿಗಳು ತಮ್ಮ ಜೀವನ ನಿರ್ವಹಣೆಗಾಗಿ ಸ್ಥಳದಿಂದ ಸ್ಥಳಕ್ಕೆ ವಲಸೆ ಮಾಡುತ್ತಾ ಸುಮಾರು ೭೦-೮೦ ವರ್ಷಗಳಿಗೂ ಹಿಂದೆ ಕರ್ನಾಟಕದ ಕೆಲವು ಪ್ರದೇಶಗಳಲ್ಲಿ ಸಂಚರಿಸುತ್ತಿದ್ದಾರೆ. ಹಿಂದೆ ಅಲೆಮಾರಿಗಳಾಗಿದ್ದ ಗೋಸಂಗಿಗಳು. ಇಂದು ಕೆಲವು ಪ್ರದೇಶಗಳಲ್ಲಿ ತಾತ್ಕಾಲಿಕವಾಗಿ ನೆಲೆಯೂರಿ ಅರೆ ಅಲೆಮಾರಿ ಜೀವನ ಸಾಗಿಸುತ್ತಿದ್ದಾರೆ. ಮಹಾರಾಷ್ಟ್ರದಿಂದ ಕರ್ನಾಟಕಕ್ಕೆ ಬರುವುದಕ್ಕಿಂತ ಮುಂಚೆ ತಮಿಳುನಾಡು, ಆಂಧ್ರ, ಕೇರಳ, ಇನ್ನಿತರೆ ರಾಜ್ಯಗಳನ್ನು ಸುತ್ತಿ ಇಲ್ಲಿ ಬಂದಿದ್ದೇವೆಂದು ವಕ್ತೃಗಳು ತಿಳಿಸುತ್ತಾರೆ. ಹಾಗಾಗಿ ಗೋಸಂಗಿಗಳಿಗೆ ಮರಾಠಿ, ಕನ್ನಡ, ತೆಲುಗು, ತಮಿಳು, ಉರ್ದು ಇನ್ನತರೆ ಆಡುಭಾಷೆಗಳ ವ್ಯವಹಾರಿಕ ಜ್ಞಾನ ಇವರಿಗಿದೆ. ಈಗಲೂ ಸಹ ಮಹಾರಾಷ್ಟ್ರದಲ್ಲಿ ತಮ್ಮ ವೈವಾಹಿಕ ಸಂಬಂಧಗಳನ್ನು ಬೆಳೆಸುತ್ತಿದ್ದಾರೆ. ಜೊತೆಗೆ ಇಲ್ಲಿ ಕೆಲವು ಸಮಸ್ಯೆಗಳನ್ನು ಮಹಾರಾಷ್ಟ್ರದಲ್ಲಿನ ತಮ್ಮ ಸಮುದಾಯದ ಮುಖ್ಯಸ್ಥ 'ಬಾರಾಪಾಟಿ' ಚೌಹಾಣ್ ಹತ್ತಿರ ಬಗೆಹರಿಸಿಕೊಳ್ಳುತ್ತಾರೆ. ಮರಾಠಿಯನ್ನು ಚೆನ್ನಾಗಿ ಮಾತನಾಡಬಲ್ಲವರಾದ ಗೋಸಂಗಿಗಳು ತಮ್ಮಲ್ಲೇ ವಿಶೇಷವಾದ ಭಾಷೆಯೊಂದನ್ನು ರೂಪಿಸಿಕೊಂಡಿದ್ದಾರೆ. ಇದಕ್ಕೆ ಅವರು 'ಮುರುಗಾ ಭಾಷೆ' ಎಂದು ಕರೆಯುತ್ತಾರೆ. ಅಲೆಮಾರಿಗಳಾದ ದಕ್ಕಲರು, ಹಕ್ಕಿಪಿಕ್ಕಿ, ಸಿಂಧ್ ಮಾದಿಗರು, ಲಂಬಾಣಿ, ಇನ್ನಿತರೆ ಸಮುದಾಯಗಳಲ್ಲೂ ಸಹ ಈ ಮುರುಗ ಭಾಷೆಯನ್ನು ಕಾಣಬಹುದಾಗಿದೆ. ಇದಕ್ಕೆ ಗೋಸಂಗಿಗಳು ಹೊರತಲ್ಲ. ವಿವಿಧ ಭಾಷೆಗಳ ಪದಗಳೆಲ್ಲ ಸೇರಿಕೊಂಡು ಮತ್ತೊಂದು ಭಾಷೆ ರೂಪಗೊಂಡಿರುತ್ತದೆ. ಇದಕ್ಕೆ ಮುರುಗಾ ಭಾಷೆ, ಮರೆವು ಭಾಷೆ, ರಹಸ್ಯ ಭಾಷೆ, ಗುಪ್ತ ಭಾಷೆ ಎಂದೂ ಸಹ ಕರೆಯುತ್ತಾರೆ. ಆಯಾ ಸಮುದಾಯದಲ್ಲಿನ ಕೆಲವೊಂದು ಸೂಕ್ಷ್ಮ ವಿಚಾರಗಳನ್ನು ತಮ್ಮಲ್ಲೇ ಮಾತಾಡಿಕೊಳ್ಳಲು ಈ ರೀತಿಯ ಮುರುಗಾ ಭಾಷೆಯನ್ನು ಬಳಸಿಕೊಳ್ಳುತ್ತಾರೆ. ಬೇರೆ ಬೇರೆ ಭಾಷೆಯ ಜನರ ನಡುವೆ ಮಾತಾಡುವಾಗ ಈ ಮುರುಗಾಭಾಷೆ ಹೆಚ್ಚಿನ ಸಹಕಾರಿಯಾಗಿದೆ. ಇದು ನಾಗರಿಕ ಸಂಪರ್ಕದಿಂದ ದೂರ ಇರಬಯಸುವ ಬಹುತೇಕ ಎಲ್ಲಾ ಸಮುದಾಯಗಳಲ್ಲೂ ಕಂಡುಬರುವಂತದ್ದು. ಅಷ್ಟೇ ಅಲ್ಲ ಬೇರೆಯವರಿಂದ ಅಪಾಯಕ್ಕೊಳಗಾಗುವ ಸಂದರ್ಭದಲ್ಲಿ ಈ ಭಾಷೆಯನ್ನಾಡುವುದರ ಮೂಲಕ ಜಾಗೃತರಾಗುತ್ತಾರೆ. ಕರ್ನಾಟಕದಲ್ಲಿ ವಾಸಿಸುವ ಗೋಸಂಗಿಗಳು ಕನ್ನಡವನ್ನು ಅರ್ಥವಾಗುವಂತೆ ಮಾತನಾಡಬಲ್ಲವರಾಗಿದ್ದು, ವ್ಯವಹಾರದ ಭಾಷೆಯಾಗಿ ಕನ್ನಡವನ್ನೇ ಮಾತಾಡುತ್ತಾರೆ. ಅಲೆಮಾರಿತನದ ಸಂದರ್ಭದಲ್ಲಿ ಆಯಾ ಪ್ರದೇಶದ ಭಾಷೆಯನ್ನೇ ವ್ಯವಹಾರಿಕ ಭಾಷೆಯನ್ನಾಗಿ ಮಾತನಾಡುತ್ತಿದ್ದು, ತಮ್ಮ ಸಮುದಾಯದವರ ಜೊತೆ ಮಾತ್ರ ಮರಾಠಿ ಹಾಗೂ ಮುರುಗಾ ಭಾಷೆಯನ್ನೇ ಮಾತಾಡುತ್ತಾರೆ.

ಬಹುಭಾಷಿಗಳಾದ ಗೋಸಂಗಿಗಳು 'ಮುರುಗಾ' ಭಾಷೆಯಲ್ಲಿ ಕನ್ನಡ, ಮರಾಠಿ, ತೆಲುಗು, ಲಂಬಾಣಿ,

ಉರ್ದು ಇನ್ನಿತರೆ ಭಾಷಾ ಪದಗಳು ಮಿಶ್ರಣಗೊಂಡಿರುವುದು ಕಂಡುಬರುತ್ತದೆ. ಅಲೆಮಾರಿಗಳಾಗಿ ಊರೂರು ಅಲೆಯುತ್ತಿದ್ದುದರಿಂದ ಹೊಸ ಅಪರಿಚಿತ ಸ್ಥಳಗಳಲ್ಲಿ ತಮ್ಮ ಸಂಸಾರದ ಗುಟ್ಟು, ತಮಗೆ ಆ ಊರಿನಲ್ಲಿ ದೊರೆತ ಆದಾಯ, ಕೆಲವೊಂದು ಆಕಸ್ಮಿಕ ಆಪಾಯಗಳಿಂದ ಪಾರಾಗಬೇಕಾಗಿ ಬಂದಂತಹ ಸಂದರ್ಭದಲ್ಲಿ ರಹಸ್ಯ ಭಾಷೆಯೊಂದರ ಅಗತ್ಯವಿದ್ದುದರಿಂದಲೇ ಇಂತಹ ಭಾಷೆ ಉದ್ಭವಗೊಂಡಿರಬೇಕು. ಇತರೆ ಸಮುದಾಯಗಳಲ್ಲಿ ಕಂಡುಬರುವ ಈ ರೀತಿಯ ಮುರುಗಾಭಾಷೆ ಆಯಾ ಸಮುದಾಯದ ವ್ಯವಹಾರಕ್ಕೆ ಮಾತ್ರ ಸೀಮಿತವಾಗಿರುತ್ತದೆ. ಒಂದು ಸಮುದಾಯದ ಮುರುಗಾಭಾಷೆ. ಇನ್ನೊಂದು ಸಮುದಾಯದ ಮುರುಗಾಭಾಷೆಗೆ ಹೋಲಿಕೆಗಳಿರುವುದು ತುಂಬಾ ಕಡಿಮೆ. ಆದರೆ ಗೋಸಂಗಿಗಳಾಡುವ ಭಾಷೆಗೂ, ಹಕ್ಕಿಪಿಕ್ಕಿ, ಲಂಬಾಣಿಗಳಾಡುವ ಭಾಷೆಗೂ ಕೆಲವೊಂದು ಪದಗಳಲ್ಲಿ ಸಾಮ್ಯತೆಗಳಿರುವುದು ಕಂಡುಬರುತ್ತದೆ. ಇದಕ್ಕೆ ಕಾರಣ ಈ ಮೂರು ಸಮುದಾಯಗಳು ಮಹರಾಷ್ಟ್ರ, ಗುಜರಾತ್ ಮತ್ತು ರಾಜಸ್ಥಾನಗಳಲ್ಲಿರುವ ಸಂಬಂಧಿಕರೊಂದಿಗೆ ನಿರಂತರ ಸಂಪರ್ಕವಿಟ್ಟುಕೊಂಡಿರುವುದರಿಂದ ಭಾಷೆಯಲ್ಲಿ ಸಾಮ್ಯತೆ ಇರಲು ಸಾಧ್ಯವಿದೆ. ಇಂದು ಅರೆ ಅಲೆಮಾರಿಗಳಾಗಿರುವ ಗೋಸಂಗಿಗಳು ಸುಗ್ಗಿಯ ಸಂದರ್ಭದಲ್ಲಿ ತಿಂಗಳುಗಟ್ಟಲೆ ನೆರೆ ರಾಜ್ಯಗಳಿಗೆ ವಲಸೆ ಹೋಗಿ ವ್ಯಾಪಾರ ಮಾಡಬೇಕಾಗಿ ಬಂದಿರುವುದುದರಿಂದ ಆಯಾ ಪ್ರದೇಶದ ಭಾಷೆಯನ್ನು ವ್ಯವಹಾರಿಕ ಜ್ಞಾನಕ್ಕಾದರೂ ಕಲಿಯಬೇಕಾಗಿರುವುದು ಅನಿವಾರ್ಯವಾಗಿರಬೇಕು. ಹಾಗಾಗಿ ಅನಕ್ಷರಸ್ಥರಾದ ಗೋಸಂಗಿಗಳು ಮೂರಕ್ಕಿಂತ ಹೆಚ್ಚು ಭಾಷೆಗಳನ್ನು ಮಾತನಾಡುತ್ತಾರೆ. ಆದರೆ ತಮ್ಮಲ್ಲೇ ಮಾತನಾಡುವಾಗ ಮಾತ್ರ ರಹಸ್ಯಭಾಷೆ (ಮುರುಗಾಭಾಷೆ)ಯನ್ನೇ ಬಳಸುತ್ತಾರೆ.

ಕರ್ನಾಟಕದಲ್ಲಿ ವಾಸಿಸುವ ಗೋಸಂಗಿಗಳು ಆಡುವ ಭಾಷೆ, ಮರಾಠಿ ಭಾಷೆಗೆ ಹತ್ತಿರವಾಗಿರುವುದರಿಂದ ಗೋಸಂಗಿಗಳಾಡುವ ಭಾಷೆಯ ಕೆಲವು ಪದಗಳನ್ನು ಮರಾಠಿ ಕನ್ನಡ ಭಾಷಾ ಪದಗಳೊಂದಿಗೆ ಹೋಲಿಸಿ ನೋಡಲಾಗಿದೆ.

| **ಮುರುಗಾ** | **ಗೋಸಂಗಿ** | **ಮರಾಠಿ** | **ಕನ್ನಡ** |
|---|---|---|---|
| ಕೋಬರೋ | ಚೋಕರೋ | ಪೋರಗಾ | ಹುಡುಗ |
| ಕೋಬರಿ | ಚೋಕರಿ | ಪೋರಗಿ | ಹುಡುಗಿ |
| ಕುಂಡೋ | ಬಾ | ವಡೀಲ್ | ತಂದೆ |
| ಕುಂಡಿ | ಆಯಿ | ಆಯಾ (ಆಯಲ್) | [illegible] |
| ಕೋಬ್ರೋ | ಬೇಟೋ | ಪೋರಗಾ | [illegible] |
| -- | ನಾತಿ | ನಾತೂ | [illegible] |
| -- | ನಾತಣಿ | ನಾತ್ | ಮೊಮ್ಮಗಳು |
| ಡೋಕ್ರಿ | ಬುಡಿ | -- | ಅಜ್ಜಿ |
| ಡೋಕ್ರೋ | ಬುಡುಬಾ | -- | ಅಜ್ಜ |

| | | | |
|---|---|---|---|
| -- | ಒವು | ಸೂನ್ | ಸೊಸೆ |
| -- | ಜವಾಯಿ | -- | ಅಳಿಯ |
| -- | ಬಡೇಬಾಯಿ | ದಾದಾ | ಅಣ್ಣ |
| -- | ನಾನೋಬಾಯಿ | -- | ತಮ್ಮ |
| -- | ಕಾಕೋ | ಕಾಕಾ | ಚಿಕ್ಕಪ್ಪ |
| -- | ಕಾಕಿ | ಕಾಕೀ | ಚಿಕ್ಕಮ್ಮ |
| -- | ಬಡೋಕಾಕೋ | ಕಾಕಾ | ದೊಡ್ಡಪ್ಪ |
| -- | ಬಡೋಕಾಕಿ | ಕಾಕೀ | ದೊಡ್ಡಮ್ಮ |
| ಟಿಲಾ | ಪೈಸಾ | ಪೈಸಾ | ಪೈಸೆ |
| ತಾರಕೋ | ರುಪಿಯೋ | ರುಪಯಾ | ರುಪಾಯಿ |
| ಬೋಟಿ | ಮಾಸ್ | ಮಾಸ್ | ಮಾಂಸ |
| ಬಗತಡು | ಘಾಟೋ | ಬಾತ್ | ಅನ್ನ |
| ಟಪಣಿ | ರೋಟಿ | ಬಾಕರಿ | ರೊಟ್ಟಿ |
| -- | ನುಕಾಣೋ | -- | ಸಾರು |
| -- | ಪೋಳಿ | ಚಪಾತಿ | ಚಪಾತಿ |
| ಕಂಕ್ | ಘರ್ | ಘರ್ | ಮನೆ |
| ನಿರಕೋ | ಪಾಣಿ | ಪಾಣೀ | ನೀರು |
| ಚಿಲ್ಲೋರಿ | ಮಚ್ಚೀ | ಮಾಸಾ | ಮೀನು |
| -- | ಗಾಯಿ | ಗಾಯ್ | ಆಕಳು |
| -- | ಗದ್ದ | ಗಾಢವ್ | ಕತ್ತೆ |
| -- | ತಲವಾರ್ | ಖಡ್ಗ | ಕತ್ತಿ |
| ಬುಟಕೊ | ಕುತ್ರೋ | ಕುತ್ತಾ | ನಾಯಿ |
| -- | ಭಗತ್ | ಭಗತ | ಪೂಜಾರಿ |
| -- | ಪಾಲ್ | -- | ಡೇರಾ |
| ಗೋಟಾಣೋ | ಗಾಂ | ಗಾಂ | ಊರು |
| ಇಕರ್ | ದಾರು | ದಾರುಚ್ | ಸರಾಯಿ |
| ಪೆರವರಿ | ಸಾಡಿ | -- | ಸೀರೆ |
| -- | ಮುಡದೋ | -- | ಹೆಣ |

| | | | |
|---|---|---|---|
| -- | ಗಡೋ | -- | ಕೊಡ |
| -- | ಅರಸಿ | -- | ಕನ್ನಡಿ |
| ಬಟಕಣಿ | ಸುಪಾರಿ | -- | ಅಡಕೆ |
| ಲಿಲವೋ | ಪಾನ್ | ಪಾನ್ | ಎಲೆ |
| -- | ದೂದ್ | -- | ಹಾಲು |
| ಕೋಗಿ | -- | -- | ಗಂಡ |
| ಕೋಗಣ (ಭಟವಣಿ) | ಜೋಗಣೊ | -- | ಹೆಂಡತಿ |
| -- | ತಾಂಬಿಯೋ | -- | ಚೆಂಬು |
| ನಾಳಪಿ | ಕುಳಿ | -- | ಸೂಳೆ |
| ಜುಕಲೋ | ಬುಟಕೋ | -- | ಪೋಲೀಸ್ |
| ಪಣಿಯಾಳೋ | ನಾಗ್‌ಸಾಪ್ | -- | ಹಾವು |
| ಕಿಮರೋ | ಗಿಮಟೋ | -- | ಕಳ್ಳ |
| ನಾಳಪೊ | ಹಿಜಡಾ | -- | ಜೋಗಪ್ಪ |
| ವಡಕೋ | ಸಿಪಾಯಿ | -- | ಇಸ್ಪೆಕ್ಟರ್ |

## ಸಂಖ್ಯಾವಾಚಕಗಳು

| | | |
|---|---|---|
| ಕರ್‌ದೊ | ಪಚ್ಚಾಸ್ | ೫೦ ರೂಪಾಯಿ |
| ಪಂಚಲೂ | ಪಂಚ್‌ರುಪಿಯಾ | ೫ ರೂಪಾಯಿ |
| ಸುತಳಿ | ವೀಸ್ | ೨೦ ರೂಪಾಯಿ |
| ಬಬ್ರು | ಬಾರಾರುಪಿಯಾ | ೧೨ ರೂಪಾಯಿ |
| ಕಟ್ಲೂ | ಆಟ್‌ರುಪಿಯಾ | ೮ ರೂಪಾಯಿ |
| ರಾವ್‌ಲೀ | ಪಾವಲಿ | ೨೫ ಪೈಸೆ |
| ಖೋ | ಸೌರುಪಿಯಾ | ೧೦೦ ರೂಪಾಯಿ |

## ವಾಕ್ಯಗಳು

| | |
|---|---|
| ಅಟಿ ಆವೋ | -- ಬಾ ಇಲ್ಲಿ |
| ಉಟಿ ಜಾ | -- ಆ ಕಡೆ ನಡೆ |
| ಕಾಯ್ ಖಿರಿಯೋ ಕಾಯಿ | -- ಊಟ ಆಯ್ತಾ |
| ಕುಂತೋ ಗಾವರೋ ತೂ | -- ನಿನ್ನದು ಯಾವೂರು |

ಈ ಮೇಲೆ ವಿವರಿಸಿದ ಶಬ್ದಗಳಲ್ಲಿ ಮುರುಗಾಭಾಷೆ, ಗೋಸಂಗಿ ಭಾಷೆ ಹಾಗೂ ಮರಾಠಿ ಭಾಷೆಯ ಶಬ್ದಗಳನ್ನು ನೀಡಿ ಮುಂದೆ ಕನ್ನಡದಲ್ಲಿ ಅವುಗಳ ಅರ್ಥಗಳನ್ನು ನೀಡಲಾಗಿದೆ.

ಗೋಸಂಗಿಗಳ ಮರಾಠಿ, ಕನ್ನಡ ಇನ್ನಿತರೆ ಭಾಷೆಗಳನ್ನು ಬಿಟ್ಟರೆ ತಮ್ಮಲ್ಲೇ ಎರಡು ಭಿನ್ನರೂಪದಲ್ಲಿ ಭಾಷೆಗಳನ್ನಾಡುವುದು ಕಂಡುಬಂದಿದೆ. ಒಂದು ಮರಾಠಿ ಭಾಷೆಗೆ ಸಮೀಪವಾದ ಭಾಷೆ (ಅದಕ್ಕೆ ಅವರು 'ಗೋಸಂಗಿ ಭಾಷೆ' ಎಂದು ಕರೆದುಕೊಳ್ಳುತ್ತಾರೆ.) ಇನ್ನೊಂದು ಉಳಿದೆಲ್ಲಾ ಭಾಷೆಗಳಿಗಿಂತ ಭಿನ್ನವಾದದ್ದು. ಅದಕ್ಕೆ ಅವರು 'ಮುರುಗಾಭಾಷೆ' ಎಂದು ಕರೆಯುವರು.

ಈ ಮುರುಗ ಭಾಷೆಯಿಂದ ಗುಟ್ಟಾದ ವಿಷಯಗಳನ್ನು ಮಾತ್ರ ಮಾತನಾಡುತ್ತಾರೆ. ಹಾಗಾಗಿ ಈ ಭಾಷೆಗೆ ಸೀಮೀತವಾದ ಶಬ್ದ ರಚನೆಯಿದೆ. ಬೇರೆ ಭಾಷೆಗಳಲ್ಲಿನ ಎಲ್ಲಾ ಶಬ್ದಗಳಿಗೆ ಮುರುಗಾಭಾಷೆಯವೇ ಆದ ಶಬ್ದಗಳನ್ನು ರಚಿಸಿಕೊಂಡಿಲ್ಲ. ತಮಗೆ ಅತಿಮುಖ್ಯವೆನಿಸಿದ ಶಬ್ದಗಳನ್ನು ಮಾತ್ರ ಮುರುಗಾಭಾಷೆಯಲ್ಲಿ ಅರ್ಥೈಸಿಕೊಂಡು ವ್ಯವಹರಿಸುತ್ತಾರೆ. ಹಾಗಾಗಿ ಬೇರೆ ಭಾಷೆಗಳಲ್ಲಿನ ಎಲ್ಲಾ ಶಬ್ದಗಳಿಗೆ ಮುರುಗಾ ಭಾಷೆಯಲ್ಲಿ ಪರ್ಯಾಯ ಶಬ್ದಗಳನ್ನು ಹುಡುಕಲು ಸಾಧ್ಯವಿಲ್ಲ. ಹೀಗೆ ತಮ್ಮ ಸಮುದಾಯದ ಗೌಪ್ಯತೆಯನ್ನು ಕಾಪಾಡಿಕೊಳ್ಳಲು ಹುಟ್ಟಿಕೊಂಡ ಭಾಷೆ ಇಂದೂ ಸಹ ಗೋಸಂಗಿಗಳಲ್ಲಿರುವುದು ಆಶ್ಚರ್ಯದ ಸಂಗತಿ. ಇಂತಹ ಭಾಷೆಗಳನ್ನು ಭಾಷಾವಿಜ್ಞಾನಿಗಳು ಸೂಕ್ಷ್ಮವಾಗಿ ಅಭ್ಯಸಿಸಿದರೆ ಈ ಸಮುದಾಯಗಳಲ್ಲಿನ ಬೇರೊಂದು ಒಳನೋಟಕ್ಕೆ ನಾಂದಿಯಾಗಬಹುದು.

ಯಾವುದೇ ಒಂದು ಸಮುದಾಯ ತನ್ನ ಮೂಲಸ್ಥಾನವನ್ನು ತ್ಯಜಿಸಿ ಬೇರೆ ಬೇರೆ ಪ್ರದೇಶಗಳಿಗೆ ಹೋಗಿ ಸ್ಥಿರವಾಗಿ ನೆಲೆಸಿರುವುದರಿಂದ ಆ ಸ್ಥಾನಿಕ ಪ್ರದೇಶದ ಸಾಂಸ್ಕೃತಿಕ ಹಾಗೂ ಭಾಷೆಯ ಪ್ರಭಾವ ಬೀರುವುದು ಸಹಜ. ಮಹಾರಾಷ್ಟ್ರದಿಂದ ಕರ್ನಾಟಕದ ಕೆಲವು ಪ್ರದೇಶಗಳಿಗೆ ವಲಸೆ ಬಂದು ನೆಲೆಸಿರುವ ಗೋಸಂಗಿಗಳಿಗೆ ಆಯಾ ಪ್ರಾದೇಶಿಕ ಭಾಷೆ ಸಹಜವಾಗಿಯೇ ಪ್ರಭಾವ ಬೀರಿದೆ.

## ಸಾಹಿತ್ಯ

### ಹಾಡುಗಳು

**೧ ವರ ವಧುವಿನ ಮನೆಗೆ ಹೋಗುವ ಸಂದರ್ಭ**

ತೋಪು ಪಡೇ ರಂಗೇ ಮೇಲಾಮೇ ಮೇರಿತೊಪು ಪಡೇರಂಗು ಮೇಲ
ಪಡೀರೆ ನಗರ ಪ್ರದೇಸು ಬವಾತಾರಿ ಜಾ
ತೆರಬಾಪೇ ತೇಜೋ ತಾರಾ ಸಾತೇ ಬವತಾರೀ ಜಾ
|| ತೋಪು ಪಡೇ ||

ತೆರ ಬೇನು ಲೇಜೆ ತಾರಾ ಸಾಥೆ ಬವುತಾರೀ ಜಾ
ಪಡೀರೇ ನಗರಾ ಪ್ರದೂಸು ಬವತಾರೀ ಜಾ

ತರ ಭಾಯಿ ಬಿನೆಕಮೆ ಚಲೆರೆ
ತರೊ ಬಾಯಿಲಗೆ ತರಸಾಥ ಬುವಥರಿಜಾ
ತೊಪು ಪಡೆ ಲಂಗೆ ಮೇಲಾ ಮೇರೆ
ತರ ಆಯಿ ಬಿನಕಮೆ ಚಲೆ
ತರೆ ಆಯಿ ತೆರಾ ಸಾಥ ಭವತಾರಿ ಜಾ
|| ತೋಪು ಪಡೇ ||

೨ ಅರಿಸಿಣ ಕಾರ್ಯಕ್ರಮ

ಹಲದಿ ಲಗಾವೋ ಸಾರಿರಾಥ ಪರಿಯೊಂಕೇ ಘುರೊಮೆ
ಕಜನಾ ನಾಚಾವ ಸಾರಿನಾಥ ಪರಿಯೊಂಕೇ ಘುರೊಮೆ

ಸಂಚಾ ಪರಿ ಹಲದಿ ಭೇಜೊ ತುಂಸೆ ಪರಿ ಮೇಲಾಮೆ
ಹಲದಿ ಲಗಾವೋ ಸಾರಿರಾಥ ಪರಿಯೊಂಕೇ ಘುರೊಮೆ
ರಜನಾ ನಾಚಾವ ಸಾರಿರಾಥ ಪರಿಯೊಂಕೇ ಘುರೊಮೆ

ಕಲಿಪತ ಬಾಂದಾವ ಸಾರಿರಾಥ ಪರಿಯೊಂಕೇ ಘುರೊಮೆ
ಕಜನಾ ನಾಚಾವ ಸಾರಿರಾಥ ಪರಿಯೊಂಕೇ ಘುರೊಮೆ

ಆಶಾಪರಿ ಪಾನೀ ಬೇಜೋ ಸಂಸಾಪರಿ ಮೇಲಾಮೆ
ಪಾನಿ ನಹಲಾವೋ ಸಾರಿರಾಥ ಪರಿಯೊಂಕೇ ಘುರೊಮೆ

ಆಶಾಪರಿ ಬಾಸಿಂಗ ಭೇಜೋ ಸಂಸಾಪರಿ ಮೇಲಾಮೆ
ಬಾಸಿಂಗ ಬಂದಾವೋ ಸಾರಿರಾಥ ಪರಿಯೊಂಕೇ ಘುರೊಮೆ

ಆಶಾಪರಿ ಐನಾ ಭೇಜೋ ಸಂಭಾಪರಿ ಮೇಲಾಮೆ
ಐನಾದುಕಾವೋ ಸಾರಿರಾಥ ಪರಿಯೊಂಕೇ ಘುರೊಮೆ
ಆಶಾಪರಿ ಪಾಣಿ ಭೇಜೋ ಸಂಚಾಪರಿ ಮೇಲಾಮೆ
ಐನಾದುಕಾವೋ ಸಾರಿರಾಥ ಪರಿಯೊಂಕೇ ಘುರೊಮೆ
ಆಶಾಪರಿ ಚುಡಲೊ ಭೇಜೋ ಸಂಭಾಪರಿ ಮೇಲಾಮೆ
ಚುಡಲೊ ಪೇನಾವ ಸಾರಿರಾಥ ಪರಿಯೊಂಕೇ ಘುರೊಮೆ

ಆಶಾಪರಿ ಜೈನ ಭೇಜೋ ಸಂಸಾಪರಿ ಮೇಲಾವ
ಜೈನ ಪೇನಾವ ಸಾರಿರಾಥ ಪರಿಯೊಂಕೇ ಘುರೊಮೆ
ರಜನಾ ನಾಚವ ಸಾರಿರಾಥ ಪರಿಯೊಂಕೇ ಘುರೊಮೆ

೩. ವಿವಾಹ ಸಂದರ್ಭದಲ್ಲಿ ವಧುವಿನ ಉಡುಪು ಆಭರಣ

ಜುಂಬರಿ ತೂ ಕರೆ ಸಿನಗಾರೇ
ಅವೇ ತುನೇ ಸಾಡಿಯೇ ತುವಾರಾನಿ ಸಾಡಿ
ಸಾಡಿಯೇ ಪೇನು ತು ಬುಂಬರೀ
ಜುಂಬರೀ ತು ಕರೇ ಸಿನಗಾರೇ
ಅವೇ ತುನೇ ಕಾಕುಡಾನೇ ಎಸುವಾರಾನಿಕಾರುಡೂ

ಕಾಕುಡೊನೆ ಸೂಬೆ ಷೆರತೂ ಜುಂಬರಿ

ಜುಂಬರಿ ತು ಕರೆ ಸಿನಗಾರೇ
ಅವೆ ತುನೆ ಭಾಸಿಂಗೇ ಸುವಾರಾನಿ
ಭಾಸಿಂಗ ಪೆನ ತು ಜುಂಬರಿ

ಜುಂಬರಿ ತು ಕರೆ ಸಿನಗಾರೆ
ಅವೆ ತುನೆ ಕಾಲ ಪೂತೆ ಸುವ್ವಾರಾನಿ ಕಾಲಿತು
ಪೂತೆ ತೇನೆ ಸೂತು ಜುಂಬರಿ

ಜುಂಬರಿ ತು ಕರೆ ಸಿನಗಾರೆ
ಅವೆ ತುನೆ ಗೇಣು ಎಸುವ್ವಾರಾನಿ ಗೇಣು
ಗೇಣು ಪೇನ ತು ಜುಂಬರಿ

ಜುಂಬರಿ ತು ಕರೆ ಸಿನಗಾರೆ
ಅವೆ ತುನೆ ಗಡಿಯಾಳು ಎಸುವ್ವಾರಾನಿ ಗೇಣು
ಗಡಿಯಾಳು ಪೇನ ತು ಜುಂಬರಿ

೪. ವಿವಾಹ ಸಂದರ್ಭದಲ್ಲಿ ವರನ ಉಡುಪು

ಧೋತಿ ವಾಲಾ ಬನರೇ ಧೋತಿ ತೇರಿ ಲಾಲರೇ
ಧೋತೀನೆ ಪ್ಯಾರು ಲಗೇ ಲಾವೋನಿ ಬನಾರೀಕೊ
ಹಳುರೇ ಹಳು ಚಲೋ ಸಬಲೇ ಬನಾರೇಕೂ

ಧೀರೇರೆ ಧೀರೆ ಚಲೋ ಶಬಿಲಾ ಬನಾರಿಕೊ
ಧಿರೇರೆ ಧಿರೇ ಚಲೋ ಹಚೀಲೆ ಬನಾರೆ

ಜಮೀವಾಲ ಬನರೇ ಜಮ್ಮ ತೆರಾ ಲಾಲರೇ
ಜಮಾನೆ ಪ್ಯಾರು ಲಗೇ ಲಾವೋನಿ ಬನಾರಿಕೊ
ಹಳುರೆ ಹಳು ಚಲೋ ಕಬಿಲೆ ಬನರತೂ
ಧೀರೇರೆ ಧೀರೆ ಚಲೋ ಹಟೀಲೇ ಬನರೇ

ಭಾಸಿಂಗ ವಾಲ ಬನರೆ ಭಾಸಿಂಗ ತೋರಾ ಲಾಲರೇ
ಭಾಸಿಂಗೇ ಪ್ಯಾರೊಲಗೇ ಲಾವೋನೇ ಬನರಿಕೂ
ಹಳುರೇ ಹಳು ಚಲೋ ಶಬಿಲೇ ಬನರೆತೂ
ಧೀರೇರೆ ಧೀರೆ ಚಲೋ ಹಟೀಲೇ ಬನಾರೀಕೂ

ಗಡಿಯಾಲ್‌ವಾಲ ಬನರೇ ಗಡಿಯಾಲ್ ತೇರ ಲಾಲರೇ
ಗಡಿಯಾಲೇ ಪ್ಯಾರು ಲಗೇ ಲಾವೋರಿ ಬನರೇತೋ
ಹಳುರೇ ಹಳು ಚಲೋ ಶಬಿಲೇ ಬನರೇತೂ

೫. ನಾಮಕರಣ ಸಂದರ್ಭದಲ್ಲಿ (ಜೋಗುಳ ಹಾಡು)

ಮಾಂಡೊ ತೆಳೇ ಝೂಲೇ ತಾರೋಬಾ ಜಂಗಲಾರಿ ಮೊರೇರಾ

ಎ ಲಾಧಿರಿ ಲಾಡಿ ಧೀರೇ ಧೀರೆಜಾ
ಮಾಂಡ್ಯೆ ತೆಳೇ ಝೂಲೇ ತಾರೇಜಾ ಮಾಮಾ ಜಂಗ ಲಾರೀ ಮೊರೇರಾ

ಹೆ ಲಾಡಾರಿ ಲಾಡಿ ಧೀರೆ ಧೀರೇ ಜಾ
ಆವೊ ಜೋರೇ ಮರವೆ ಪರಿ ಲಾಡಾರ ಬಾಪೆ
ಮಾರ ಲಗೆ ನಾಕೋ ಮಾಂಡೇವ್ರ ಮುಲಾವೋ ಜೋ

ಆವೋ ಜೋವೋ ಮರಿ ಲಾಡಲಿ ಆಯಿ
ಮರ ಲಗನಾರೊ ಸಾಡಿ ಮುಲಾವೋ ಚೋ

ಅವೋ ಚೋವೋ ದಲಲಾಣಿ ಬಾಬಿ
ಮರ ಲಗನಾಸ್ಕಡಲೊ ಸಾಡಿ ಮುಲಾವೋ ಚೋ

ಆವೋ ಚೋಪೋ ಲಾಡರಿ ಬೇನು
ಮರಲಗನಾರೆ ಚೊಡೇ ಮುಲಾವೋ ಚೋ

ಆವೋ ಚೋರೆ ಲಾಡಾರ ಪೂಟ
ಮರ ಲಗನಾರೆ ಖೋಳೊವೊ ಮುಲಾವೋ ಚೋ

ಆವೋ ಚೋರೆ ವೇಪಾರಿ ಪೂಯಿ
ಮರ ಲಗನಾರೆ ಹಳದಿ ಮುಲಾವೋ ಚೋ

ಆವೋ ಚೋರೆ ಸಾವುಕಾರ ಕಾಕ್
ಮರ ಲಗನಾರೇ ಗೌಡೋ ಮುಲಾವೋ ಚೋ

ಆವೋ ಚೋರೆ ಲಾಡರಿ ಕಾಕ್ಕೂ
ಮರ ಲಗನಾರೇ ಚುಲಡೋ ಮುಲಾವೋ ಚೋ

ಆವೋ ಚೋರೆ ಲಾಡರಿ
ಮರ ಲಗನಾರೋ ವಿಂಟಿ ಮುಲಾವೋಚೆ

ಅಡಿ ಉಭಿ ಮತ ಪರಚೆ ಲಾಡಖಣಿ
ತರ ಸಿಪಾಯಿ ಸರಕಾರಿ ಉಭಾಯಿ
ತರಡ ಪೆದಾರ ಸರಕಾರ ಉಭಾಯಿ

ಅಡಿ ಉಭಿ ಮತ ಫರಚೆ ಲಾಡಖಣಿ
ತರೊವಕಿಲಾ ಸರಕಾರ ಉಬಾಯಿ
ತರ ಸಿಪಾಯಾರಿ ಕೂಜು ಹೂ ಬ್ಯು ರೇ

ಅಡಿ ಉಭಿ ಮತ ಫರಚೆ ಲಾಡ ಖಣಿ
ತರ ಸಾವೇಕಾರ ಬಾಯಿ ಉಬಾಯಿ
ತರ ವೇಪಾರಿ ಬಾಂಧವಾವೇ

ಅಡಿ ಉಭಿಮತ ಫರಚೆ ಲಾಡ ಖಣಿ
ತರ ಸಾವುಕಾರ ಕಾಕಾ ಹುಭಾವೆ
ತಾರಡಪ್ಪೆದಾರ ಕಾರಾ ಉಭಾಯಿ.

## ೬. ಕಂಕಣ ಬಿಡಿಸುವ ಹಾಡು

ಡೋರುಲಾ ಚೋಡೇ ಲಡಾರಿ ಲಡಕಿ ಡೋರುಲಾ ಚೋಡ್
ತುನೆ ನಯಿ ಚುಟೇ ತರಿ ಬಾನಿನೆ ಬೋಲರಿ ಡೋರುಲಾ ಚೋಡ್
|| ಡೋರುಲಾ ಚೋಡ್ ||
ತುನೆ ನಹಿ ಚುಡೇ ತೊ ತರಿ ಆಯಿನೆ ಬೋಲರಿ ಡೋರುಲಾ ಚೋಡ್
|| ಡೋರುಲಾ ಚೋಡ್ ||
ತುನೆ ನಯಿ ಚುಟೆ ತರಿ ಭಾಯಿನ ಬೋಲರಿ ಡೋರುಲಾ ಚೋಡ್
|| ಡೋರುಲಾ ಚೋಡ್ ||
ತುನೆ ನಯಿ ಚುಟೆ ತರಿ ಭಾಬಿನ ಬೋಲರಿ ಡೋರುಲಾ ಚೋಡ್
|| ಡೋರುಲಾ ಚೋಡ್ ||
ತುನೆ ನಯಿ ಚುಟೆ ತರಿ ಬುಡಬನೆ ಬೋಲರಿ ಡೋರುಲಾ ಚೋಡ್
|| ಡೋರುಲಾ ಚೋಡ್ ||
ತುನೆ ನಯಿ ಚುಟೆ ತರಿ ಬುಡಿಯಾಯಿನೆ ಬೋಲರಿ ಡೋರುಲಾ ಚೋಡ್
|| ಡೋರುಲಾ ಚೋಡ್ ||
ತುನೆ ನಯಿ ಚುಟೆ ತರಿ ಕಾಕಾನ ಬೋಲರಿ ಡೋರುಲಾ ಚೋಡ್
|| ಡೋರುಲಾ ಚೋಡ್ ||
ತುನೆ ನಯಿ ಚುಟೆ ತರಿ ಕಾಕೀನೆ ಬೋಲರಿ ಡೋರುಲಾ ಚೋಡ್
|| ಡೋರುಲಾ ಚೋಡ್ ||
ತುನೆ ನಯಿ ಚುಟೆ ತರಿ ಮಾಮನ ಬೋಲರಿ ಡೋರುಲಾ ಚೋಡ್
|| ಡೋರುಲಾ ಚೋಡ್ ||
ತುನೆ ನಯಿ ಚುಟೆ ತರಿ ಮಾಮಿನೆ ಬೋಲರಿ ಡೋರುಲಾ ಚೋಡ್
|| ಡೋರುಲಾ ಚೋಡ್ ||
ತುನೆ ನಯಿ ಚುಟೆ ತರಿ ಬೇನಿನ ಬೋಲರಿ ಡೋರುಲಾ ಚೋಡ್
|| ಡೋರುಲಾ ಚೋಡ್ ||
ತುನೆ ನಯಿ ಚುಡೇ ತರ ಬನಿನೆ ಬೋಲರಿ ಡೋರುಲಾ ಚೋಡ್
|| ಡೋರುಲಾ ಚೋಡ್ ||
ತುನೆ ನಯಿ ಚುಟೆ ತರಿ ಪುಯಿನೆ ಬೋಲರಿ ಡೋರುಲಾ ಚೋಡ್
|| ಡೋರುಲಾ ಚೋಡ್ ||
ತುನೆ ನಯಿ ಚುಟೆ ತರಿ ಪುವನೆ ಬೋಲರಿ ಡೋರುಲಾ ಚೋಡ್
|| ಡೋರುಲಾ ಚೋಡ್ ||

## ೭. ಸಂಪ್ರದಾಯದ ಹಾಡು

ಪಾನಿ ನಹಿ ತೋ ಪಾನಿ ನಾಹಿ ತೋ
ವರೇ ಮಾಯಿ ವರೇ ಮಾಯಿ
ನಾಹಿ ಗೂಯಿ ಗೋರಿಲಾಡರಿಯೇ
ಸಾಸು ಬಾಯಿದೇ ನಾಗಿನ ಹೂ

ಹೆವಾಸ ಗೇವಾಸ ಪಡಿಯಾರ ಬಡನೂರಾವಾರೇ
ರೂಪಿಯಾರಿ ಮೆಟಾರೂ ಜೊಜಾ
ನಾಹಿ ಗೊಯಿ ಗೊರಿಲಾ ದಾರಿಯೇ ಸಾಸುಬಾಯಿನೆ ನಾಗಿನ ಹೂ
ಹೆವಾಸ ಗೇವಾಸ ಪಡಿಯರ ಬಡಲಾರಾವಾರೇ
ಗಿಯಿರಿಕೆ ಮೊಟಾರೂ ಜೊಡಾ
ಆಡು ಬಾಯಿ ಡೊಲ ತೊರೆ ಪಾಟ ಉತಾ

**ಮಕ್ಕಳ ಹಾಡು**

೧. ಆವೋರೆ ಟಂಬರೋ
ಕೇಲ್‌ವಾರಿ ವಕದ್ಘೋಯಿ
ಅಂಕಡಾಮೆ ಅಂಕಡೋ
ಲಿಂಬ್ ಲಿಂಬ್ ಕೋರೋ
ಆಗೋ ಬೋಲೆ ಗೂ ಕಾಯಿ
ಕೇಡೆ ಬೋಲೆ ಸಕ್ಕರ್ ಕಾಯಿ
ಕಿಡಿಮಿ ಗಪ್‌ಚುಪ್

ಅನು : ಬನ್ನಿರಿ ಮಕ್ಕಳೇ
ಆಟವಾಡುವ ಸಮಯವಾಯ್ತು
ಎಕ್ಕೆ ಗಿಡದಲ್ಲಿ ಎಕ್ಕೆ ಗಿಡ
ಮೊದಲು ಮಾತಾಡಿದವನು ಹೇಲ್ ತಿಂದ
ಹಿಂದೆ ಮಾತಾಡಿದವನು ಸಕ್ಕರೆ ತಿಂದ
ಇರವಿ-ಗಿರವಿ-ಬಾಯಿಮುಚ್ಚರಿ

೨. ವಾರ್ತರೇ ವಾರ್ತಾ
ಡೋರ್ ಚೆರಾತಾ
ಡೋರ್ ಗಯೋ ರಾನ್ ಮೇ
ಕಾಂಟಿಯಾಳಿ ತುಮಡೀ
ತುಮಡಿಮೇ ತಡಕೋ
ತುಮಾರೋ ಲಡಕೋ
ಲಡಕೋ ಗಯೊ ಪಾಣೀನೆ
ಪಕಡೋ ಉರಿ ನಾಣೀನೆ
ನಾಣಿ ಗಯಿ ದರಬಾರನೆ
ಚೋದೋ ಉರೆ ನಾಣೀನೆ

ಅನು : ಸುದ್ಧಿಯೇ ಸುದ್ಧಿ
ದನಗಳ ಹೋಗಿದ್ದಾವೆ ಅಡವಿಗೆ

ಸೂರೆಕಾಯಿ ಬುರುಡೆ
ಬುರುಡೆ ಒಳಗೆ ಬಿಸಲು
ನಿಮ್ಮ ಹುಡುಗ
ಹುಡುಗ ಹೋಗ್ಯಾನ ನೀರಿಗೆ
ಹಿಡಿರಿ ಅವನ ಅಜ್ಜೀಗೆ
ಅಜ್ಜಿ ಹೋಗ್ಯಾಳೆ ದರಬಾರ ಮಾಡಾಕೆ
ಮುಕಳಡ್ರಿ ಅವರಜ್ಜೀನ

## ಗಾದೆಗಳು

೧. ಮಳೆತೋ ಶಿಕಾರಿ ನಾಹೀ ಮಳೆತೋ ಭಿಕಾರಿ
ಅನು: ಸಿಕ್ಕಿದರೆ ಶಿಕಾರಿ ಇಲ್ಲದಿದ್ದರೆ ಭಿಕಾರಿ (ಭಿಕ್ಷುಕ)

೨. ಗೇಂದರ್ ತೋ ಬಾರಾಸೌ ರೋಗ್‌ನೆ ಮಾರೆ
ಅನು: ನರಿಮಾಂಸ ಹನ್ನೆರಡುನೂರು ರೋಗಗಳನ್ನು ಗುಣಪಡಿಸುತ್ತದೆ.

೩. ಸಸೌ ಬಾರಾಗರ್ ರಸೋ
ಅನು: ಒಂದು ಮೊಲ ಹನ್ನೆರಡು ಮನೆಗೆ ಸಾರು

೪. ಅಪಾರ್ ಖಾಗಳೇಚ್ ಅಪಾರಿ ದೇವರೋ ನೀವತ್ ಕಾಣೋ
ಪರ್ ಜಾತೀಲಾನೆ ನೀವತ್ ನಹಿ ದೇಣೋ
ಅನು: ನಮ್ಮ ಬಳಿಯವರು ಮಾತ್ರ ನಮ್ಮ ಮನೆದೇವರ ನೈವೇದ್ಯ
ತಿನ್ನಬೇಕು. ಬೇರೆ ಬಳಿಯವರಿಗೆ ನೈವೇದ್ಯ ಕೊಡಬಾರದು.

೫. ಧನ್‌ಗರ್ ಕೋ ದಾಲ್‌ಕಿ ಮಜಾ ಕ್ಯಾ ಮಾಲೂಮ್ ಹೇ
ಅನು: ಕುರುಬನಿಗೇನು ಗೊತ್ತು ಬೇಳೆಸಾರಿನ ರುಚಿ

೬. ಅಲ್ಲಿ ಗಲ್ಲಿ ಗಾಂಚಾಗಲ್ಲಿ
ಜೋ ಮೇರಿ ನಿಂದ್ಯಾ ಕರೀ
ಉಸ್ ಕೀ ಗಾಂಡ್ ಜಲಿ
ಅನು: ಬೀದಿ ಬೀದಿಯಲ್ಲಿ ಕುಡಿದ ಮತ್ತಿನಲ್ಲಿ
ಬೇರೆಯವರನ್ನು (ಜನರನ್ನ) ನಿಂದೆ ಮಾಡಿದ್ರೆ
ಸುಡೋದು ನಿನ್ನ ಮುಕಳಿ

೭. ಖಾನೇ ವಾಲೇಕೆನಾಮ್ ದಾನ್ ದಾನೆಪರ್ ಲಿಖಾಹ್ಯೆ ಭಗವಾನ್
ಅನು: ಪ್ರತಿ ಅನ್ನದ ಅಗಳಿನ ಮೇಲೆ ತಿನ್ನುವವನ ಹೆಸರು
ಬರೆದಿರುತ್ತಾನೆ ದೇವರು

೮. ದಿಲ್ ದಿಯಾ ದಿಲ್‌ದಾರ್ ಕೋ
ಧನ್ ದಿಯಾ ಮುಡದಾರ್ ಕೋ
ಅನು: ಹೃದಯ ಉಳ್ಳವನಿಗೆ ಒಳ್ಳೆ ಬುದ್ಧಿ ಕೊಟ್ಟಿದ್ದಾನೆ
ಸಂಪತ್ತಿರುವವನಿಗೆ ಕೆಟ್ಟ ಬುದ್ಧಿ ಕೊಟ್ಟಿದ್ದಾನೆ

೯. ಕೆತನೋ ಕಿದೋತೋ ಅಡ್‌ಗಾವುಟಿ ಧಂದೋ ಬಡೇ ಹೈ
ಚಾರ್ ಘರ್ ಮಾಂಗೇತೋ ಚಲಾಯಿನೆತೋ ಆನ್-ದಾನ್ ಲಾವೆ
ಅನು: ಎಷ್ಟೇ ಆದರೂ ಶಾಸ್ತ್ರವೃತ್ತಿ ಬಹುದೊಡ್ಡದು
ನಾಲ್ಕುಮನೆ ಸುತ್ತಿದರೆ ಸಾಕು, ಹೊರಲಿಕ್ಕಾಗುವಷ್ಟು
ಅನ್ನ, ಕಾಳು, ಭಿಕ್ಷೆ ತರಬಹುದು.

೧೦. ಕೆತನೋ ಮಾಡಿ ಕೆತನೋ ಸಾಹುಕಾರ್ ಹೋಯೇತೂ
ಅಪಾರಿ ಜೋಗಿ ಜಾತ್ರಿ ಪದ್ಧತಿ ಕೋನಿ ಜಾವರಿ
ಅನು: ಎಷ್ಟು ಅಂತಸ್ತಿನ ಮಹಡಿ ಕಟ್ಟಿ ಸಾಹುಕಾರ್‌ನಾದ್ರೂ
ನಮ್ಮ ಭಿಕ್ಷಾವೃತ್ತಿ ಹೋಗಲಾಡಿಸಲು ಸಾಧ್ಯವಿಲ್ಲ.

೧೧. ಅಪೇ ಗಾವುರಾ ಭಟ್ಟೂ ಕೋನೀ
ಕೆತನೋಕಿ ಧೋತೋ ಅಪೇ ಜೋಗಿ
ಜ್ಯೊಗೀರೆ ಚಾಲ್ ನಹಿ ಚೊಡ್‌ನೋ
ಅನು: ನಾವು ಊರಿನ ಜನ ಅಲ್ಲ
ಎಷ್ಟೇ ಆದ್ರೂ ನಾವು ಜೋಗಿಗಳು
ಜೋಗಿಯ ಸಂಪ್ರದಾಯ ಯಾವತ್ತೂ ಬಿಡಕೂಡದು

೧೨. ಅಪೇರಿಯ ನರಕ್‌ಮೇ, ಊ ಚಲಿಯೇ ಸ್ವರ್ಗಮೇ
ಅನು: ನಾವು ಇದ್ದೀವಿ ನರ(ಕ) ಲೋಕದಲ್ಲಿ ಅವರು ಹೋಗ್ತಿದ್ದಾರೆ ಸ್ವರ್ಗಲೋಕಕ್ಕೆ

೧೩. ಸಬ್‌ರೂ ದೇವ್ ಎಕ್ಕೀಚ್
ಅನು: ಎಲ್ಲಾರ ದೇವರು (ಧರ್ಮವು) ಒಂದೇ

೧೪. ಕೇಡ್ ರೀ ತೋಡ್
ಆಗೇರಿ ಜೊಡ್
ಅನು: ಹಿಂದಿನದನ್ನು ಬಿಟ್ಟು (ಮರೆತು)
ಮುಂದಿನ ಮಾತಿಗೆ ಬಾ

೧೫. ಸೊನ್ನು ಮೊಡಾವಾ
ಸಗಸೊಯಿರಾ ಚೋಡಾವಾ
ಅನು: ಬಂಗಾರ ಕಳದರೂ (ಅಹಂಕಾರ ಕಳೆಯಿರಿ)
ಬೀಗರು ಒಂದಾಗಿ

೧೬. ಕೆತನೋ ರಿಯೇತೋ

ಕುಟಾರೋ ವಾಸರೋ

ಕುಟಾಪರ್ ಆವೇಚ್

ಅನು: ಎಷ್ಟೇ ದೂರ ಹೋದ್ರೂ

ಬಿಟ್ಟೋದ ಸ್ಥಳಕ್ಕೆ

ಮತ್ತೆ ಬರಲೇ ಬೇಕು

೧೭. ಎಕ್ಕೀಚ್ ಟೇಮ್ ದೇಕೋ ಭಾತಾನೇ

ಕಾಯಿ ಕಚ್ಚೋ ಕಾಯಿ ಪಕ್ಕೋ

ಅನು: ಒಂದೇ ಸಾರಿ ನೋಡೋದು ಅನ್ನಾನಾ

ಬೆಂದಿದೆಯೋ ಇಲ್ಲವೋ ಅಂತ

೧೮. ಏಕ್ ರಾಂಡ್

ಸೋನಾಚಿ ಕಾಂಡ್

ಅನು: ಒಬ್ಬ ಹೆಂಗಸು (ವೇಶ್ಯೆ)

ಬಂಗಾರದ ತುಂಡು

೧೯. ಏಕ್ ರಾಂಡ್

ಕಾಳಾಕುತ್ರಾಚಿ ಕಾಂಡ್

ಅನು: ಏಕ್ ರಾಂಡ್

ಸೊಬಾಚಿ ಗಾಂಡ್

೨೦. ಗೇಂದರ್ ನೇ ಸೋಳಾಬುದ್ಧಿ

ಅಪಾನೇ ಸತ್ರಾ ಬುದ್ಧಿ

ಅನು: ನರಿಗೆ ಹದಿನಾರು ಬುದ್ಧಿ

ನಮಗೆ ಹದಿನೇಳು ಬುದ್ಧಿ

೨೧. ಸಿಕಾರ್‌ನೆ ಗಯಾತೋ

ತೋಯಿದೆನು ಲೋಯಿಲೋಣು

ತೋ ಸಿಕಾರ್‌ನೇ ಜಾಣೋ

ನಯಿತೋ ನಯಿ ಜಾಣೋ

ಅನು: ಸಿಕಾರಿಗೆ ಹೋದ್ರೆ

ರಕ್ತ ಕೊಟ್ಟು ರಕ್ತಪಡಿಬೇಕು

ಹಾಗಿದ್ದರೆ ಮಾತ್ರ ಸಿಕಾರಿಗೆ ಹೋಗಬೇಕು

ಇಲ್ಲಾಂದ್ರೆ ಹೋಗಲೇ ಬಾರ್ದು

೨೨. ಗಾವುರಾ ಲೋಕ್‌ಲೀನ್ ಆಂಕೆ ನಹಿಪಣ್ಣು

ಅನು: ಊರು ಜನರ ದೃಷ್ಟಿಯಲ್ಲಿ ನಾವು ಕೆಟ್ಟವರಾಗಬಾರದು.

೨೩. ಕೆತನೋ ರಿಯಾತೋ ಲೋಕ್ ಲೋಕೇಚ್

ಕೆತನೋ ರಿಯಾತೋ ಅಪನೇ ಜೋಗಿ ಜೋಗೀಚ್
ಕೆತನೋ ರಿಯಾತೋ ಅಪೇ ಮಾಂಗೀ ಕಾವಳಾಚ್

ಅನು: ಎಷ್ಟಾದರೂ ಬೇರೆಯವರು ಬೇರೆಯವರೇ
ಎಷ್ಟಾದರೂ ನಮ್ಮ ಜೋಗಿ ಜೋಗಿಗಳೇ
ಎಷ್ಟಾದರೂ ನಾವು ಭಿಕ್ಷೆ ಬೇಡಿ ತಿನ್ನಬೇಕು.

೨೪. ಅಂಕಡಾಮೇ ಅಂಕಡೇ
ಲಿಮ್ ಲಿಮ್ ಕೋಲ್
ಆಗೇ ಬೋಲೆಗೂ ಕಾಯಿ
ಕೆಡೇ ಬೋತಿ ಶಕ್ಕರ್ ಕಾಯಿ
ಕಿಡಿ ಮಿಡಿ ಬೋಲ್
ಗಪ್ ಚುಪ್

ಅನು: ಎಕ್ಕೆ ಗಿಡದಲ್ಲಿ ಎಕ್ಕೆ ಗಿಡ
ಲಿಂಬು ಲಿಂಬು ಕೋಲ್
ಹಿಂದೆ ಮಾತಾಡೋರು ಸಕ್ಕರೆ ತಿಂತಾರೆ
ಮುಂದೆ ಮಾತಾಡೋರು ಹೇಲ್ ತಿಂತಾರೆ
ಇರವಿ-ಗಿರವಿ ಹೇಳೋರೆಲ್ಲಾ?
ಸುಮ್ಮನಿರಿ

೨೫. ಗಾವರಿ ಚವಾಟ್
ಕರ್ತೂರಿ ಚವಾಟ್

ಅನು: ಊರೊಳಗಿರುವ ಚಾವಟ್ (ಕಾಯ್ದೆ)
ಊರೊರಗಿರುವ ಚವಾಟ್?

೨೬. ಜೋಗಿರಿ ಚಾಲ್

ಅನು: ಜೋಗಿಯ ನಡವಳಿಕೆ

೨೭. ಕುಣಬಿ ಸರಕ ದಾತಾನಹಿ
ಟೋಕಾಬಿಗರ್ ದೇತಾನಹಿ

ಅನು: ಕುಣಬಿಯಂತಹ ಒಳ್ಳೆಯವರಿಲ್ಲ
ಮೋಸ ಮಾಡದೆ ಕೊಡುವವರಲ್ಲ

೨೮. ಗಾವುರೇ ಕಾಯಿದೊ ನಯಿ ಕರನೋ
ಜೋಗೀರೋ ಕಾಯಿದೇ ಕರನೋ
ಚಾರ್ ಆಟ್ ರೋ ಕಾಯದಾಮೇ ರೇಣು

ಅನು: ಊರವರ ಕಾನೂನು ಮಾಡಬೇಡಿ
ಜೋಗಿಯರ ಕಾನೂನು ಮಾಡಿ

ನಾಲ್ಕು-ಎಂಟರ ಕಾನೂನು ಮಾಡಿ?

೨೯. ಕುಕಡಾತ್ತೀನ್ ಬಕರಾತ್ತೀನ್ ತಾಕತ್ ರೀ ಬೊಟಿ
ಕಿದೋತೋ ಸಿಕಾರಿ ಬೊಟೀಚ್

ಅನು: ಕೋಳಿಮಾಂಸಕ್ಕಿಂತ, ಕುರಿಮಾಂಸಕ್ಕಿಂತ, ಶಕ್ತಿಯುತವಾದ ಮಾಂಸವೆಂದರೆ
ಬೇಟೆ (ಅಡವಿ) ಪ್ರಾಣಿಗಳ ಮಾಂಸ.

೩೦. ದೋ ದೋಬಿಕಾ ಲವಡಾ ದೋಹೇ

ಅನು: ಇಬ್ಬರು ಅಗಸರ ತುಣ್ಣೆ ತೊಳಿ

೩೧. ಜವಾನ್ ನೇ ಲಗೀ ತಂಡ್
ಬುಡ್ಡಾ ಕೇಲೆ ಚಕ್ಕರ್‌ದಂಡ್

ಅನು: ಹರದೇ ಹುಡುಗನಿಗೆ ಚಳಿ ಹತ್ತಿದೆ
ಮುದುಕ ನೋಡಿದ್ರೆ ನೀರಾಟ ಆಡ್ತಾನೆ.

೩೨. ತೀನ್ ಚುಲ್ಲಾ (ಒತಿ) ಉತ್ರೇಲೀನೆ ಏಕ್ ಮುಠೀ ಬರ್ ಹರಬರಾ
ದಿನ್ ಗಾಂಡ್ ಮಾರನೋ

ಅನು: ಮೂರು ಒಲೆ ಇಳಿದರೆ, ಒಂದು ಹಿಡಿ ಉರಕಡ್ಲಿ ಕೊಟ್ಟು
ಯಾರ ಬೇಕಾದರೂ ಕರಕಂಡು ಹೋಗ (ಸಂಭೋಗಿಸ)ಬಹುದು.

೩೩. ನ್ಯಾಯ ದಾರಿ ಬಾಯಿ ಕೋರಿ ಗಾಂಡ್ ಜಾಢೇ ಬಾಂದಿ
ಆವ್ ತಾ ಬೇ ಚೋದುಣು, ಜಾತಾಬೇ ಚೋದುಣು

ಅನು: ನ್ಯಾಯಾದಿಶನ ಹೆಂಡತಿಯನ್ನು ಗಿಡಕ್ಕೆ ಕಟ್ಟಿದ್ದಾರೆ
ಬರೊರು ಮಾಡಬಹುದು, ಹೋಗೋರು ಮಾಡಬಹುದು.

೩೪. ಮಾರಿ ಚಾರಟ್ರಿ ನರದ್ ಕಟಿನಾಯಿಗೀತೋ
ಹಬಾಳಾನೇ ಸಿಡಿಲಗಾವೊಂಗ
ಜಮೀನ್‌ಮೇ ಗಯಿತೂ ಕುದಳಿ ಲಗಾಮೊಂಗ

ಅನು: ನಮ್ಮ ನಾಕೆಂಟು ಕಾಯಿದೆಯ ಹೆಣ್ಣು ಎಲ್ಲಾದ್ರು ಹೋಡಿಹೋದ್ರೆ
ಆಕಾಶಕ್ಕೆ ಏಣಿ ಹಾಕುತೇವೆ
ಭೂಮೀನ ಗುದ್ದಲಿಯಿಂದ ಅಗಿತೀವಿ.

೩೫. ಸಲಾಡಿ ತಾರೊ ಆಯಿ ಬಲಾಡಿ

ಅನು: ಬೀಸೋಕಲ್ಲು (ಕೆಳಗಿನ ಅರ್ಥ) ನಿಮ್ಮ ತಾಯಿ ಬೆಕ್ಕು

೩೬. ಲೋಡಿಯೋ ತಾರೋ ಬೇಡಿಯೋ

ಅನು: ದುಂಡಕಲ್ಲು ನಿಮ್ಮಪ್ಪ ಬೊಡ

೨೭. ಕಾಮ್ ಕೋನಿ ಧಂದೋ
ಗಾಂಡ್ ಮಾರೆ ಅಂದೋ

ಅನು: ಕೆಲಸವಿಲ್ಲದ ಉದ್ಯೋಗಿ
ಮುಕ್ಕಟ್ಟು ಕತ್ತಲಾಗಿ

೨೮. ಮಾಜಾ ನಾನೆ ಲಾಲಾಜಂಗೆ
ನಿತ್ತ ಕಾತೋ ತೀನ್‌ವಾಗೆ

ಅನು: ನನ್ನ ಹೆಸರು ಲಾಲಜಂಗೆ
ನಿತ್ಯ ತಿಂತೀನಿ ಮೂರುಹುಲಿ

## ಕಲೆ

### ಹಚ್ಚೆ

ಮನುಷ್ಯ ತನ್ನ ದೇಹದ ಮೇಲೆ ಸೂಜಿ ಚುಚ್ಚುವ ಮೂಲಕ ಅನೇಕ ಬಗೆಯ ಚಿತ್ರ ಹಾಗೂ ಹೆಸರುಗಳನ್ನು ರಚಿಸಿ ಅದಕ್ಕೆ ಹಸಿರು ಗಿಡಮೂಲಿಕೆಗಳಿಂದ ತಯಾರಿಸಿದ ರಸವನ್ನು ಲೇಪಿಸುವುದರಿಂದ ಹಳದಿ ಮಿಶ್ರಿತ ಹಸಿರು ಕಲೆಗಳು ದೇಹದ ಮೇಲೆ ಶಾಶ್ವತವಾಗಿ ಉಳಿಯುತ್ತವೆ. ಇದಕ್ಕೆ ಪಚ್ಚೆ, ಹಚ್ಚೆ ಎಂಬ ಹೆಸರು ಬಂದಿದೆ. ಕರ್ನಾಟಕದ ವಿವಿಧ ಪ್ರದೇಶಗಳಲ್ಲಿ ವಾಸಿಸುವ ಜನಸಮುದಾಯಗಳು ಆಯಾ ಪ್ರದೇಶದ ಭಾಷೆಗೆ ಅನುಗುಣವಾಗಿ ಅಣಚೆ, ಹಣಚೆ, ಹಂಚೆ, ಅಂಚಿ, ಅಚ್ಚೆ, ಅಣ್ಣೆ, ಎಂತಲೂ ಕರೆಯುವರು. ಕನ್ನಡದ 'ಹಚ್ಚೆ' ಎಂಬ ಶಬ್ದಕ್ಕೆ ಇಂಗ್ಲಿಷ್‌ನಲ್ಲಿ 'Tattoo' ಎಂದು ಕರೆಯುವರು.

"Not one great country can be named from polar resions in the North to Newzaland in the South in which the aborigines do not Tattoo themselves"[೩] ಎಂಬ ಡಾರ್ವಿನ್‌ನ ಮಾತುಗಳು ಸತ್ಯವೆನಿಸುತ್ತವೆ. ಅಷ್ಟೇ ಅಲ್ಲ ಭಾರತಕ್ಕೆ ಬಂದ ವಿದೇಶಿ ಪ್ರವಾಸಿಗರಾದ ಮಾರ್ಕೋಪೋಲೋ, ನಿಕಲೋಕೊಂಟಿ, ತಾವರ್ ನಿಯರ್‌ರಂತವರು ಬಂಜಾರ (ಲಂಬಾಣಿ) ಜನಾಂಗದ ಹೆಂಗಸರ ಮುಂಗೈಯಿಂದ ತೋಳಿನವರೆಗೂ ಹಾಕಿಸಿಕೊಂಡ 'ಹಚ್ಚೆ' ಕಲೆಯನ್ನು ಕಂಡು ಮೆಚ್ಚಿಕೊಂಡು ದಾಖಲಿಸಿರುವುದಾಗಿ ತಿಳಿದುಬರುತ್ತದೆ. ಹೀಗೆ ಜಗತ್ತಿನಾದ್ಯಂತ ವಾಸಿಸುವ ಜನವರ್ಗವು ಹಚ್ಚೆ 'ಕಲೆ'ಯನ್ನು ಧಾರ್ಮಿಕ ವಿಧಿ-ವಿಧಾನಗಳ ಹಿನ್ನೆಲೆಯಲ್ಲಿ ಅತ್ಯಂತ ವ್ಯಾಪಕ ಹಾಗೂ ಜನಪ್ರಿಯವಾಗಿ ಉಳಿಸಿಕೊಂಡು ಬರುತ್ತಿರುವುದನ್ನು ನಾವು ಇಂದೂ ಸಹ ಕಾಣಬಹುದಾಗಿದೆ.

ಜನಪದ ಕಲೆಗಳಲ್ಲಿ 'ಹಚ್ಚೆ'ಗೆ ವಿಶಿಷ್ಟ ಸ್ಥಾನವಿದೆ. ವ್ಯಕ್ತಿ ಸತ್ತ ನಂತರ ತಮ್ಮೊಡನೆ ಬರುವ ಒಂದೇ ಒಂದು ಆಸ್ತಿ ಅಥವಾ ಸಂಗಾತಿಯೆಂದರೆ 'ಹಚ್ಚೆ' ಗುರುತು ಮಾತ್ರ ಎಂಬ ಬಲವಾದ ನಂಬಿಕೆ ಜನಪದರಿಗಿದ್ದು

'ಸತ್ತಾರೆ ನಮಕೂಟೆ ಮತ್ತೇನು ಬರಬಹುದು?
ಹಚ್ಚೀಯ ಬಟ್ಟು ಸುಲಿಹಲ್ಲು
ಕಟ್ಟೀರೋ ತುರುಬು'
ಅತ್ತೆ ಬೈದರೆ ಒಪ್ಪು ಮಾವ ಬೈದರೆ ಒಪ್ಪು

ಹಚ್ಚೀಯ ಬೊಟ್ಟು ಹಣೆಗೊಪ್ಪು ತಂಗ್ಯೆವ್ವ
ಚೊಚ್ಚಲ ಬಸುರು ನಿನಗೊಪ್ಪು.

ಹೀಗೆ 'ಹಚ್ಚೆ' ಬಗೆಗಿನ ನಂಬಿಕೆಗಳು ಜನಪದರ ಜೀವನದಲ್ಲಿ ಹಾಸುಹೊಕ್ಕಾಗಿ ಬೆಳೆದು ಬಂದಿದೆ ಎಂಬುದನ್ನು ಈ ಮೇಲಿನ ಪದ್ಯಗಳು ದೃಢಪಡಿಸುತ್ತವೆ. 'ಹಚ್ಚೆ ಹೊಯ್ಯಿಸಿಕೊಳ್ಳದ ಹೆಂಗಸರಿಲ್ಲ; ಪಂಚೆ ಕಟ್ಟದ ಗಂಡಸರಿಲ್ಲ' ಎಂಬ ಗಾದೆಯಂತೆ ಪ್ರತಿಯೊಂದು ಸಮುದಾಯದಲ್ಲೂ ಹಚ್ಚೆ ಹಾಕಿಸಿಕೊಳ್ಳುವುದು ಒಂದು ಸಂಪ್ರದಾಯವಾಗಿ ಬೆಳೆದುಕೊಂಡು ಬಂದಿದೆ.

ಕರ್ನಾಟಕದಲ್ಲಿ ವಾಸಿಸುವ ಕೊರವಂಜಿಗಳು, ದೊಂಬರು, ಕೊರಮರು, ಕುಕ್ಕೆಕೊರಮರು, ಗೊಂಬೆರಾಮರು, ಇನ್ನಿತರ ಸಮುದಾಯದವರು ಹಚ್ಚೆ ಹೊಯ್ಯುವುದನ್ನು ಉಪಕಸುಬನ್ನಾಗಿಸಿಕೊಂಡಿದ್ದಾರೆ. ಇವರು ಹಚ್ಚೆ ಹೊಯ್ಯುವ ಕಲೆಯಲ್ಲಿ ಪ್ರಸಿದ್ಧರು. ಹಾಗಾಗಿ ಜನ ಇವರನ್ನು ವಿಶೇಷವಾಗಿ ಗುರುತಿಸುತ್ತಾರೆ.

ಹಂಚಿ ಬಟ್ಟಿನ ಗರತಿ ಹಾದ್ಹೋಗು ನನ್ನ ಓಣ್ಯಾಗ
ಚೊಚ್ಚಲ ಬಸರು ನನ ಮಗಳು
ಚೊಚ್ಚಲ ಬಸರು ನನ ಮಗಳು ಕೈಯಾಗ
ಹಂಪಿಯ ತೇರ ಬರಿಬಾರೆ

ಹಚ್ಚೆ ಹಾಕುವವರನ್ನು ಜನಸಾಮಾನ್ಯರು ಅತ್ಯಂತ ಪ್ರೀತ್ಯಾದರಗಳಿಂದ ಸ್ವಾಗತಿಸುವುದನ್ನು ನೋಡಿದರೆ ಹಚ್ಚೆ ಹಾಕುವವರಿಗೆ ಸಮಾಜದಲ್ಲಿ ವಿಶಿಷ್ಟ ಸ್ಥಾನಮಾನಗಳಿರುವುದು ಕಂಡುಬರುತ್ತದೆ. ಜನಸಾಮಾನ್ಯರಲ್ಲಿ ಹಚ್ಚೆ ಬಗೆಗೆ ನಂಬಿಕೆ ಇರುವುದರಿಂದಲೇ ಇಂದೂ ಸಹ ಈ ಕಲೆ ಉಳಿದುಕೊಂಡು ಬರುತ್ತಿದೆ.



ಗೋಸಂಗಿಗಳ ಹಚ್ಚೆ ಚಿತ್ತಾರಗಳು

"ನ್ಯೂಝಿಲ್ಯಾಂಡಿನ ಮವೋರಿ ಪ್ರಮುಖರಿಗೆ ಹಚ್ಚೆ ಭಯೋತ್ಪಾದಕತೆಯನ್ನುಂಟು ಮಾಡುತ್ತದೆ ಎನ್ನುವ ನಂಬಿಕೆ ಇತ್ತು. ಆದರೆ ವ್ಯಾಲಿಸ್ ದ್ವೀಪವಾಸಿಗಳಿಗೆ ಇದೊಂದು ಗೌರವದ ಸಂಕೇತವಾಗಿತ್ತು. ಫೆಸಿಫಿಕ್ ಸಾಗರದ ದ್ವೀಪವಾಸಿಗಳಿಗೆ ಇದೊಂದು ಅಲಂಕಾರಿಕ ಸಾಧನವಾದರೆ, ಅಮೇರಿಕೆಯ ರೆಡ್ ಇಂಡಿಯನ್ನರಿಗೆ ಇದು ಲೈಂಗಿಕ ಸೌಂದರ್ಯ ಮತ್ತು ಸಾಹಸ ಪ್ರವೃತ್ತಿಯ ಪ್ರತೀಕ ಎನ್ನುವ ನಂಬಿಕೆ ಇದೆ. ಹೆರೋಡೋಟಸ್ ಎನ್ನುವ ಇತಿಹಾಸ ತಜ್ಞ ಥ್ರೇಸಿಯಾದ ಮಹಿಳೆಯರಿಗೆ ಹಚ್ಚೆ ದೊಡ್ಡಸ್ತಿಕೆಯ ಕುರುಹು ಆಗಿತ್ತೆಂಬುದನ್ನು ಗುರುತಿಸಿದ್ದಾರೆ. ಪಾಲಿನೇಷಿಯನ್ ಸ್ತ್ರೀ ಪುರುಷರಿಗೆ ಹಚ್ಚೆ ಪರಸ್ಪರ ಆಕರ್ಷಣೆಯನ್ನು ಜಾಗೃತಗೊಳಿಸುತ್ತದೆ... ಕನ್ನಡಿಗರಿಗೆ, ಅಷ್ಟೇ ಏಕೆ ದ್ರಾವಿಡರಿಗೆ ಹಚ್ಚೆ ಮುತ್ತೈದತನದ ಮತ್ತು ಸೌಭಾಗ್ಯದ ಸಂಕೇತವಾಗಿದೆ. ಬರ್ಮಾ ಮತ್ತು ರೋಮ್ ದೇಶದ ದೊರೆಗಳು ಅಪರಾದಿಗಳಿಗೆ ಮತ್ತು ಗುಲಾಮರಿಗೆ ಬಲಾತ್ಕಾರವಾಗಿ ಹಚ್ಚೆ ಹಾಕಿಸಿ, ಅವರ ಅಪರಾಧದ ವಿವರಗಳನ್ನು ಬರೆಯಿಸುತ್ತಿದ್ದರು. ಉತ್ತರ ಕರ್ನಾಟಕದಲ್ಲಿ ಜೇಲಿಗೆ ಹೋಗಿ ಬಂದವರ ಕಾಲಿನ ಮೇಲೆ ಹಚ್ಚೆ ಹಾಕಿಸುತ್ತಿದ್ದರು ಎಂಬ ಸಂಗತಿಯನ್ನು ದಾಖಲಿಸಿದ್ದಾರೆ."[೪] ಈ ರೀತಿಯಾಗಿ ಜಗತ್ತಿನಾದ್ಯಾಂತ ವಿವಿಧ ಜನವರ್ಗಗಳು ವಿವಿಧ ಉದ್ದೇಶಗಳಿಗಾಗಿ, ವಿವಿಧ ನಂಬಿಕೆಗಳ ಹಿನ್ನೆಲೆಯಲ್ಲಿ 'ಹಚ್ಚೆ' ಕಲೆಯನ್ನು ರೂಢಿಸಿಕೊಂಡಿರುವುದು ತಿಳಿದುಬರುತ್ತದೆ.

ಸಾಮಾನ್ಯವಾಗಿ ಕಸೂತಿ ಹಾಕಲು ಬಳಸುವ ಸೂಜಿಗಳನ್ನೇ ಹಚ್ಚೆ ಹೊಯ್ಯಲು ಬಳಸುವರು. ಅವರವರ ಅನುಕೂಲಕ್ಕೆ ತಕ್ಕಷ್ಟು ಸೂಜಿಗಳನ್ನು ಜೋಡಿಸಿಕೊಂಡು ದಾರದಿಂದ ಬಿಗಿಯಾಗಿ ಕಟ್ಟಿರುತ್ತಾರೆ. ಇದಕ್ಕೆ ಚಕ್ರ ಎಂದು ಕರೆಯುವರು. ಹಚ್ಚೆಗೆ ಬಳಸುವ ಬಣ್ಣ ತಯಾರಿಕೆ ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿರುತ್ತದೆ. ಹಚ್ಚೆ ಬರೆಯುವ ಮಸಿಯನ್ನು ಅರಿಶಿಣ ಔಡಲೆಣ್ಣೆಯನ್ನು ಬಳಸಿ ಕೆಲವರು ಹಳದಿ ಮಿಶ್ರಿತ ಹಸಿರು ಬಣ್ಣವನ್ನು ತಯಾರಿಸಿದರೆ ಇನ್ನೂ ಕೆಲವರು ಬಳ್ಳಿಕಾಯಿ, ಎಲೆಯರಸ ಮತ್ತು ಬೇರಿನ ರಸಗಳಿಂದ ಹಸಿರು ಮಿಶ್ರಿತ ಹಳದಿ ಬಣ್ಣವನ್ನು ತಯಾರಿಸುವರು. ಹೀಗೆ ತಯಾರಿಸಿದ ಬಣ್ಣ ಶಾಶ್ವತವಾಗಿ ದೇಹದ ಮೇಲೆ ಉಳಿಯಬೇಕು. ಮತ್ತು ಅದು ದೇಹಕ್ಕೆ ಬರುವ ನಂಜನ್ನು ತಡೆಯುವ ಶಕ್ತಿಯನ್ನು ಹೊಂದಿರಬೇಕು ಎಂಬ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಬಣ್ಣವನ್ನು ತಯಾರಿಸುತ್ತಾರೆ. ಹೀಗೆ ತಯಾರಿಸಿದ ಬಣ್ಣವನ್ನು ಹಚ್ಚೆ ಹಾಕಲು ಬಳಸುವರು.

'ಹಚ್ಚೆ' ಒಂದು ವಿಶಿಷ್ಟವಾದ ಪ್ರಾಚೀನ ಕಲೆಯಾಗಿದ್ದು ಹೆಚ್ಚು ಕಡಿಮೆ ಎಲ್ಲಾ ಜಾತಿ ಜನಾಂಗದವರಲ್ಲಿ ಧಾರ್ಮಿಕ ವಿಧಿವಿಧಾನಗಳ ಹಿನ್ನೆಲೆಯಲ್ಲಿ ಉಳಿದುಕೊಂಡು ಬರುತ್ತಿರುವುದನ್ನು ಕಾಣಬಹುದು. ಒಂದು ಕಾಲಕ್ಕೆ ಸ್ತ್ರೀ-ಪುರುಷರೆಂಬ ಲಿಂಗ ಬೇಧವಿಲ್ಲದೆ ಹಚ್ಚೆಯನ್ನು ಹಾಕಿಸಿಕೊಳ್ಳಲು ಮುಂದಾಗುತ್ತಿದ್ದರು. ಹೀಗೆ ಹೆಚ್ಚು ಹಾಕಿಸಿಕೊಳ್ಳುವುದರ ಹಿನ್ನೆಲೆ ಏನೇ ಇದ್ದರೂ ತಮ್ಮ ಸೌಂದರ್ಯ ವರ್ಧನೆಗಾಗಿಯೇ ಇದನ್ನು ಹೆಚ್ಚು ಜನ ಅವಲಂಬಿಸಿದ್ದರೆಂದು ಕಾಣುತ್ತದೆ.

**ಗೋಸಂಗಿಗಳಲ್ಲಿ ಹಚ್ಚೆ ಕಲೆ :** ಇತರ ಸಮುದಾಯಗಳಲ್ಲಿಯಂತೆ ಗೋಸಂಗಿಗಳಲ್ಲೂ ಸಹ ಗಂಡು-ಹೆಣ್ಣು ಎಂಬ ಬೇಧ ಭಾವವಿಲ್ಲದೆ ಹಚ್ಚೆ ಹಾಕಿಸಿಕೊಳ್ಳುವುದನ್ನು ಒಂದು ಸಂಪ್ರದಾಯವಾಗಿ ರೂಢಿಸಿಕೊಂಡು ಬಂದಿರುವುದು ಕಂಡುಬರುತ್ತದೆ. 'ಹಚ್ಚೆ' ಸೌಭಾಗ್ಯದ ಹಾಗೂ ಪಾವಿತ್ರತೆಯ ಕುರುಹು ಎಂಬ ಭಾವನೆ ಗೋಸಂಗಿಗಳಲ್ಲಿದೆ. ಜೊತೆಗೆ ಸೌಂದರ್ಯದ ಪ್ರಜ್ಞೆಯೂ ಸಹ ಇದರಲ್ಲಡಗಿದೆ. ಮದುವೆಗೂ ಮುಂಚೆ ಹಚ್ಚೆ ಹಾಕಿಸಿಕೊಳ್ಳುವುದು ಗೋಸಂಗಿಗಳಲ್ಲಿ ಕಡ್ಡಾಯ. ಹಚ್ಚೆ ಹಾಕಿಸಿಕೊಳ್ಳದಿದ್ದರೆ ಮೋಕ್ಷವಿಲ್ಲವೆಂಬ ಭಾವನೆ ಇರುವುದರಿಂದ ಎಲ್ಲರೂ ಕಡ್ಡಾಯವಾಗಿ ಹಚ್ಚೆಯನ್ನು ಹಾಕಿಸಿಕೊಳ್ಳುವರು.

ಗೋಸಂಗಿ ಮಹಿಳೆಯರು ಸಾಮಾನ್ಯವಾಗಿ ಹಣೆ, ಗಲ್ಲ, ತೋಳು, ಹುಬ್ಬುಗಳ ಎರಡೂ ಕಡೆಗೆ, ಮೊಳಕೈ, ಮುಂಗೈ, ತೊಡೆ, ಪಾದ, ನಡು, ಬೆನ್ನು ಮುಂತಾದ ದೇಹದ ಇತರೆ ಭಾಗಗಳಿಗೆ ಅತ್ಯಂತ ಕಲಾತ್ಮಕವಾಗಿ ವಿವಿಧ ಚಿತ್ರಗಳ ಹಚ್ಚೆಗಳನ್ನು ಹಾಕಿಸಿಕೊಳ್ಳುವರು. ಹೀಗೆ ಹಾಕಿಸಿಕೊಳ್ಳುವ ಚಿತ್ರಗಳಲ್ಲಿ ಕೆಲವು ನಂಬಿಕೆಗಳನ್ನು ಆಧರಿಸಿದ ಚಿತ್ರಗಳಾದರೆ ಇನ್ನೂ ಕೆಲವು ಸೌಂದರ್ಯ ವರ್ಧನೆಗೆ ಸಂಬಂದಿಸಿದ ಚಿತ್ರಗಳಾಗಿರುತ್ತವೆ. ಈ ಎಲ್ಲಾ ಹಚ್ಚೆ ಚಿತ್ರಗಳಿಗೂ ಅವರದೇ ಆದ ನಂಬಿಕೆಗಳನ್ನು ಆರೋಪಿಸಿಕೊಂಡಿದ್ದಾರೆ. ಉದಾಹರಣೆಗೆ ಚೇಳಿನ ಚಿತ್ರಹಾಕಿಸಿಕೊಂಡರೆ ಚೇಳು ಕಚ್ಚುವುದಿಲ್ಲ. ಒಲೆ ಗುಂಡಿನ ಚಿತ್ರ ಹಾಕಿಸಿಕೊಂಡರೆ ಆಕೆ ಮಾಡಿದ ಅಡಿಕೆ ಕೆಡುವುದಿಲ್ಲ. ಹಣೆಬೊಟ್ಟಿನ ಹಚ್ಚೆ ಹಾಕಿಸಿಕೊಳ್ಳುವುದು. ಮುತ್ತೈದೆತನದ ಸಂಕೇತವೆಂಬ ಭಾವನೆ ಇದರಲ್ಲಡಗಿದೆ. ಅಷ್ಟೇ ಅಲ್ಲದೆ, ದುಂಡು ಮಲ್ಲಿಗೆ, ಕಮಲದ ಹೂ, ಸೀತೆ ಸೆರಗು, ಮುತ್ತಿನ ಬಳ್ಳಿ, ಜೋಗಿ ಜಡೆ, ಗೌರಿ ಗದ್ದಿಗೆ, ಬಾಸಿಂಗ, ಶಾವಂತಿಗೆ ಹೂ, ಮಾವಿನೆಲೆ, ಹೀಗೆ ದೇಹದ ವಿವಿಧ ಭಾಗಗಳಿಗೆ ವಿವಿಧ ನಮೂನೆಯ ಹಚ್ಚೆ ಚಿತ್ರಗಳನ್ನು ಹಾಕಿಸಿಕೊಳ್ಳುತ್ತಿರುವುದು ಕಂಡುಬರುತ್ತದೆ. ಪುರುಷರೂ ಸಹ ಹಚ್ಚೆ ಹಾಕಿಸಿಕೊಳ್ಳುವುದರಲ್ಲಿ ಹಿಂದೆ ಬಿದ್ದಿಲ್ಲ. ಇವರು ಸಾಮಾನ್ಯವಾಗಿ ತೋಳು, ಎದೆ, ಬೆನ್ನು, ಮೊಳಕೈ, ತೊಡೆ ದೇಹದ ಇನ್ನಿತರೆ ಭಾಗಗಳಿಗೆ ಹಚ್ಚೆಯನ್ನು ಹಾಕಿಸಿಕೊಳ್ಳುವರು.

ಪುರುಷರು ಹಾಕಿಸಿಕೊಳ್ಳುವ ಹಚ್ಚೆಯ ಚಿತ್ರಗಳೆಂದರೆ ನವಿಲು, ತ್ರಿಶೂಲ, ಖಡ್ಗ, ಸ್ವಸ್ತಿಕ್, ಶಂಕ, ನಕ್ಷತ್ರ, ಹದ್ದು, ಗಿಳಿ, ಮೀನು, ಜರಿಹುಳ, ಹುಲಿ ಉಗುರು, ಹಾವು ಆಂಜನಯ್ಯನ ಚಿತ್ರಗಳನ್ನು ಹಾಕಿಸಿಕೊಳ್ಳುವರು. ಜೊತೆಗೆ, ಭೈರವ, ಅಂಬಾಭವಾನಿ, ಚಾಮುಂಡಿ, ಮೈಲಾರ, ಸಿತಳಾ, ಲಕ್ಷ್ಮಿ ಇನ್ನಿತರೆ ದೈವಗಳ ಹೆಸರುಗಳನ್ನು ಹಾಗೂ ತಮಗೆ ಪ್ರಿಯರಾದವರ ಹೆಸರುಗಳನ್ನು ಸಹ ಹಾಕಿಸಿಕೊಳ್ಳುವರು. ಹೀಗೆ ಹಚ್ಚೆಯನ್ನು ಸೌಭಾಗ್ಯದ ಕುರುಹಾಗಿ, ಪಾವಿತ್ರತೆಯ ಕುರುಹಾಗಿ, ಸೌಂದರ್ಯದ ಅಭಿವ್ಯಕ್ತಿಯಾಗಿ ಶರೀರದ ನಾನಾ ಭಾಗಗಳಿಗೆ ಹಾಕಿಸಿಕೊಳ್ಳುತ್ತಿರುವುದನ್ನು ನಾವಿಂದು ಕಾಣಬಹುದಾಗಿದೆ.

**ಹಚ್ಚೆಯ ಬಗೆಗಿರುವ ನಂಬಿಕೆಗಳು**

೧. ಮುಂಗೈ ಮೇಲೆ ಒಲೆಗುಂಡು ಹಚ್ಚೆ ಹಾಕಿಸಿಕೊಂಡ ಸ್ತ್ರೀ ಮಾಡಿದ ಅಡಿಗೆ ಕೆಡುವುದಿಲ್ಲ ಹಾಗೂ ಹಳಸುವುದಿಲ್ಲವೆಂಬ ನಂಬಿಕೆ ಇದೆ.

೨. ಸಂಪಾದಿಸಿದ ಆಸ್ತಿ, ಒಡವೆ, ವಸ್ತುಗಳಾವವು ಸತ್ತಾಗ ನಮ್ಮ ಹಿಂದೆ ಬರುವುದಿಲ್ಲ. ಹೀಗಾಗಿ ಸತ್ತಾಗ ನಮ್ಮ ಹಿಂದೆ ಬರುವ ಏಕೈಕ ಆಸ್ತಿ ಎಂದರೆ ಹಚ್ಚೆ ಒಂದೇ ಎಂಬ ಬಲವಾದ ನಂಬಿಕೆ ಗೋಸಂಗಿಗಳಲ್ಲಿ ಬೇರೂರಿದೆ.

೩. ಚೇಳು, ಹಾವು ಮುಂತಾದ ವಿಷಜಂತುಗಳ ಚಿತ್ರಗಳನ್ನು ಹಾಕಿಸಿಕೊಂಡರೆ ಅವು ಹತ್ತಿರ ಸುಳಿಯುವುದಿಲ್ಲ ಎಂಬ ನಂಬಿಕೆ ಇದೆ.

೪. ಹಚ್ಚೆ ಹಾಕಿಸಿಕೊಂಡರೆ ತಲೆಶೂಲೆ, ವಾತ, ನರಗಳಿಗೆ ಸಂಬಂಧಿಸಿದ ರೋಗಗಳು ಬರುವುದಿಲ್ಲ ಎಂಬ ಭಾವನೆ ಇದೆ.

೫. ದೇವರ ಹೆಸರು, ಅಥವಾ ದೇವರ ಚಿನ್ಹೆಗಳ ಚಿತ್ರಗಳನ್ನು ಹಾಕಿಸಿಕೊಂಡರೆ ದುಷ್ಟಶಕ್ತಿಗಳು ಹತ್ತಿರ ಸುಳಿಯುವುದಿಲ್ಲವೆನ್ನುತ್ತಾರೆ.

೬. ಹಚ್ಚೆ ಹಾಕಿಸಿಕೊಂಡವರಿಗೆ ಮಾಟ, ಮಂತ್ರ, ಮದ್ದುಗಳ್ಯಾವು ತಟ್ಟುವುದಿಲ್ಲ ಎಂಬ ಭಾವನೆ ಇದೆ.

೭. ಹಚ್ಚೆ ಹಾಕಿಸಿಕೊಂಡ ಹೆಣ್ಣಿಗೆ ಮುತ್ತೈದೆತನ ಪ್ರಾಪ್ತವಾಗುತ್ತದೆ ಎಂಬ ಭಾವನೆ ಇದೆ.

೮. ಹಚ್ಚೆ ಹಾಕಿಸಿಕೊಂಡ ವ್ಯಕ್ತಿ ಸತ್ತಾಗ ಹೂತಿಟ್ಟ ಶವವನ್ನು ನಾಯಿ ನರಿ ಮುಟ್ಟುವುದಿಲ್ಲ ಎಂಬ ನಂಬಿಕೆ ಇವರಲ್ಲಿದೆ.

೯. ಹಚ್ಚೆ ಹಾಕಿಸಿಕೊಂಡವರಿಗೆ, ಕೆಟ್ಟ ಕನಸುಗಳು ಬೀಳುವುದಿಲ್ಲವಂತೆ.

ಹೀಗೆ ವಿವಿಧ ನಂಬಿಕೆಗಳ ಹಿನ್ನೆಲೆಯಲ್ಲಿ ಹುಟ್ಟಿಕೊಡ ಹಚ್ಚೆ ಕಲೆ ಪ್ರಪಂಚದಾದ್ಯಂತ ಪ್ರಚಾರದಲ್ಲಿದೆ.

## ಗೋಸಂಗಿಗಳಲ್ಲಿ ಶಿಕ್ಷಣ

ಒಂದು ಸದೃಡ ಸಮಾಜ ನಿರ್ಮಾಣ ಕಾರ್ಯದಲ್ಲಿ, ಒಂದು ರಾಷ್ಟ್ರ ನಿರ್ಮಾಣದಲ್ಲಿ ಹಾಗೂ ಅದರ ಸಂಪೂರ್ಣ ಪ್ರಗತಿಗೆ ಶಿಕ್ಷಣ ಪ್ರಬಲ ಪಾತ್ರವಹಿಸುತ್ತದೆ ಎಂಬ ತಜ್ಞ ಅಭಿಪ್ರಾಯಗಳು ಸಾರಿ ಹೇಳುತ್ತವೆ. ಮೊದಲ ಜಗತ್ತಿನ ದೇಶಗಳ ಅಭಿವೃದ್ಧಿಗೆ ಶೈಕ್ಷಣಿಕ ಕಾರಣಗಳನ್ನು ಹೇಳುತ್ತಾ ತೃತೀಯ ಜಗತ್ತಿನ ರಾಷ್ಟ್ರಗಳ ಹಿಂದುಳಿದಿರುವಿಕೆಗೆ ಶಿಕ್ಷಣವೇ ಪ್ರಮುಖ ಕಾರಣವೆಂದು ದೂರುವುದು ತಿಳಿದುಬರುತ್ತದೆ. ಭಾರತದಲ್ಲಿ ಬಹುಮುಖ್ಯವಾಗಿ ಅನಕ್ಷರತೆಯು ದೇಶ ಹಿಂದುಳಿದಿರುವಿಕೆಗೆ ಶಿಕ್ಷಣವೂ ಕಾರಣವೆಂದು ನಂಬಲಾಗುತ್ತದೆ. ಇದರಿಂದ ದೇಶದ ಸಾಮಾಜಿಕ, ಆರ್ಥಿಕ, ರಾಜಕೀಯ ಅಭಿವೃದ್ಧಿಗೆ ನಿರಕ್ಷರತೆಯೂ ಒಂದು ಪ್ರಬಲ ಕಾರಣವೆಂದು ನಂಬಲಾಗುತ್ತದೆ. ಭಾರತದಲ್ಲಿ ಶತ ಶತಮಾನಗಳಿಂದಲೂ ಒಂದು ಪ್ರತಿಷ್ಟಿತ ಜಾತಿ ಶೂದ್ರ, ದಲಿತ ಮೊದಲಾದ ಕೆಳಜಾತಿ ಆದಿವಾಸಿಗಳನ್ನು ಶಿಕ್ಷಣದಿಂದ ವಂಚಿಸಿತ್ತು. ಇದರ ಪರಿಣಾಮವಾಗಿ ಅದನ್ನೇ ದೌರ್ಬಲ್ಯವೆಂದು ಭಾವಿಸಿ ಕೆಳಜಾತಿಗಳ ಮೇಲೆ ಮೇಲ್ಜಾತಿಗಳು ದಯನೀಯವಾಗಿ ಶೋಷಣೆಗೆ ಒಳಗು ಮಾಡಿದವು.

ಆಧುನಿಕವಾದ ಮನಸ್ಸುಗಳು, ಆದಿವಾಸಿ, ಬುಡಕಟ್ಟು ಸಮುದಾಯಗಳ ಹಿಂದುಳಿದಿರುವಿಕೆಗೆ ಶಿಕ್ಷಣವೇ ಪ್ರಮುಖ ಕಾರಣವೆಂದು ವೈಚಾರಿಕ ಧಿಮಾಕಿನಿಂದ ಬೀಗುತ್ತವೆ. ಆದಿವಾಸಿ ಸಮುದಾಯಗಳ

ಅಧ್ಯಯನಕ್ಕೆ ತೊಡಗುವವರು ಬಹುಶಃ ಮಧ್ಯಮ ಮತ್ತು ಮೇಲ್ವರ್ಗಗಳವರಾಗಿರುವುದರಿಂದ ಇಂತಹ ವೈಚಾರಿಕ ಮಾತುಗಳು ಸಹಜವಾಗಿಯೇ ಸೃಷ್ಟಿಗೊಳ್ಳುತ್ತವೆ. ಈ ನೆಲದ ಆದಿಮ ಸಮುದಾಯಗಳು ಔಪಚಾರಿಕ ಶಿಕ್ಷಣಕ್ಕೆ ಒಳಗಾಗದೆ ಇದುವರೆಗೂ ಸಾಂಸ್ಕೃತಿಕವಾಗಿ ವೈವಿಧ್ಯಮಯವಾಗಿ ಇಂದಿನವರೆಗೆ ಬದುಕುಳಿದಿರುವುದು ಔಪಚಾರಿಕ ಶಿಕ್ಷಣದಿಂದಲ್ಲವೆನ್ನುವುದು ವೈಚಾರಿಕ ಜಗತ್ತಿನ ಕಣ್ಣಿಗೇಕೆ ಕಾಣುವುದಿಲ್ಲವೆಂಬುದು ಅರ್ಥವಾಗುತ್ತಿಲ್ಲ. ಬಹುಶಃ ಇಂತಹ ಚಿಂತನೆಗಳು ಹುಟ್ಟಿದ್ದೆ ವಸಾಹತುಶಾಹಿ ದೃಷ್ಟಿಕೋನದ ಮೂಸೆಯಲ್ಲಿ (ನಾನು ಬುಡಕಟ್ಟು ಸಮಾಜಗಳಿಗೆ, ಆದಿವಾಸಿಗಳಿಗೆ ಶಿಕ್ಷಣ ಬೇಕಿಲ್ಲವೆಂದು ವಾದಿಸುತ್ತಿಲ್ಲ ಎಂಬುದನ್ನು ಇಲ್ಲಿ ಗಮನಿಸಬೇಕು.) ಇವತ್ತು ಆಧುನಿಕ ಜಗತ್ತಿನ ಜೊತೆಗೆ ಮುಖಾಮುಖಿಯಾಗಬೇಕಾದರೆ ಯಾವುದೇ ಸಮುದಾಯಗಳಿಗೆ ಶಿಕ್ಷಣದ ಅಗತ್ಯವಿದೆ. ಹಾಗಾದರೆ ಬಡುಕಟ್ಟು ಸಮುದಾಯಗಳಿಗೆ ಶಿಕ್ಷಣದ ಅಗತ್ಯ ಯಾಕೆ? ಅದು ಯಾವ ಬಗೆಯದು ಇಂತಹ ಮೊದಲಾದ ಪ್ರಶ್ನೆಗಳು ಹುಟ್ಟಿಕೊಳ್ಳುತ್ತವೆ.

ಗೋಸಂಗಿ ಸಮುದಾಯ ಸರ್ವಾಂಗೀಣ ಅಭಿವೃದ್ಧಿಗೆ ಶಿಕ್ಷಣವೆ ಯಾಕೆ? ಶಿಕ್ಷಣ ಇಡೀ ಸಮುದಾಯದ ಅಗತ್ಯಗಳನ್ನು ಪೂರೈಸುತ್ತದೆಂದು ನಂಬುವುದಾದರೆ ಆ ಶಿಕ್ಷಣದ ಸ್ವರೂಪವೆಂತಹದು? ಗಾಂಧೀಜಿ ಹೇಳುವ ಮೂಲಶಿಕ್ಷಣವೇ? ವಸಾಹತುಶಾಹೀ ಆಡಳಿತ ಜಾರಿಗೆ ತಂದ ಶಿಕ್ಷಣವೆ? ಇವತ್ತಿನ ಕಂಪ್ಯೂಟರ್ ಶಿಕ್ಷಣವೆ? ಮಾಹಿತಿ ತಂತ್ರಜ್ಞಾನ ಕುರಿತು ಶಿಕ್ಷಣವೆ? ಶಿಕ್ಷಣದ ಮಾಧ್ಯಮವಾದರೂ ಯಾವುದು? ಇಂದು ಸರ್ಕಾರಗಳು ಸಾರ್ವಜನಿಕ ಶಿಕ್ಷಣವಾಗಿ ನೀಡುವ ಶಿಕ್ಷಣವನ್ನು ಗೋಸಂಗಿ ಸಮುದಾಯಕ್ಕೆ ನೀಡಿದರೆ, ಆ ಸಮುದಾಯ ಆ ಕ್ಷಣಕ್ಕೆ ಎದುರಿಸುವ ಸವಾಲುಗಳಾವುವು? ಗೋಸಂಗಿ ಸಮುದಾಯದ ಮೂಲಭೂತ ಸಮಸ್ಯೆಗಳೇನು? ಔಪಚಾರಿಕ ಶಿಕ್ಷಣದಿಂದ ಗೋಸಂಗಿ ಸಮುದಾಯಕ್ಕೆ ಉಪಯುಕ್ತತೆ ಯಾವ ಬಗೆಯದು? ಈ ಎಲ್ಲಾ ಪ್ರಶ್ನೆಗಳು ಸರಳವಾಗಿ ಕಂಡರೂ, ವಸ್ತುಸ್ಥಿತಿ ಸಂಕೀರ್ಣ ಸ್ವರೂಪದ್ದು.

ಗೋಸಂಗಿಗಳು ಮೂಲತಃ ಅಲೆಮಾರಿ ಸಮುದಾಯವಾದರಿಂದ ಆ ಸಮುದಾಯಕ್ಕೆ ಶಿಕ್ಷಣ ಒದಗಿಸುವುದು ಕಷ್ಟ ಸಾಧ್ಯ. ಆ ಕಾರಣಕ್ಕಾಗಿ ಸಮುದಾಯವನ್ನು ಒಂದು ನಿಶ್ಚಿತ ಪ್ರದೇಶದಲ್ಲಿ ವಾಸಿಸುವಂತೆ ಯೋಜನೆಯನ್ನು ಸರ್ಕಾರ ಸಂಘಸಂಸ್ಥೆಗಳು ರೂಪಿಸಬೇಕು. ಆ ನಂತರದಲ್ಲಿ ಸಮುದಾಯಕ್ಕೆ ಆರ್ಥಿಕ ಭದ್ರತೆಯನ್ನು ಒದಗಿಸುವುದು ಅತ್ಯವಶ್ಯಕ. ಈ ಹಿನ್ನೆಲೆಯಲ್ಲಿ ಆ ಸಮುದಾಯದ ಅಗತ್ಯತೆಗಳನ್ನು ಮನಗಂಡು ಅವುಗಳನ್ನು ಒದಗಿಸಿದ ತರುವಾಯ ಆ ಸಮುದಾಯಕ್ಕೆ ಬೇಕಾದ ಶಿಕ್ಷಣವನ್ನು ರೂಪಿಸಬೇಕು. ಗೋಸಂಗಿ ಸಮುದಾಯದ ಈ ಕಾಲಮಾನದ ಅಗತ್ಯತೆಗಳನ್ನ, ಅನಿವಾರ್ಯಗಳನ್ನ ಅರಿತು, ಅವುಗಳಿಗೆ ಪೂರಕವಾದ ಶಿಕ್ಷಣ ನೀಡುವುದು ಸೂಕ್ತ.

ನನ್ನ ಕ್ಷೇತ್ರಕಾರ್ಯದ ಸಮಯದಲ್ಲಿ ಗೋಸಂಗಿ ಸಮುದಾಯದ ಕೆಲವರು ಶಿಕ್ಷಣ ಪಡೆದ ಮಾಹಿತಿ ಈ ರೀತಿ ಕಂಡುಬಂದಿತು. ಪ್ರಾದೇಶಿಕವಾಗಿ ಗೋಸಂಗಿ ಸಮುದಾಯದಲ್ಲಿ ಶಿಕ್ಷಣವು ಭಿನ್ನತೆಗಳಿಂದ

ಾಡಿದೆ. ಎಲ್ಲಿ ಗೋಸಂಗಿಗಳು ಸ್ಥಿರವಾಗಿ ನೆಲೆಯೂರಿದ್ದಾರೆಯೋ ಅಂತಹ ಕಡೆ ಗೋಸಂಗಿಗಳು ಕ್ವಚಿತ್ತಾಗಿ ಕ್ಷಣಕ್ಕೆ ಒಳಗಾಗಿದ್ದಾರೆ. ದಾವಣಗೆರೆ, ಚಿತ್ರದುರ್ಗ, ಬಳ್ಳಾರಿ ಮೊದಲಾದ ನಗರಪ್ರದೇಶಗಳಿಗೆ ಹೊಂದಿಕೊಂಡ ಗೋಸಂಗಿ ಕಾಲೋನಿಗಳಲ್ಲಿ ಶಿಕ್ಷಣಮಟ್ಟ ಸುಧಾರಿಸಿರುವುದು ಕ್ಷೇತ್ರಕಾರ್ಯ ಸಂದರ್ಭದಲ್ಲಿ ಕಂಡುಬಂದಿದೆ. (ಶಿಕ್ಷಣ ಕೋಷ್ಟಕ ನೋಡಿ) ಎಲ್ಲಿ ಗೋಸಂಗಿಗಳು ಅಲೆಮಾರಿತನದ ಜೀವನವನ್ನು ಅನುಸರಿಸಿದ್ದಾರೆಯೋ ಅಂತಹ ಕಡೆ ಗೋಸಂಗಿಗಳಲ್ಲಿ ಶಿಕ್ಷಣ ಕಂಡುಬರುವುದಿಲ್ಲ. ಆರ್ಥಿಕವಾಗಿ ಸದೃಢವಾಗಿರುವ ಕುಟುಂಬಗಳಲ್ಲಿ ಉನ್ನತ ಶಿಕ್ಷಣವನ್ನು ಪಡೆದ ನಿದರ್ಶನಗಳಿವೆ. (ದಾವಣಗೆರೆ ಶಾಂತಿನಗರದ ಕಾಲೋನಿಯಲ್ಲಿ ವಾಸವಾಗಿರುವ ಬಾಬು ಅರ್ಥಶಾಸ್ತ್ರದಲ್ಲಿ ಎಂ.ಎ ಪದವಿ ಪಡೆದ ಏಕೈಕ ವ್ಯಕ್ತಿಯಾಗಿದ್ದಾರೆ.) ಗೋಸಂಗಿಗಳು ಮೂಲತಃ ಭೂರಹಿತ ಸಮುದಾಯ ಬದಲಾಗಿ ಕೃಷಿಕಾರ್ಮಿಕರಲ್ಲ. ಆ ಕಾರಣಕ್ಕೆ ಒಂದು ನಿಶ್ಚಿತ ಭೂಪ್ರದೇಶದಲ್ಲಿ ವಾಸಿಸುವ ಪ್ರಮೇಯವಿಲ್ಲ. ಇವರ ಉದ್ಯೋಗಗಳು ಮೂಲತಃ ವ್ಯಾಪಾರೀ ಸ್ವರೂಪದವು. ವ್ಯಾಪಾರದಿಂದ ಕೂಡ ವರ್ಷದ ಪೂರ್ತಿ ಉದ್ಯೋಗ ದೊರೆಯುವುದಿಲ್ಲ. ಗೋಸಂಗಿಗಳು ವರ್ಷದಲ್ಲಿ ಎಂಟರಿಂದ ಹತ್ತುತಿಂಗಳ ಕಾಲ ಜೀವನ ನಿರ್ವಹಣೆಗೆ ವಲಸೆ ಪ್ರವೃತ್ತಿಗಾರರಾಗಿದ್ದಾರೆ. ಇದರಿಂದ ಗೋಸಂಗಿಗಳ ಶಿಕ್ಷಣಕ್ಕೆ ಒಳಗಾಗದಿರಲು ಪ್ರಮುಖ ಕಾರಣವಾಗಿದೆ.

ನನ್ನ ಅಧ್ಯಯನದ ವ್ಯಾಪ್ತಿಗೆ ಸಂಬಂಧಪಟ್ಟ ಕರ್ನಾಟಕದ ಎಂಟು ಜಿಲ್ಲೆಗಳಿಂದ ೪೭೩ ಕುಟುಂಬಗಳದ್ದು ಶೇ ೬ರಷ್ಟು ಪ್ರಾಥಮಿಕ ಶಿಕ್ಷಣವನ್ನು ಶೇ ೦.೮೦ ರಷ್ಟು ಪ್ರೌಢಶಿಕ್ಷಣವನ್ನು ಮತ್ತು ಪದವಿಪೂರ್ವ, ಪದವಿ ಮತ್ತು ಡಿಪ್ಲಾಮೋದಲ್ಲಿ ಒಬ್ಬೊಬ್ಬರು ಶಿಕ್ಷಣವನ್ನು ಪಡೆದುಕೊಂಡಿದ್ದಾರೆ. ಇದು ಗೋಸಂಗಿ ಸಮುದಾಯದ ಒಟ್ಟು ಸಾಕ್ಷರತೆಯ ಪ್ರಮಾಣವಾಗಿದೆ.

ನಾನು ಸಂದರ್ಶನ ಮಾಡಿದ ಗೋಸಂಗಿ ಸಮುದಾಯದ ಲಿಂಗವಾರು ಸಾಕ್ಷರತೆಯ ಪ್ರಮಾಣದಲ್ಲಿ ಪುರುಷರ ಸಾಕ್ಷರತೆಯ ಪ್ರಮಾಣ ಶೇ ೧೦ರಷ್ಟು, ಮಹಿಳಾ ಸಾಕ್ಷರತೆಯ ಪ್ರಮಾಣ ೩.೫೮ರಷ್ಟು, ಒಟ್ಟು ಸಾಕ್ಷರತೆಯ ಪ್ರಮಾಣ ಶೇ ೧೩.೬ರಷ್ಟಿದೆ. ಈ ಅಂಕಿಅಂಶಗಳನ್ನು ಗಮನಿಸಿದಾಗ ಮಹಿಳಾ ಸಾಕ್ಷರತೆಯೂ ಪುರುಷ ಸಾಕ್ಷರತೆ ಪ್ರಮಾಣಕ್ಕಿಂತ ಕಡಿಮೆ ಹಾಗೂ ಶೋಚನೀಯವಾಗಿದೆ.

ಗೋಸಂಗಿ ಸಮುದಾಯದ ಶಿಕ್ಷಣವನ್ನು ಈ ಅಂಕಿಅಂಶಗಳ ಮೂಲಕ ಗಮನಿಸಿದಾಗ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣವನ್ನು ಮಾತ್ರ ಪಡೆದುಕೊಂಡಿದ್ದು, ಪದವಿಪೂರ್ವ, ಪದವಿ, ಡಿಪ್ಲಾಮೋ ಶಿಕ್ಷಣವನ್ನು ಒಬ್ಬೊಬ್ಬರು ಮಾತ್ರ ಪಡೆದುಕೊಂಡಿದ್ದಾರೆ. ಗೋಸಂಗಿಗಳ ಪಾಲಿಗೆ ಉನ್ನತ ಶಿಕ್ಷಣ, ವೃತ್ತಿಪರ ಶಿಕ್ಷಣ ಗಗನಕುಸುಮವಾಗಿದೆ... ಗೆಟುಗಲಾರದ್ದಾಗಿದೆ.

ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಈಗಾಗಲೇ ಸಾರ್ವತ್ರಿಕ ಶಿಕ್ಷಣಕ್ಕಾಗಿ ಹಲವು ಯೋಜನೆಗಳು ಹಮ್ಮಿಕೊಂಡಿದ್ದು, ಸುಮಾರು ಹಣವನ್ನು ವಿನಿಯೋಗ ಮಾಡುತ್ತಿವೆ. ಆದರೆ ಆದಿವಾಸಿ, ಬುಡಕಟ್ಟು ಸಮುದಾಯಗಳಿಗೆ ಈ ಯೋಜನೆಗಳು ಇನ್ನೂ ಫಲಪ್ರದ ತಲುಪುತ್ತಿಲ್ಲ. ಆ ಕಾರಣಕ್ಕಾಗಿ ಸರ್ಕಾರಗಳು,

ಸಂಘ-ಸಂಸ್ಥೆಗಳು ಗೋಸಂಗಿ ಸಮುದಾಯಕ್ಕೆ ಬೇಕಾದ (ಯಾವುದೇ ಬುಡಕಟ್ಟು ಸಮುದಾಯಕ್ಕೆ) ಶಿಕ್ಷಣವನ್ನು ಪ್ರತ್ಯೇಕವಾಗಿ ಯೋಜನೆಗಳನ್ನು ರೂಪಿಸಬೇಕು.

**ಅಡಿಟಿಪ್ಪಣಿಗಳು**

೧. ಎಂ. ನಂಜಮ್ಮಣ್ಣಿ, ಭಾರತೀಯ ಸಾಮಾಜಿಕ ಸಂಸ್ಥೆಗಳು, ಪುಟ: ೨೫, ೧೯೮೨

೨. ಎಂ. ನಂಜಮ್ಮಣ್ಣಿ, ಭಾರತೀಯ ಸಾಮಾಜಿಕ ಸಂಘ ಸಂಸ್ಥೆಗಳು, ಪುಟ: ೨೬-೨೭, ೧೯೮೨

೩. ಕಾಳೇಗೌಡ ನಾಗಾವಾರ ಮತ್ತು ಹುಚ್ಚಪ್ಪ ಮಾಸ್ತರ್, ಸಂ. ಗಿರಿಜನ ಸಂಸ್ಕೃತಿ, ಪುಟ: ೧೦೧, ೨೦೦೦

೪. ಅದೇ, ಪುಟ: ೧೧೨-೧೩, ೨೦೦೦



## ವರ್ತಮಾನದಲ್ಲಿ ಗೋಸಂಗಿಗಳು

ವಕ್ತೃಗಳು ನೀಡಿದ ಮಾಹಿತಿ ಹಾಗೂ ನನ್ನ ಕ್ಷೇತ್ರಕಾರ್ಯದ ಅನುಭವದ ಹಿನ್ನೆಲೆಯಲ್ಲಿ ಹೇಳುವುದಾದರೆ ಹಿಂದೆ ಅಲೆಮಾರಿಗಳಾಗಿ ಹಲವಾರು ಪ್ರದೇಶಗಳನ್ನು ಸುತ್ತಿ ಸುಮಾರು ೭೦-೮೦ ವರ್ಷಗಳ ಹಿಂದೆ ಕರ್ನಾಟಕದ ಕೆಲವು ಪ್ರದೇಶಗಳಲ್ಲಿ ಅರೆ ಅಲೆಮಾರಿ (Semi Nomadic) ಗಳಾಗಿ ನೆಲೆ ನಿಂತಿರುವ ಗೋಸಂಗಿಗಳ ಸ್ಥಿತಿ ಇಂದು ತುಂಬಾ ಚಿಂತಾಜನಕವಾಗಿದೆ. ತಮ್ಮ ಜೀವನೋಪಾಯಕ್ಕಾಗಿ ಪರಂಪರೆಯಿಂದ ನಂಬಿಕೊಂಡು ಬಂದ ಬೇಟೆ ಮತ್ತು ಭಿಕ್ಷೆಗೆ ವರ್ತಮಾನದಲ್ಲಿ ಕಾನೂನುಗಳ ತೊಡಕಿನಿಂದ ಜೀವನದ ದಾರಿಗಳು ಮುಚ್ಚಿದಂತಾಗಿ, ಅನಿವಾರ್ಯವಾಗಿ ಗೋಸಂಗಿಗಳು ಹೊಸ ಕಸುಬುಗಳನ್ನು ಆಶ್ರಯಿಸಬೇಕಾಗಿ ಬಂದಿದೆ. ಅಕ್ಷರಜ್ಞಾನವಿಲ್ಲದ ಗೋಸಂಗಿಗಳಿಗೆ ಜೀವನ ನಿರ್ವಹಣೆಗಾಗಿ ಬೇಕಾದ ಜ್ಞಾನಕ್ಕೇನು ಕೊರತೆಯಿಲ್ಲ. ಅಲೆಮಾರಿ ಬದುಕಿನ ಸಂದರ್ಭದಲ್ಲಿ ಆಹಾರಕ್ಕಾಗಿ ಕಾಡುಮೇಡುಗಳಲ್ಲಿ ಬೇಟೆಯನ್ನು ಅವಲಂಬಿಸಿದ್ದ ಇವರಿಗೆ ಕಾಡುನಾಡಾಗಿ ಪರಿವರ್ತನೆಯಾಗುತ್ತಿರುವ ಇಂದಿನ ಸಂದರ್ಭದಲ್ಲಿ ನಾಡಿನೊಂದಿಗೆ ಸಂಪರ್ಕ ಬೆಳೆಸುವುದು ಅನಿವಾರ್ಯವಾಗಿದೆ. ವರ್ತಮಾನದಲ್ಲಿ ಗೋಸಂಗಿಗಳು ನಗರ ಪ್ರದೇಶ ಹಾಗೂ ಅದರ ಅಕ್ಕಪಕ್ಕದ ಹಳ್ಳಿಗಳಲ್ಲಿ ವಾಸಿಸುತ್ತಿದ್ದು ಜೀವನ ನಿರ್ವಹಣೆಗಾಗಿ ಹತ್ತು ಹಲವು ಕಸುಬುಗಳನ್ನು ಅವಲಂಬಿಸಿದ್ದಾರೆ.

ನನ್ನ ಅಧ್ಯಯನದ ಕಾಲಮಿತಿಯೊಳಗೆ ಕೇವಲ ಎಂಟು ಜಿಲ್ಲೆಗಳಲ್ಲಿನ ಗೋಸಂಗಿಗಳನ್ನು ಮಾತ್ರ ಸಂದರ್ಶಿಸಲು ಸಾಧ್ಯವಾಗಿದ್ದು, ಈ ಎಲ್ಲಾ ಪ್ರದೇಶದ ಜನರ ಆರ್ಥಿಕ ಸ್ಥಿತಿ ತುಂಬಾ ದುಸ್ಥಿತಿಯಲ್ಲಿದೆ. ಪ್ರದೇಶಕ್ಕೆ ಒಬ್ಬಿಬ್ಬರು ಸ್ಥಿರಾಸ್ಥಿಯನ್ನು ಹೊಂದಿದ ಸ್ಥಿತಿವಂತರನ್ನು ಬಿಟ್ಟರೆ ಉಳಿದಂತೆ ಎಲ್ಲರೂ ಕಡುಬಡವರಾಗಿದ್ದಾರೆ.

ಮಾನವ ಸಮಾಜ ನಿತ್ಯ ಪರಿವರ್ತನಶೀಲವಾದುದು. ಚೇತನಶೀಲವಾದುದು ಯಾವತ್ತೂ ಇಂತಹ ಬದಲಾವಣೆಗಳಿಗೆ ಒಳಗಾಗುತ್ತಿರುತ್ತದೆ. ಇದು ಆ ಸಮುದಾಯಗಳ ಜೀವಂತಿಕೆ ಲಕ್ಷಣವು ಕೂಡ. ಹೀಗೆ ಮಾನವ ಸಮುದಾಯ ಆದಿಮಸ್ಥಿತಿಯಿಂದ ಇವತ್ತಿನ ಕಂಪ್ಯೂಟರ್ ಯುಗದವರೆಗೆ ಹಲವು ಸ್ಥಿತ್ಯಂತರಗಳಿಗೆ

ಒಳಗಾಗಿದೆ. "ಭಾರತದ ಸಮಾಜದ ಜೀವನ ವಿಚಿತ್ರ. ಸಧ್ಯಕ್ಕೆ ಈ ದೇಶದ ಎಲ್ಲಾ ವಿಚಾರಗಳೂ, ವ್ಯವಸ್ಥೆಗಳೂ ಅರಬೆಂದ ಕಾಳಿನಂತೆ ನುಂಗಲೂ ಆಗದ, ಉಗಿಯಲೂ ಆಗದ ಸ್ಥಿತಿ. ಬೆಂಕಿಯ ಕಂಡುಹಿಡಿಯುವಿಕೆ ಮನುಷ್ಯ ಕುಲದ ಇತಿಹಾಸದಲ್ಲಿ ಒಂದು ಹೊಸ ಯುಗಕ್ಕೆ ನಾಂದಿಯಾದಂತೆಯೇ ವಿದ್ಯುತ್ ಉತ್ಪಾದನೆ ವಿಜ್ಞಾನ ಯುಗದ ಇನ್ನೊಂದು ಪ್ರಮುಖ ಘಟ್ಟ. ಈ ಬೆಂಕಿ ಮತ್ತು ವಿದ್ಯುತ್ ನಡುವಿನ ಎರಡು ಸ್ಥಿತಿಗಳನ್ನು ಉಳಿಸಿಕೊಂಡಿರುವ ಭಾರತದ ಜನಜೀವನವನ್ನು ಸೂಕ್ಷ್ಮವಾಗಿ ಗಮನಿಸಿದರೆ ನಮ್ಮ ಗಿರಿಜನರು ಇನ್ನೂ ಬೆಂಕಿಯ ಸ್ಥಿತಿಯಲ್ಲೂ ಮುಂದುವರಿದವರು ವಿದ್ಯುತ್ ಸ್ಥಿತಿಯಲ್ಲೂ ಇದ್ದಾರೆ ಎಂದು ಸಾಂಕೇತಿಕವಾಗಿ ಹೇಳಬಹುದು."[೧] ಪ್ರೊ.ಹಿ.ಚಿ. ಬೋರಲಿಂಗಯ್ಯನವರ ಈ ಮಾತು ತುಂಬಾ ಮಹತ್ವಪೂರ್ಣವಾದುದು. ಭಾರತೀಯ ಸಮಾಜವೇ ಇಂತಹ ಅತಂತ್ರ ಸ್ಥಿತಿಯಲ್ಲಿ ಬದುಕುತ್ತಿದೆ. ಆಧುನಿಕ ಮಾನವ ಇಂದು ಎಷ್ಟೋ ವಿಷಯಗಳಲ್ಲಿ ವೇಗವಾಗಿ ಸಾಗುತ್ತಿದ್ದಾನೆ. ಮಂಗಳ, ಚಂದ್ರಲೋಕಗಳಲ್ಲಿ ವಾಸಮಾಡಲು ಹೊಸ ಅನ್ವೇಷಣೆಗಳನ್ನು ನಡೆಸಿದ್ದಾನೆ, ನಡೆಸುತ್ತಿದ್ದಾನೆ. ಆದಿವಾಸಿ, ಬುಡಕಟ್ಟು ಸಮುದಾಯಗಳ ವಾಸ್ತವ ಲೋಕದ ಬದುಕಿನ ಕಡೆ ಗಮನಹರಿಸಿದರೆ ಅಷ್ಟೆ ಹಿಂದೆ ಹಿಂದೆ ಹೆಜ್ಜೆಗಳನ್ನು ಹಾಕುತ್ತಿದೆ. ಇವರು ಇನ್ನೂ ಕೂಡಾ ಆದಿಮ ಸ್ಥಿತಿಯಲ್ಲಿಯೇ ಜೀವನ ನಡೆಸುತ್ತಿದ್ದಾರೆ, ಕೆಲವೊಂದು ಬುಡಕಟ್ಟುಗಳ ಆಧುನಿಕ ವಿದ್ಯಮಾನಗಳೊಂದಿಗೆ ಮುಖಾಮುಖಿಯಾಗುತ್ತಾ ತಮ್ಮ ಬದುಕನ್ನು ಕಟ್ಟಿಕೊಳ್ಳಲು ಪ್ರಯತ್ನಿಸುತ್ತಿವೆ. ಕರ್ನಾಟಕದ ಅಂತೆಯೇ ಭಾರತದ ಯಾವುದೇ ಬುಡಕಟ್ಟು ಸಮುದಾಯವೂ ಕೂಡಾ ಹಳೆಯದನ್ನು ಬಿಡುವ, ಹೊಸದನ್ನು ತನ್ನದಾಗಿಸಿಕೊಳ್ಳುವಲ್ಲಿ ಆತುರದಿಂದ ತುದಿಗಾಲ ಮೇಲೆ ನಿಂತಿವೆ. ಆದರೆ ಅದು ಸುಲಭ ಸಾಧ್ಯವಲ್ಲ. ಗತದ ಜೀವನದ ಚರಿತ್ರೆಯ ಹೆಜ್ಜೆಗಳ ಅರಿವನ್ನು ವರ್ತಮಾನದಲ್ಲಿ ನೆನಪಿಸಿಕೊಳ್ಳುತ್ತಾ, ಭವಿಷ್ಯತ್‌ನ ಕನಸಿನ ದಿನಗಳ ಬದುಕಿಗಾಗಿ ಬಹು ಎಚ್ಚರಿಕೆಯಿಂದ ಎಲ್ಲಾ ಸಮುದಾಯಗಳ ನಡೆದುಕೊಳ್ಳುತ್ತಿವೆ.

ಹತ್ತೊಂಬತ್ತನೆಯ ಶತಮಾನ ಭಾರತೀಯ ಸಮಾಜವನ್ನು ಸತ್ವಪರೀಕ್ಷೆಗೆ ಒಡ್ಡಿದ ಕಾಲಮಾನ, ವಸಾಹತು ಆಡಳಿತದ ಜೊತೆಗೆ ಬಂದ ಶಿಕ್ಷಣ, ಆಧುನಿಕತೆ ಬುಡಕಟ್ಟು ಸಮುದಾಯಗಳ ಪರಿವರ್ತನೆಗೆ ಸಾಕಷ್ಟು ಪ್ರಭಾವ ಬೀರಿವೆ. ಕೈಗಾರಿಕೀಕರಣದ ಪ್ರಭಾವವೂ ಕೂಡಾ ಬುಡಕಟ್ಟು ಸಮುದಾಯಗಳ ಬದಲಾವಣೆಗೆ ಸಹಕಾರಿಯಾಗಿದೆ. ಇಂತಹ ಬದಲಾವಣೆಗಳಿಗೆ ಒಳಗಾದ ಭಾರತದ, ಅಂತೆಯೇ ಕರ್ನಾಟಕದಲ್ಲಿ ನೆಲೆನಿಂತಿರುವ ಬುಡಕಟ್ಟುಗಳಿಗೆ ಆಧುನಿಕರಣದ ಪ್ರಭಾವ ನುಂಗಲಾರದ ಬಿಸಿ ತುಪ್ಪದಂತಾಗಿದೆ. ಪರಂಪರೆಯಿಂದ ನಂಬಿಕೊಂಡು ಬಂದ ವೃತ್ತಿಗಳಿಗೆ, ಹಾಗೂ ಜೀವನ ಮೌಲ್ಯಗಳಿಗೆ ಆಧುನಿಕತೆಯ ಬಿರುಗಾಳಿ ಗೊಂದಲಕ್ಕೀಡು ಮಾಡಿದೆ.

ಸುಮಾರು ಏಳೆಂಟು ದಶಕಗಳಿಗಿಂತಲೂ ಹಿಂದೆಯೇ ಕರ್ನಾಟಕದಲ್ಲಿ ನೆಲೆಯೂರಲು ಪ್ರಯತ್ನಿಸುತ್ತಿರುವ ಗೋಸಂಗಿಗಳಿಗೆ ಸ್ವತಂತ್ರ ಭಾರತದ ಸಂವಿಧಾನಬದ್ಧ ಹಕ್ಕುಗಳ್ಯಾವೂ ಸಾಮಾಜಿಕ ಸ್ಥಾನಮಾನವನ್ನು ತಂದುಕೊಟ್ಟಿಲ್ಲ. ಅರೆ ಅಲೆಮಾರಿಗಳಾಗಿ ಜೀವನ ಸಾಗಿಸುತ್ತಿರುವ ಇವರು ಇಂದೂ ಸಹ ಪರಕೀಯರಂತೆ

ಜೀವನ ಸಾಗಿಸುತ್ತಿದ್ದಾರೆ. ಸುಮಾರು ಅರವತ್ತಕ್ಕೂ ಹೆಚ್ಚು ಜನ ಡೇರಾ (Tent) ವಾಸಿಗಳಾಗಿದ್ದು ಅಷ್ಟರಲ್ಲೆ ತಮ್ಮ ಕುಟುಂಬದ ಸದಸ್ಯರು ಆಶ್ರಯ ಪಡೆಯುತ್ತಿದ್ದಾರೆ. 'ಬಾಲಕೃಷ್ಣನ ಬಾಯಲ್ಲಿ ಬ್ರಹ್ಮಾಂಡ ಅಡಗಿದೆ' ಎಂಬಂತೆ ಆ ಪುಟ್ಟ ಡೇರಾದಲ್ಲಿ ತಮ್ಮ ಕುಟುಂಬ ನಿರ್ವಹಣೆಗೆ ಬೇಕಾದ ಎಲ್ಲಾ ಸಲಕರಣೆಗಳನ್ನು ಅಚ್ಚುಕಟ್ಟಾಗಿ ಜೋಡಿಸಿಕೊಂಡು ಮಲಗಲು ಸ್ಥಳಾವಕಾಶಮಾಡಿಕೊಂಡಿರುತ್ತಾರೆ. ಉಳಿದಂತೆ ಶೇಕಡ ನಲವತ್ತು ಜನ ಇತರರ ಸಹಾಯದಿಂದ ಹಾಗೂ ತಮ್ಮ ಸ್ವಂತ ದುಡಿಮೆಯ ಫಲದಿಂದ ಹೆಂಚಿನ ಮನೆ, ಜಿಂಕ್‌ಶೀಟ್ ಮನೆ ಹಾಗೂ ಆರ್.ಸಿ.ಸಿ ಮನೆಗಳನ್ನು ಕಟ್ಟಿಕೊಂಡು ಒಂದೆಡೆ ನೆಲೆಯೂರುವುದನ್ನು ರೂಢಿಸಿಕೊಳ್ಳುತ್ತಿದ್ದಾರೆ. ಜೀವನ ನಿರ್ವಹಣೆಗಾಗಿ ಅಸ್ಥಿರ ಕಸುಬುಗಳನ್ನು ಅವಲಂಬಿಸಿರುವ ಇವರಲ್ಲಿ ಕೆಲವು ಇನ್ನೂ ಅಲೆಮಾರಿಗಳಾಗಿಯೇ ಜೀವನ ನಡೆಸುತ್ತಿದ್ದಾರೆ. ದಿನಬಳಕೆ ವಸ್ತುಗಳಾದ ಮಣ್ಣಿನ ಪಾತ್ರೆಗಳ ಸ್ಥಾನವನ್ನು ಹಿತ್ತಾಳೆ, ಅಲ್ಯುಮಿನಿಯಂ, ಸ್ಟೀಲ್ ಪಾತ್ರೆಗಳು ಆಕ್ರಮಿಸಿಕೊಂಡಿವೆ. ಸೀಮೆಯೆಣ್ಣೆ ದೀಪಗಳಿಂದ ಬೆಳಕನ್ನು ಪಡೆಯುತ್ತಿದ್ದ ಇವರಲ್ಲಿ ಕೆಲವರು ಸರ್ಕಾರಿ ಭಾಗ್ಯಜ್ಯೋತಿಯಡಿಯಲ್ಲಿ ಕೆಲವೇ ಮನೆಗಳು ವಿದ್ಯುತ್ ದೀಪಗಳ ಬೆಳಕನ್ನು ಪಡೆಯುತ್ತಿದ್ದಾರೆ. ನಗರಪ್ರದೇಶದ ಪ್ರಭಾವಕ್ಕೊಳಗಾದ ಕೆಲವು, ಪುರುಷರು, ಟೀಷರ್ಟ್, ಜೀನ್ಸ್‌ಪ್ಯಾಂಟ್ ಇನ್ನಿತರೆ ರಂಗು ರಂಗಿನ ಉಡುಪುಗಳಿಗೆ ಮಾರು ಹೋಗಿದ್ದಾರೆ. ಸ್ತ್ರೀಯರು ಚೂಡಿದಾರ, ನೈಟಿ, ಲಂಗ, ರವಿಕೆಯಂತಹ ಉಡುಪುಗಳನ್ನು ಬಳಸುವುದರ ಜೊತೆಗೆ ಸ್ನೋ, ಪೌಡರ್, ಲಿಫ್‌ಸ್ಟಿಕ್‌ನಂತಹ ಅಲಂಕಾರ ಸಾಮಗ್ರಿಗಳನ್ನು ಬಳಸುತ್ತಿರುವುದು ಕಂಡುಬರುತ್ತದೆ. ಆದರೆ ಹಿರಿಯ ತಲೆಮಾರಿನ ಸ್ತ್ರೀ, ಪುರುಷರು ಮಾತ್ರ ತಮ್ಮ ಮೂಲ ಉಡುಗೆತೊಡುಗೆಯ ಹಂತದಲ್ಲಿರುವುದು ಗೋಚರಿಸುತ್ತದೆ. ಹೀಗೆ ಗೋಸಂಗಿಗಳು ನಗರಕ್ಕೆ ಹತ್ತಿರವಿದ್ದು, ಆಧುನಿಕತೆಯ ಪ್ರಭಾವಕ್ಕೆ ಒಳಗಾಗಿ ಭೌತಿಕವಾಗಿ ಅಲ್ಪಸ್ವಲ್ಪ ಬದಲಾವಣೆಯನ್ನು ಕಂಡುಕೊಂಡಿದ್ದಾರೆ.'

## ಸಾಮಾಜಿಕ ಬದಲಾವಣೆ

ಬದಲಾಗುತ್ತಿರುವ ಸಾಮಾಜಿಕ ಸಂದರ್ಭದಲ್ಲಿ ಗೋಸಂಗಿಗಳು ಪರಿವರ್ತನೆಯ ಹಾದಿಯಲ್ಲಿದ್ದಾರೆಂದು ಮೇಲ್ನೋಟಕ್ಕೆ ಅನ್ನಿಸಿದರೂ ಸಹ ವಸ್ತು ಸ್ಥಿತಿ ಹಾಗಿಲ್ಲ. ರಾಜಕೀಯ ಪಕ್ಷಗಳು ಇವರನ್ನು 'Vote Bank' ಎಂದು ಪರಿಗಣಿಸಿದ್ದಾರೆಯೇ ವಿನಹ ಎಂದೂ ಇವರ ಕ್ಷೇಮಾಭಿವೃದ್ಧಿಯ ಕಡೆ ಗಮನಹರಿಸಿಲ್ಲ. ಕನಿಷ್ಟ ಶಿಕ್ಷಣವನ್ನ ಸಹ ಪಡೆಯದ ಇವರಿಗೆ ರಾಜಕಾರಣಗಳ ಒಳಗುಟ್ಟು ತಿಳಿಯದಂತಾಗಿದೆ. ಭೌತಿಕವಾಗಿ ಅಲ್ಪಸ್ವಲ್ಪ ಬದಲಾವಣೆಗಳನ್ನು ಕಂಡುಕೊಂಡಿದ್ದರೂ ಸಹ ಸಾಂಸ್ಕೃತಿಕವಾಗಿ ಅಷ್ಟೊಂದು ಬದಲಾವಣೆಗಳು ಕಂಡುಬರುತ್ತಿಲ್ಲ. ಮದುವೆ, ಜನನ, ಸಾವು ಇತ್ಯಾದಿ ಸಂಪ್ರದಾಯ ಆಚರಣೆಗಳ ಸಂದರ್ಭದಲ್ಲಿ ಬ್ರಾಹ್ಮಣ ಪೌರೋಹಿತ್ಯಕ್ಕೆ ಅವಕಾಶವೀಯುತ್ತಿಲ್ಲ. ನಾಗರಿಕ ಸಮಾಜದೊಂದಿಗೆ ಸಂಬಂಧವನ್ನು ಹೊಂದಿದ್ದರೂ, ಸಹ ನಗರ ಸಂಸ್ಕೃತಿಯ ಪ್ರಭಾವಕ್ಕೆ ಒಳಗಾಗಿಲ್ಲ. ತಮ್ಮಲ್ಲಿನ ಒಳಜಗಳಗಳನ್ನು ತಮ್ಮ ಕುಲಪಂಚಾಯ್ತಿಯಲ್ಲೆ ಬಗೆಹರಿಸುತ್ತಾರೇ ವಿನಹ ಹೊರಗಿನ ಕೋರ್ಟುಗಳಿಗೆ ಹೋಗಲು ಅವಕಾಶವೀಯುವುದಿಲ್ಲ. ವರದಕ್ಷಿಣೆ

ಸಮಸ್ಯೆ ಮುಗಿಲು ಮುಟ್ಟುತ್ತಿರುವ ಇಂದಿನ ಸಂದರ್ಭದಲ್ಲಿ ಗೋಸಂಗಿಗಳು ಇನ್ನೂ ವಧುದಕ್ಷಿಣೆ ಪದ್ಧತಿಯನ್ನೇ ಅನುಸರಿಸುತ್ತಿರುವುದು ವಿಶೇಷ. ಅಪಾರ ದೈವಭಕ್ತಿಯುಳ್ಳ ಇವರು ಎಷ್ಟೇ ಕಷ್ಟದಲ್ಲಿದ್ದರೂ ಯಾವ ಆಚರಣೆಗಳನ್ನು ನಿಲ್ಲಿಸುವುದಿಲ್ಲ. ಸಾಮಾಜಿಕ ಶಿಕ್ಷಣದ ಕೊರತೆಯಿರುವ ಇವರಲ್ಲಿ ಬಲಿಯಂತಹ ಕ್ರೂರ ಆಚರಣೆಗಳು ಇನ್ನೂ ನಿಂತಿಲ್ಲ. ಇಂತಹ ಆಚರಣೆಗಳ ಮೂಲಕ ದೇವರನ್ನು ತೃಪ್ತಿಪಡಿಸುವುದು, ಆ ಮೂಲಕ ತಾವು ಮಾಡಿದ ತಪ್ಪುಗಳಿಗೆ ದೇವರಲ್ಲಿ ಕ್ಷಮೆ ಕೋರುವುದು ಹೀಗೆ ದೇವರು ಮತ್ತು ಅವರ ನಡುವೆ ಭಾವನಾತ್ಮಕವಾದ ಸಂಬಂಧವೇರ್ಪಟ್ಟಿರುವುದರಿಂದ ಇಂತಹ ಆಚರಣೆಗಳಿಗೆ ಕೊನೆ ಎಂಬುದು ಇಲ್ಲದಂತಾಗಿದೆ. ಅಲೆಮಾರಿಗಳಾದ ಇವರು ಬೇರೆ ಸಮುದಾಯಗಳೊಂದಿಗೆ ಬೇರೆಯದೆ, ತಮ್ಮ ಸಾಮಾಜಿಕ ಮೌಲ್ಯಗಳನ್ನು ತೊರೆಯದೆ, ಶ್ರೇಣೀಕೃತ ಜಾತಿವ್ಯವಸ್ಥೆಯಲ್ಲಿ ಸಂಪೂರ್ಣ ಬೇರೆಯದೆ, ತಮ್ಮ ಸಾಂಸ್ಕೃತಿಕ ಪ್ರತ್ಯೇಕತೆಯನ್ನು ಹಾಗೂ ವೈಶಿಷ್ಟ್ಯಗಳನ್ನು ಉಳಿಸಿಕೊಂಡಿದ್ದಾರೆ. ಬುಡಕಟ್ಟು ಲಕ್ಷಣಗಳನ್ನೊಳಗೊಂಡಿರುವ ಇವರ ಜೀವನಕ್ರಮ ಶಿಷ್ಟ ಸಮುದಾಯಗಳಿಗಿಂತ ಭಿನ್ನವಾಗಿದೆ.

ನಿರಾಶ್ರಿತ ಸಮುದಾಯಗಳ ಕ್ಷೇಮಾಭಿವೃದ್ಧಿಗಾಗಿ ರೂಪಗೊಂಡ ಯೋಜನೆಗಳು ಮಧ್ಯವರ್ತಿಗಳ ಪಾಲಾಗುತ್ತಿವೆ. ಇದಕ್ಕೆ ಮುಖ್ಯ ಕಾರಣ ಸ್ಥಳೀಯರು ಗೋಸಂಗಿಗಳನ್ನು ಪರಕೀಯರೆಂದು ಪರಿಭಾವಿಸಿರುವುದು ಒಂದು ಕಡೆಯಾದರೆ ಇನ್ನೊಂದು ಕಡೆ ಇವರು ಒಂದೆಡೆ ಶಾಶ್ವತವಾಗಿ ನೆಲೆನಿಲ್ಲದೆ, ಅಲೆಮಾರಿಗಳಾಗಿರುವುದು. ವಸಾಹತುಶಾಹಿ ನೀತಿ ಭಾರತವನ್ನಾಕ್ರಮಿಸಿ, ಕಾಡಿನ ಮೇಲೆ ಹಿಡಿತವನ್ನು ಸಾಧಿಸಿದ ಮೇಲೆ ಕಾಡಿನ ಸಂಪತ್ತನ್ನು ಅನುಭೋಗಿಸುವ ಇವರ ಹಕ್ಕನ್ನು ಕಸಿದುಕೊಂಡ ಕಾರಣ ಇವರ ಬದುಕು ಚಿಂತಾಜನಕವಾಗಿದೆ. ಸ್ವಂತ ಬುದ್ಧಿಶಕ್ತಿಯನ್ನು ಬಳಸಿ ಜೀವನ ನಿರ್ವಹಣೆಗಾಗಿ ಇಂದು ಅನುಸರಿಸಿರುವ ಕೈಕಸುಬುಗಳ್ಯಾವು ಇವರ ಹೊಟ್ಟೆ ತುಂಬಿಸುವಲ್ಲಿ ಸಹಕಾರಿಯಾಗುತ್ತಿಲ್ಲ. ಸುಗ್ಗಿಯ ಸಮಯದಲ್ಲಿ ಮಾತ್ರ ಹೊಟ್ಟೆ ತುಂಬ ಊಟ ಉಳಿದ ದಿನಗಳಲ್ಲಿ ಅರೆ ಹೊಟ್ಟೆಯಲ್ಲಿರುವರು. ಉತ್ತಮ ಬೇಟಾಗಾರರಾದ ಇವರನ್ನು ಹೊಸಪೇಟೆ, ಶಿರಾ, ಧಾರವಾಡ ಇನ್ನಿತರೆ ಪ್ರದೇಶಗಳಲ್ಲಿನ ಸ್ಥಳೀಯರು ಕೆರೆ, ಹೊಂಡಗಳನ್ನು ಗುತ್ತಿಗೆ ಪಡೆದುಕೊಂಡು ಮೀನು ಹಿಡಿಯಲು ದಿನಗೂಲಿಗಳಂತೆ ಇವರನ್ನು ನೇಮಿಸಿಕೊಂಡಿರುವುದಷ್ಟೇ ಸಮಾಧಾನ ತರುವ ಸಂಗತಿ. ಬೇಟೆಯಲ್ಲಿ ಹೆಚ್ಚು ನೈಪುಣ್ಯತೆ ಹೊಂದಿದ ಇಂತಹ ಸಮುದಾಯಗಳಿಗೆ ಸರ್ಕಾರ ನೇರವಾಗಿ ಗುತ್ತಿಗೆ ಕೊಟ್ಟರೆ ಇವರ ಬದುಕು ಹಸನಾಗುವುದರಲ್ಲಿ ಯಾವ ಸಂಶಯವೂ ಇಲ್ಲ. "ಭಾರತ ಸರ್ಕಾರ ಸ್ವತಂತ್ರ್ಯಾನಂತರ ಆದಿವಾಸಿ ಜನಾಂಗಗಳ ಸುಧಾರಣೆಗೆ ಹೆಚ್ಚಿನ ಪ್ರಾಮುಖ್ಯತೆಕೊಟ್ಟು ಪ್ರತ್ಯೇಕ ಸಂಸ್ಥೆಗಳನ್ನು ತೆರೆಯಿತು. ಅಂತವುಗಳಲ್ಲಿ Ethnological Survey of Indiaವೂ ಒಂದು ಇದು ಗಿರಿಜನರ ಉದ್ಧಾರಕ್ಕಾಗಿ ಹಾಗೂ ಆದಿವಾಸಿಗಳ ಜನಜೀವನವನ್ನು ಪುನರ್ವ್ಯವಸ್ಥೆಗೊಳಿಸುವುದಕ್ಕಾಗಿ ಹುಟ್ಟಿಕೊಂಡಿರುವ ಸಂಸ್ಥೆಯಾಗಿದ್ದು, ಇದು ಅವರ ಆಚಾರ-ವಿಚಾರ, ವ್ಯವಹಾರ, ಸಂಪ್ರದಾಯಗಳ ಬಗ್ಗೆ ಅಧ್ಯಯನಿಸಲು ತೊಡಗಿತು. ಇಷ್ಟಲ್ಲದೆ ವಿಶ್ವವಿದ್ಯಾಲಯಗಳಿಗೂ ಸಹ ಧನಸಹಾಯ ನೀಡಿ ಆ ಮೂಲಕ, ಆದಿವಾಸಿಗಳ ಅಭಿವೃದ್ಧಿಯ ಕಡೆಗೆ ಹೆಚ್ಚಿನ ಗಮನ ಕೊಟ್ಟಿತು. ಈ ರೀತಿಯ ಧನಸಹಾಯ ಪಡೆದ

ಮದ್ರಾಸ್ ವಿಶ್ವವಿದ್ಯಾಲಯ ಗಿರಿಜನರ ಬಗ್ಗೆ ಹೆಚ್ಚಿನ ಅಧ್ಯಯನ ನಡೆಸಿತು. ಇದನ್ನು ಬಿಟ್ಟರೆ ಆದಿವಾಸಿಗಳ ಅಭಿವೃದ್ಧಿಯ ಕಡೆಗೆ ಗಮನ ಕೊಟ್ಟ ವಿಶ್ವವಿದ್ಯಾಲಯಗಳೆಂದರೆ ಲಕ್ನೋ, ದೆಹಲಿ ಮತ್ತು ಮುಂಬೈ ವಿಶ್ವವಿದ್ಯಾಲಯಗಳು"[೨] ಇದಲ್ಲದೆ ಭಾರತದ ಆದಿವಾಸಿಗಳ ಕ್ಷೇಮಾಭಿವೃದ್ಧಿಗೆಂದು ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ತಮ್ಮ ಕೈಲಾದ ಪ್ರಯತ್ನಗಳನ್ನು ಮಾಡುತ್ತಿವೆ. "ಮೊದಲ ಪಂಚವಾರ್ಷಿಕ ಯೋಜನೆಯಲ್ಲಿ ೧೫ ಕೋಟಿ ರೂಪಾಯಿಗಳನ್ನು ಆದಿವಾಸಿಗಳ ಹಿತಕ್ಕಾಗಿ ಮತ್ತು ತೃತೀಯ ಯೋಜನೆಯಲ್ಲಿ ೬೫ ಕೋಟಿ ರೂಪಾಯಿಗಳನ್ನ ತೆಗೆದಿಡಲಾಗಿದೆಯೆಂದು"[೩] ತಿಳಿದುಬರುತ್ತದೆ. ಸರ್ಕಾರ ಇಷ್ಟೆಲ್ಲಾ ಹಣವನ್ನು ಆದಿವಾಸಿಗಳ ಕ್ಷೇಮಾಭಿವೃದ್ಧಿಗೆ ಹಾಗೂ ಪುನರ್ ವ್ಯವಸ್ಥೆಗೊಳಿಸುವುದಕ್ಕಾಗಿ ವಿನಿಯೋಗಿಸುತ್ತಿದ್ದರೂ ಸಹ ಆದಿವಾಸಿಗಳು ಇವುಗಳನ್ನು ಸರಿಯಾಗಿ ಉಪಯೋಗಿಸಿಕೊಳ್ಳುತ್ತಿಲ್ಲವೆಂಬ ಕೂಗುಗಳು ಕೇಳಿ ಬರುತ್ತಿವೆ. ಇದಕ್ಕೆ ಕಾರಣ ಆಧುನಿಕತೆಯ ಬಗ್ಗೆ ಅವರಿಗಿರುವ ತಿರಸ್ಕಾರ ಇಂತಹ ಸಮುದಾಯಗಳು ಎಷ್ಟೇ ಕಷ್ಟವಾದರೂ ಹೊಸ ಬದುಕಿಗೆ ಬರಲು ಅಷ್ಟು ಸುಲಭವಾಗಿ ಒಪ್ಪುವುದಿಲ್ಲ. ಪರಂಪರೆಯಿಂದ ನಂಬಿಕೊಂಡು ಬಂದ ಜೀವನಮೌಲ್ಯಗಳಿಗೆ ಹೊರಜಗತ್ತಿನ ಸಂಪರ್ಕದಿಂದ ಎಲ್ಲಿ ಅಪಾಯ ಉಂಟಾಗುತ್ತದೆ ಎಂಬ ಭಯವೂ ಸಹ ಇವರಲ್ಲಿದೆ. ಅಲೆಮಾರಿಗಳಾದ ಗೋಸಂಗಿಗಳು ಜೀವನ ನಿರ್ವಹಣೆಗಾಗಿ ವಿವಿಧ ಪ್ರದೇಶಗಳನ್ನು ಸುತ್ತಿ, ವಿವಿಧ ಜನವರ್ಗಗಳೊಟ್ಟಿಗೆ ಒಡನಾಟವನ್ನು ಹೊಂದಿದ್ದರೂ ಸಹ ಆರ್ಥಿಕವಾಗಿ ಇನ್ನೂ ಪ್ರಗತಿಯನ್ನು ಸಾಧಿಸಿಲ್ಲ. ನಂಬಿಕೊಂಡ ಕಸುಬುಗಳಿಗೆ ಒಂದೆಡೆ ಕಾಯಂ ಕೆಲಸ ಸಿಗದೇ ಇರುವುದರಿಂದ ಅಲೆಮಾರಿತನ ಅನಿವಾರ್ಯವಾಗಿದೆ. ಸರ್ಕಾರ ಎಲ್ಲರಿಗೂ ಕಡ್ಡಾಯಶಿಕ್ಷಣ ಎಂಬ ನೀತಿಯನ್ನು ಅನುಸರಿಸುತ್ತಿದ್ದರೂ ಅದನ್ನು ಪಡೆಯುವಲ್ಲಿ ವಿಫಲರಾಗುತ್ತಿದ್ದಾರೆ. ಎಲ್ಲಿಯವರೆಗೆ ಇವರು ತಮ್ಮ ಅಲೆಮಾರಿತನವನ್ನು ನಿಲ್ಲಿಸುವುದಿಲ್ಲವೋ ಅಲ್ಲಿಯವರೆಗೆ ಶಿಕ್ಷಣದ ಕೊರತೆ ಇದ್ದೇ ಇರುತ್ತದೆ. ನನ್ನ ಕ್ಷೇತ್ರ ವ್ಯಾಪ್ತಿಯಲ್ಲಿ ಬರುವ ಗೋಸಂಗಿಗಳನ್ನು ಗಮನಿಸಿದಾಗ ಶಿಕ್ಷಣದ ಮಟ್ಟ ತುಂಬಾ ಕಡಿಮೆ ಇದೆ, (ಕೋಷ್ಟಕ ೪ ಮತ್ತು ೫ನ್ನು ನೋಡಿ) ಹೀಗಾಗುವುದಕ್ಕೆ ಮತ್ತೊಂದು ಮುಖ್ಯ ಕಾರಣವೆಂದರೆ ಕಿತ್ತು ತಿನ್ನುತ್ತಿರುವ ಬಡತನ, ಮಕ್ಕಳು ಸ್ವಲ್ಪ ಶಕ್ತರಾದರೆ ಸಾಕು ದುಡಿಯಲು ಕಳುಹಿಸುವರು. ಹಾಗಾಗಿ ಶಿಕ್ಷಣ ಅವರಿಗೆ ಒಂದು ಕೊರತೆ ಎನಿಸಿಲ್ಲ. ಎಂಟು ಜಿಲ್ಲೆಗಳ ಸಮೀಕ್ಷೆಯ ವರದಿಯ ಪ್ರಕಾರ ಕೇವಲ ನಾಲ್ಕೈದು ಜನ ಮಾತ್ರ ಶಿಕ್ಷಣ ಪಡೆದು ಸಣ್ಣ ಪುಟ್ಟ ಉದ್ಯೋಗಗಳಲ್ಲಿದ್ದಾರೆ.

"ಯಾವ ಜನಾಂಗವೇ ಆಗಲಿ ಜೀವನದ ಎಲ್ಲಾ ಕ್ಷೇತ್ರಗಳಲ್ಲಿಯೂ ಪ್ರಗತಿ ಹೊಂದಬೇಕಾದರೆ ಶಿಕ್ಷಣ ಅತ್ಯವಶ್ಯಕ. ಸರಿಯಾದ ಶಿಕ್ಷಣವಿಲ್ಲದಿದ್ದಲ್ಲಿ ಯಾವ ಯೋಜನೆಯೂ ಫಲಕಾರಿಯಾಗದು. ನಾಲ್ಕನೇ ಪಂಚವಾರ್ಷಿಕ ಯೋಜನೆಯಲ್ಲಿ ೬೦ ಕೋಟಿ ರೂಪಾಯಿಗಳನ್ನು ಶಿಕ್ಷಣಕ್ಕಾಗಿ ಮಂಜೂರು ಮಾಡಲಾಗಿದೆ. ಉನ್ನತ ವ್ಯಾಸಾಂಗಕ್ಕಾಗಿ ತೆರಳುವ ಆದಿವಾಸಿ ವಿದ್ಯಾರ್ಥಿಗಳಿಗೆ ಅಸ್ಸಾಂ, ಬಿಹಾರ್, ಗುಜರಾತ್ ಹಾಗೂ ಮಹಾರಾಷ್ಟ್ರ ಸರ್ಕಾರಗಳು ವಿದ್ಯಾರ್ಥಿ ವೇತನಗಳನ್ನು ಕೊಡುತ್ತಿವೆ. ಕೇಂದ್ರ ಸರ್ಕಾರ ಶಿಕ್ಷಣಕ್ಕಾಗಿ ಕೊಡುವ ಒಟ್ಟು ಮೊಬಲಗಿನಲ್ಲಿ ಶೇಕಡ ೧೬ ೧/೨ ಭಾಗ ಆದಿವಾಸಿ ವಿದ್ಯಾರ್ಥಿಗಳಿಗೆ

ಮೀಸಲಾಗಿದೆ. ಸುಧಾರಿತ ಸನ್ನಿವೇಶಗಳಲ್ಲಿ ಹಾಸ್ಟೆಲ್ ಸೌಲಭ್ಯವನ್ನು ಕಲ್ಪಿಸಿಕೊಡಲಾಗಿದೆ. ಆದರೆ ಸ್ವತಂತ್ರ್ಯಪ್ರಿಯರಾದ ಆದಿವಾಸಿಗಳಿಗೆ ತರಗತಿಯ ಕೋಣೆಗಳ ಶಿಕ್ಷಣ ವ್ಯವಸ್ಥೆ ಹಿಡಿಸುವುದಿಲ್ಲ. ಈ ವ್ಯವಸ್ಥಿತ ಕ್ರಮ ಅವರಿಗೆ ಕ್ರೂರ ಹಿಂಸೆಯಾಗುವಂತಿದೆ. ಕೇವಲ ಶಾಲೆಯ ಶಿಕ್ಷಣದಿಂದ ಅವರಿಗೆ ಬೇಸರವಾಗಬಾರದೆಂದು ಅವರ ಪಂಚಪ್ರಾಣವಾದ ಗಾಯನ, ನೃತ್ಯ ಮುಂತಾದ ಮನರಂಜನೆಯ ಸೌಲಭ್ಯಗಳನ್ನು ಒದಗಿಸಲಾಗಿದೆ. ಇಂದು ೬೦೦ ಶ್ರಮ ಮಾದರಿಯ ಶಾಲೆಗಳು ಆಂಧ್ರಪ್ರದೇಶ, ಗುಜರಾತ್, ಮಹಾರಾಷ್ಟ್ರ, ತಮಿಳುನಾಡು, ಕರ್ನಾಟಕ, ಒರಿಸ್ಸಾ, ರಾಜಸ್ಥಾನ, ಹಿಮಾಚಲ ಪ್ರದೇಶ ಹಾಗೂ ತ್ರಿಪುರ ಮುಂತಾದ ಕಡೆಗಳಲ್ಲಿ ಸ್ಥಾಪಿತವಾಗಿವೆ. ಆದಿವಾಸಿಗಳಿಗೆ ಅವರವರ ಮಾತೃಭಾಷೆಯಲ್ಲಿಯೇ ಶಿಕ್ಷಣ ನೀಡಬೇಕೆಂಬ ತನ್ನ ಧೋರಣೆಯನ್ನು ಭಾರತ ಸರ್ಕಾರ ಸಮ್ಮೇಳನಗಳಲ್ಲಿ ಪ್ರಕಟಿಸದೇ ಇದ್ದರೂ ಅವರು ಪ್ರಾಂತೀಯ ಭಾಷೆಗಳನ್ನು ಕಲಿಯುವಂತೆ ಮಾಡಿರುವ ಉದಾಹರಣೆಗಳು ಇವೆ. ಅವರ ಶಿಕ್ಷಣಕ್ಕಾಗಿ ಭಾರತ ಸರ್ಕಾರ ಕೋಟ್ಯಾಂತರ ರೂಪಾಯಿಗಳನ್ನು ವೆಚ್ಚಮಾಡುತ್ತಿದೆ."[೪] ಆದರೂ ಸಹ ಆದಿವಾಸಿಗಳನ್ನು ಸಮಾಜದ ಮುಖ್ಯವಾಹಿನಿಗೆ ಎಳೆ ತರಲಾಗುತ್ತಿಲ್ಲ. ಇದಕ್ಕೆ ಯೋಜನೆಗಳಲ್ಲೆ ಅನೇಕ ಲೋಪದೋಷಗಳಿರುವುದು ಕಂಡುಬರುತ್ತದೆ. ಹೀಗಾಗಿ ಆದಿವಾಸಿಗಳ ಪರಿವರ್ತನೆಗೆ ರೂಪಿಸಿದ ಮಾರ್ಗಗಳು ಫಲಕಾರಿಯಾಗುತ್ತಿಲ್ಲ. ಆದಿವಾಸಿಗಳಿಗೆ ಕ್ಷೇಮಾಭಿವೃದ್ಧಿಗೆ ರೂಪಿಸಿದ ಯೋಜನೆಗಳು ಅವರ ಪರಿಸರಕ್ಕೆ ಹೊಂದಿಕೊಳ್ಳುವಂತಿದ್ದರೆ ಮಾತ್ರ ಯಶಸ್ವಿಯಾಗಲು ಸಾಧ್ಯವಾಗಬಹುದು.

## ಗೋಸಂಗಿಗಳ ಸಂಘಟನೆಗಳು

ವರ್ತಮಾನದಲ್ಲಿ ಅನೇಕ ಸಮುದಾಯಗಳು ತಮ್ಮ ತಮ್ಮ ಕಲ್ಯಾಣ ಸಾಧನೆಗಾಗಿ ಸಂಘಟನೆಗಳನ್ನ ಕಟ್ಟಿಕೊಳ್ಳುತ್ತಿವೆ. ಹೀಗೆ ಸಂಘಟಿತವಾಗುವ ಸಮುದಾಯದ ಆಶಯಗಳು ಮಾತ್ರ ರಾಜಕೀಯವಾಗಿ ತೀರಾ ಅಮಾಯಕ ನೆಲೆಗಳಿಂದಲೇ ರೂಪಗೊಂಡಿರುತ್ತವೆ. ಈವತ್ತಿನ ಬಹುತೇಕ ಜಾತಿ ಸಂಘಟನೆಗಳ ರಾಜಕೀಯ ನೆಲೆಗಳು ವ್ಯವಸ್ಥೆಗೆ ಪೂರಕವಾಗಿಯೇ ಇವೆ. ಹೀಗಾಗಿ ಜಾತಿ ಸಂಘಟನೆಗಳು, ಈಗಿರುವ ರಾಜಕೀಯ ವ್ಯವಸ್ಥೆಯಲ್ಲಿ ತಮಗೆ ದಕ್ಕಬೇಕಾದ ಸೌಲಭ್ಯಗಳನ್ನ ಮಾತ್ರ ಗುರಿಯಾಗಿರಿಸಿಕೊಂಡು ಶಕ್ತಿರಾಜಕಾರಣದ ಒಂದು ಭಾಗವಾಗಿಯೇ ಕಾರ್ಯನಿರತವಾಗುತ್ತವೆ. ಕರ್ನಾಟಕದ ಬಹುತೇಕ ಜಾತಿಸಂಘಟನೆಗಳು ಇದೇ ಬಗೆಯಲ್ಲಿ ಕಾರ್ಯನಿರತವಾಗಿವೆ. ಅದರಲ್ಲೂ ಒಂದೊಂದು ಜಾತಿಸಂಘಟನೆಯನ್ನ ಪ್ರಸಿದ್ಧ ಮಠಗಳು ಖಚಿತವಾಗಿ ನಿರ್ದೇಶಿಸುತ್ತವೆ. ಯಾವ ಸಂಘಟನೆ ಬಹುಸಂಖ್ಯಾತ ದುರ್ಬಲರನ್ನ ಮರೆತು, ಶಕ್ತ ರಾಜಕಾರಣದ ಒಂದು ಭಾಗವಾಗುವುದೋ, ಅದು ಅರಾಜಕ ನೆಲೆಯಲ್ಲಿ ತನ್ನದೇ ಜಾತಿಯ ಬಡವನ ವಿರುದ್ಧ ಕಾರ್ಯಾಚರಣೆಗೆ ಇಳಿಯುತ್ತದೆ.

ಕರ್ನಾಟಕದ ಬಹುತೇಕ ಕೆಳಜಾತಿಗಳ ಸಂಘಟನೆಗಳು ವಿಫಲವಾಗಿರುವುದು ಅವುಗಳ ಅರಾಜಕ ನಿಲುವುಗಳಿಂದಾಗಿಯೇ. ಡಿ.ಎಸ್.ಎಸ್ ನಂತಹ ಪ್ರಬಲ ಶಕ್ತಿಯೊಂದು ಕರ್ನಾಟಕದಲ್ಲಿ ಮೂಲೆಗುಂಪಾಗಿದ್ದು

ಸಹ ಈ ಬಗೆಯ ಸೈದ್ಧಾಂತಿಕ ಸ್ಪಷ್ಟನೆ ಇಲ್ಲದ, ಅದರ ಗುರಿಯಿಲ್ಲದ ಕಾರ್ಯಚರಣೆಗಳಿಂದ, ಡಿ.ಎಸ್.ಎಸ್ ಕರ್ನಾಟಕದ ಎಲ್ಲಾ ಕಾರ್ಮಿಕರನ್ನ, ದಲಿತರನ್ನ, ಶ್ರಮಜೀವಿಗಳನ್ನ, ಅಲೆಮಾರಿ, ಆದಿವಾಸಿ ಜನಸಮುದಾಯಗಳನ್ನ ಒಳಗೊಂಡ ಒಂದು ಬೃಹತ್ ಪರ್ಯಾಯ ಶಕ್ತಿಯಾಗಿ ರೂಪಗೊಳ್ಳುವ ಅವಕಾಶಗಳಿದ್ದವು. ಆದರೆ ರಾಜಕೀಯ ಬದ್ಧತೆಯಿಲ್ಲದೇ ಉಂಟಾದ ಆಂತರಿಕ ಬಿಕ್ಕಟ್ಟುಗಳು ಡಿ.ಎಸ್.ಎಸ್‌ನ್ನ ನಿಷ್ಕ್ರೀಯವಾಗಿಸಿದವು. ಈವತ್ತು ಡಿ.ಎಸ್.ಎಸ್ ಅನೇಕ ತುಣುಕುಗಳಾಗಿ ಜೀವಂತವಾಗಿದ್ದರೂ ಸಹ, ಒಂದು ಪರ್ಯಾಯ ಶಕ್ತಿಯಾಗಿ ಬೆಳೆಯುವ ಅವಕಾಶವನ್ನು ಅದು ಎಂದೋ ಬಿಟ್ಟುಕೊಟ್ಟಿತು. ಅದಕ್ಕೆ ಆ ಸಂಘಟನೆಯನ್ನ ರೂಪಿಸಿದ ರಾಜಕೀಯ ನಿಲುವುಗಳೇ ಕಾರಣ.

ಈಗಿನ ಕೆಳಜಾತಿಗಳ ಸಂಘಟನೆಗಳು ಪರ್ಯಾಯ ಶಕ್ತಿಯನ್ನ ರೂಪಿಸುವ ಒಂದು ಜವಾಬ್ದಾರಿಯುತ ಆಶಯಗಳನ್ನ ಯಾವತ್ತೋ ಬಿಟ್ಟುಕೊಟ್ಟಿವೆ. ಕೇವಲ ಮೀಸಲಾತಿ ಮತ್ತು ಅನುದಾನಗಳನ್ನ ಪಡೆಯುವ ಸೀಮಿತ ಉದ್ದೇಶಗಳಿಗಳಾಗಿ ಮಾತ್ರ ಸಂಘಟನೆಗಳು ಹುಟ್ಟಿಕೊಳ್ಳುತ್ತಿವೆ. ಸಂಘಟನೆಗಳ ಜೊತೆ ಆಯಾ ಜಾತಿಗಳ ಮಠಗಳೂ ಜನ್ಮತಾಳಿ ವಿಚಿತ್ರ ರೀತಿಯಲ್ಲಿ ಕಾರ್ಯಚರಣೆಗಿಳಿಯುತ್ತಿವೆ. ಮುಂದೆ ಇದೇ ಮಠ ಸಂಘಟನೆಯ ನಿಯಂತ್ರಿಕ ಶಕ್ತಿಯಾಗಿ ನಿಂತು ಬಿಡುತ್ತದೆ. ಒಟ್ಟಿನಲ್ಲಿ ಸೈದ್ಧಾಂತಿಕವಾಗಿ ಸ್ಪಷ್ಟವಾಗಿಲ್ಲದ ಯಾವುದೇ ಸಂಘಟನೆ, ಎಷ್ಟೇ ಬಲಶಾಲಿಯಾಗಿದ್ದರೂ ಸಹ ಅಂತಿಮವಾಗಿ ಅದು ವ್ಯವಸ್ಥೆಗೆ ಪೂರಕವಾಗಿ ಶೋಷಣೆಯ ಕೇಂದ್ರವಾಗಿಯೇ ರೂಪಗೊಳ್ಳುತ್ತದೆ. ಅಲ್ಲಿ ಆಯಾ ಸಮುದಾಯದ ದುರ್ಬಲರ ರಕ್ಷಣೆ ಮತ್ತು ಹಿತಸಂವರ್ಧನೆಯ ಮಾತು ಕನಸಾಗಿಯೇ ಉಳಿಯುತ್ತದೆ.

ಗೋಸಂಗಿಗಳು ಇಂದು ತಮ್ಮ ಕಲ್ಯಾಣಕ್ಕಾಗಿ ರಾಜ್ಯ, ಜಿಲ್ಲಾ ಹಾಗೂ ತಾಲ್ಲೂಕು ಮಟ್ಟದ ಸಂಘಟನೆಗಳನ್ನು ಕಟ್ಟಿಕೊಂಡಿದ್ದಾರೆ. ಈ ಸಂಘಟನೆ ಹುಟ್ಟಿಕೊಳ್ಳಲು ಮೂಲಪ್ರೇರಣೆ ಹೊಸಪೇಟೆಯಲ್ಲಿನ ಗೋಸಂಗಿಗಳೇ ಆಗಿದ್ದಾರೆ. ಇಲ್ಲಿಯ ಮುಖಂಡರೆಲ್ಲ ಸೇರಿ ಕರ್ನಾಟಕದಲ್ಲಿನ ಬೇರೆ ಬೇರೆ ಜಿಲ್ಲೆಗಳಲ್ಲಿರುವ ಗೋಸಂಗಿಗಳನ್ನು ಸೇರಿಸಿ, ಅಧ್ಯಕ್ಷ, ಉಪಾಧ್ಯಕ್ಷ, ಸಂಚಾಲಕರನ್ನು ಆಯ್ಕೆಮಾಡಿ, ತಮ್ಮ ಸಮುದಾಯಕ್ಕೆ ಬೇಕಾದ ಮೂಲಭೂತ ಸೌಕರ್ಯಗಳನ್ನು ಪಡೆಯುವಲ್ಲಿ ಪ್ರವೃತ್ತರಾಗಿದ್ದಾರೆ.

## ಅಡಿಟಿಪ್ಪಣಿಗಳು

೧. ಪ್ರೊ. ಕಾಳೇಗೌಡ ನಾಗವಾರ, ಎನ್. ಹುಚ್ಚಪ್ಪ ಮಾಸ್ತರ, ಸಂ. ಗಿರಿಜನ ಸಂಸ್ಕೃತಿ, ಪುಟ: ೨೬, ೨೦೦೦
೨. ಎಂ. ನಂಜಮ್ಮಣ್ಣಿ, ಭಾರತೀಯ ಸಮಾಜಿಕ ಸಂಸ್ಥೆಗಳು, ಪುಟ: ೩೨೧, ೧೯೮೨
೩. ಅದೇ, ಉದ್ಧೃತ, ಪುಟ: ೩೨೨, ೧೯೮೨
೪. ಅದೇ, ಪುಟ: ೩೨೬



# ಸಮಾರೋಪ

ಭಾರತದ ಬಹುತ್ವದ ಅಂತಃಸ್ಥ ಜಗತ್ತು ವೈವಿಧ್ಯಮಯ. ಶ್ರೇಣೀಕರಣದ ವಿಷಮ ಸಮಾಜದಲ್ಲಿ ಅನೇಕ ಅಸಮಾನತೆಗಳಿದ್ದರೂ, ಅಪಾರ ತಿಳುವಳಿಕೆಯನ್ನು ಕಟ್ಟಿಕೊಂಡ ಸಮುದಾಯಗಳು ಇನ್ನೂ ನಮ್ಮ ಪಾರಂಪರಿಕ ಚಹರೆಗಳನ್ನು ಉಳಿಸಿಕೊಂಡಿವೆ. ಆಧುನಿಕ ಜಗತ್ತಿನ ಲೌಕಿಕ ಸವಲತ್ತುಗಳಿಂದ ವಂಚಿಸಲ್ಪಟ್ಟಿದ್ದರೂ ಸಹ ಜತನದಿಂದ ತಮ್ಮ ಅನನ್ಯತೆಯನ್ನು ಕಾಯ್ದುಕೊಳ್ಳಲು ಈ ಸೋತ ಸಮುದಾಯಗಳು ಯತ್ನಿಸುತ್ತಲೇ ಇವೆ. ಲೌಕಿಕ ಅಧಿಕಾರಗಳಿಂದ ದೂರವಿರುವ ಪರಾಜಿತ ಸಮುದಾಯದ ಅಂತಃಸ್ಥ ಲೋಕ ಅನೇಕ ಕೌಶಲ್ಯಗಳನ್ನು ಸಹಜವಾಗಿ ಹೊಂದಿರುತ್ತದೆ. ಕಾಲದ ಪರಿವೆಯಿಲ್ಲದೆ ದಬ್ಬಾಳಿಕೆಯನ್ನು ಅವುಡುಗಚ್ಚಿ ಅನುಭವಿಸಿದ್ದುದರ ಫಲವೇ ಇರಬೇಕು, ಈ ಸಮುದಾಯಗಳು ಅನೇಕ ಬೌದ್ಧಿಕ ಚಮತ್ಕಾರಗಳನ್ನು ಕಟ್ಟಿಕೊಂಡಿವೆ. ಭೌತಿಕ ಜಗತ್ತನ್ನು ಸುಂದರವಾಗಿ ನಿರ್ಮಿಸಿದ್ದು ಕೌಶಲ್ಯಗಳನ್ನು ರೂಪಿಸಿಕೊಂಡ ಇವೇ ಶ್ರಮಿಕ ಸಮಾಜಗಳು. ಈ ಶ್ರಮಿಕ ಸಮುದಾಯಗಳು, ಭಾರತವನ್ನು ಆಳಿದ ವಿವಿಧ ಪ್ರಭುತ್ವಗಳಿಂದ ಹೀನಾಯವಾಗಿ ನಡೆಸಿಕೊಂಡಿವೆ. ಇಡೀ ಜಗತ್ತು ಅಮಾಯಕ ಸ್ಥಿತಿಯಲ್ಲಿ ಚಲಿಸುತ್ತಿದ್ದಾಗ, ಭಾರತದ ಸಮಾಜವನ್ನು ನಿಯಂತ್ರಿಸುವ ಕಾನೂನುಗಳು ರಚಿಸಲ್ಪಟ್ಟಿದ್ದವು. ಯಾರು ಓದಬೇಕು? ಯಾರು ಹೋರಾಡಬೇಕು? ಯಾರು ವ್ಯವಹರಿಸಬೇಕು? ಯಾರು ಸೇವೆ ಮಾತ್ರ ಮಾಡಿಕೊಂಡಿರಬೇಕು? ಎಂಬ ಸಾಮಾಜಿಕ ನಿಯಮಗಳು ಧರ್ಮಶಾಸ್ತ್ರಗಳ ಪ್ರಕಾರವೇ ರೂಪಗೊಂಡವು. ಕೆಲವೇ ಸಮುದಾಯಗಳ ಹಿತಾಸಕ್ತಿಗೆ ಇಂಡಿಯಾದ ಸಮಾಜದಲ್ಲಿ ಅನೇಕ ವಿಷಮ ಸ್ಥಿತಿಗಳು ರೂಪಗೊಂಡವು. ಸಾಮಾಜಿಕ ಸ್ಥಾನಮಾನಗಳಿಗೆ ಅನುಗುಣವಾಗಿ ಆರ್ಥಿಕ ಮತ್ತು ಶೈಕ್ಷಣಿಕ ಸವಲತ್ತುಗಳು ಲಭ್ಯವಾದವು. ಶ್ರೇಣೀಕರಣದ ಕೆಳಗಿನ, ಅಂಚಿನ ಸಮುದಾಯಗಳಿಗೆ ಎಲ್ಲಾ ಬಗೆಯ ಲೌಕಿಕ ಅಧಿಕಾರಗಳು ಕೈಗೆಟುಕದಾದವು. ಸಾಮಾಜಿಕ ಕಾನೂನುಗಳು ವಿಧಿಸಿದ ಅತ್ಯಂತ ಕಠಿಣ ಮತ್ತು ಹೇಯ ದುಡಿಮೆಗಳಲ್ಲಿ ಈ ಸಮುದಾಯಗಳು ಅನಿವಾರ್ಯವಾಗಿ ನಿರತವಾಗಲೇಬೇಕಿತ್ತು.

ಚರಿತ್ರೆಯ ಗತಿಯಲ್ಲಿ, ಭಾರತದ ಆರ್ಥಿಕ ವ್ಯವಸ್ಥೆಯಲ್ಲಿ ಉಂಟಾದ ಅನೇಕ ರೂಪಾಂತರಗಳು ಈ ಶ್ರಮಿಕ ಸಮಾಜಗಳಿಗೆ ಎಂದೂ ಪೂರಕವಾಗಿರುವ ಸಂದರ್ಭಗಳು ಬರಲೇ ಇಲ್ಲ. ಭೂಮಿಯ

ಪಾರಂಪರಿಕ ಅವಲಂಬನೆಯೂ ಮಧ್ಯಕಾಲೀನ ರಾಜಕೀಯ ಸ್ಥಿತ್ಯಂತರಗಳ ಫಲವಾಗಿ ಈ ಸಮಾಜಗಳಿಗೆ ಇಲ್ಲದಾಯಿತು. ಭಾರತವವನ್ನ ಬೃಹತ್ ದಂಡಯಾತ್ರೆಗಳು, ವಿಶಾಲ ಸಾಮ್ರಾಜ್ಯಗಳು ಆಕ್ರಮಿಸಿಕೊಂಡಾಗ, ಪ್ರಭುತ್ವಗಳು ರಾಜ್ಯಗಳ ಪ್ರಮುಖ ಆದಾಯಕ್ಕೆ ಭೂಮಿಯನ್ನೇ ಕೃಷಿಯನ್ನು ಅವಲಂಬಿಸಿದವು. ಭೂಮಿಯ ಒಡೆತನ ಮತ್ತು ತೆರಿಗೆ ಪದ್ಧತಿಗಳು ಕಟ್ಟುನಿಟ್ಟಾಗಿ ರೂಪಗೊಂಡ ಮೇಲೆ ಭೂಮಿ ಪ್ರಬಲ ಕೋಮುಗಳ ವಶವಾಯ್ತು. ರಾಜರಿಂದ ಕನಿಷ್ಠ ಪ್ರೋತ್ಸಾಹಗಳನ್ನ ನಿರೀಕ್ಷಿಸುತ್ತಲೇ ಇದ್ದ ಕುಶಲಕರ್ಮಿಗಳು, ಮನರಂಜಕ ಸಮುದಾಯಗಳು, ಪಂಚಮರು ಅಕ್ಷರಶಃ ಬದಲಾದ ಆರ್ಥಿಕ ವ್ಯವಸ್ಥೆಯಿಂದ ದಿಕ್ಕೆಟ್ಟು ಹೋದವು. ವಸಾಹತುಶಾಹಿ ಆಡಳಿತ ಮತ್ತು ಪಶ್ಚಿಮದ ಆಧುನಿಕತೆ ಇಂಡಿಯಾಕ್ಕೆ ಬಂದ ಮೇಲಂತೂ, ಇಲ್ಲಿನ ಗುಡಿಕೈಗಾರಿಕೆಗಳು, ಪಾರಂಪರಿಕ ಉತ್ಪಾದನಾವ್ಯವಸ್ಥೆ, ನಿಶ್ಚಿತ ಆರ್ಥಿಕ ಮೂಲಗಳಿಲ್ಲದ ಸಮುದಾಯಗಳು ದಿಕ್ಕೆಟ್ಟು ಹೋದವು. ಪಶ್ಚಿಮದ ಉಪಯೋಗವಾದಿ ದೃಷ್ಟಿಕೋನ ಹೃದಯವಿಲ್ಲದ ವಸಾಹತುಶಾಹಿ ಆಡಳಿತವನ್ನ ರೂಪಿಸಿತ್ತು, ಶ್ರಮಿಕ ವರ್ಗಗಳು ಈ ಆಡಳಿತಾವಧಿಯಲ್ಲಿ ಇನ್ನಿಲ್ಲದಂತೆ ನಲುಗಿಹೋದವು. ಕುಶಲಕರ್ಮಿವರ್ಗ, ಸಾಮಾಜಿಕ ಮನರಂಜಕರು, ಗುಡಿಕೈಗಾರಿಕೆಗಳಲ್ಲಿ ತೊಡಗಿಕೊಂಡಿದ್ದ ಸಮುದಾಯಗಳು ಸ್ಪಷ್ಟವಾಗಿ ತಮ್ಮ ನೆಲೆಗಳನ್ನು ಕಳೆದುಕೊಂಡವು. ಯಂತ್ರಗಳು ಮತ್ತು ಪಶ್ಚಿಮದ ಆಸೆಬುರುಕ ಆಳ್ವಿಕೆಗಳೆರಡೂ ಮೇಲಿನ ಸಮುದಾಯಗಳನ್ನು ಒಕ್ಕಲೆಬ್ಬಿಸಿದವು. ವಸಾಹತುಶಾಹಿಯ ಅರಣ್ಯನೀತಿಯಂತೂ ಭಾರತದ ಒಟ್ಟು ನೈಸರ್ಗಿಕ ಸಂಪನ್ಮೂಲವನ್ನು ಪಶ್ಚಿಮದ ರಾಷ್ಟ್ರಗಳಿಗೆ ಹೊತ್ತೊಯ್ದುಬಿಟ್ಟಿತು. ಆದಿವಾಸಿಗಳು ಕಾಡಿನಿಂದ ಹೊರಬಿದ್ದು ನೆಲೆ ಇಲ್ಲದೆ ಅಲೆಮಾರಿಗಳಾದರೂ, ಅವರ ಪಾರಂಪರಿಕ ಕೃಷಿಯನ್ನ ಬ್ರಿಟಿಷರ ಎಸ್ಟೇಟುಗಳು ನುಂಗಿಹಾಕಿದವು. ವಸಾಹತು ಆಡಳಿತಕ್ಕೆ ತಿರುಗಿಬಿದ್ದ ಆದಿವಾಸಿಗಳನ್ನ ಸಿಕ್ಕಸಿಕ್ಕಲ್ಲಿ ಬ್ರಿಟಿಷರ ಬಂದೂಕಗಳು ಸೋಲಿಸಿಬಿಟ್ಟವು. ಭಾರತದ ಅರಾಜಕ ಸಮಾಜವನ್ನ ಬ್ರಿಟಿಷ್ ಸೈನ್ಯ ಆವರಿಸಿಕೊಂಡ ಮೇಲೆ, ದೇಶೀಯ ಭೂಮಾಲಿಕರು ಮತ್ತು ಬಂಡವಾಳಶಾಹಿಗಳ ಜೊತೆಗಿನ ವಸಾಹತು ಆಡಳಿತದ ಅಪವಿತ್ರ, ಮೈತ್ರಿ ರಾಕ್ಷಸೀ ಕಾನೂನುಗಳು ಅವರ ಆಡಳಿತವನ್ನು ನಿರಾತಂಕದಿಂದ ಮುನ್ನಡೆಸಿದವು. ಬ್ರಿಟಿಷರ ಆಧುನಿಕ ಶಸ್ತ್ರಗಳು ಮತ್ತು ದೇಶೀಯ ಭೂಮಾಲಿಕರ, ಬಂಡವಾಳಶಾಹಿಗಳ ಮತಿಮುರುಕುತನಗಳು ಶ್ರಮಿಕ ವರ್ಗಗಳ ಪ್ರತಿಭಟನೆಗಳನ್ನ ಹೀನಾಯವಾಗಿ ಹತ್ತಿಕ್ಕಿದವು. ಅಲ್ಲದೆ ಈ ಪ್ರತಿಭಟನೆಗಳನ್ನ ದೇಶದ್ರೋಹಿ ದಂಗೆಗಳೆಂದು ಕರೆಯಲ್ಪಟ್ಟವು.

ಭಾರತದ ಈ ಗೋಜಲು ಆರ್ಥಿಕ ರೂಪಾಂತರಗಳು, ಶ್ರಮಿಕ ವರ್ಗದ, ಕುಶಲಕರ್ಮಿಗಳ ಬದುಕುಗಳನ್ನು ವಿಚಿತ್ರವಾಗಿಯೇ ರೂಪಿಸಿದವು. ಚರಿತ್ರೆಯ ಯಾವ ಘಟ್ಟದಲ್ಲಿ ಈ ಸಮುದಾಯಗಳ ತಮ್ಮ ನಿಶ್ಚಿತ ಆರ್ಥಿಕ ಮೂಲಗಳನ್ನು ಕಳೆದುಕೊಂಡವೋ, ಅಲ್ಲಿಂದ ಇಲ್ಲಿಯವರೆಗೂ ಅವು ತಮ್ಮ ವಿಷಮಸ್ಥಿತಿಗಳನ್ನು ಮೀರಲು ಯತ್ನಿಸುತ್ತಲೇ ಇವೆ. ಆಧುನಿಕ ನಗರಬದಿಯ ಸ್ಲಮ್‌ಗಳಲ್ಲಿದ್ದರೂ ಯಾವುದೇ ಪ್ರಬಲ ಬದಲಾವಣೆಗಳಿಗೆ ಪಕ್ಕಾಗದೆ, ತಮ್ಮತನವನ್ನು ಉಳಿಸಿಕೊಂಡು ಆಧುನಿಕ ಮೋಹಗಳನ್ನ ಈ ಸಮುದಾಯಗಳು ನಿರಂತರವಾಗಿ ಹೊಂದುತ್ತಲೇ ಇವೆ. ಆಧುನಿಕತೆ ಭಾರತದ ಪಾರಂಪರಿಕ

ಸಮಾಜಗಳನ್ನು ರೂಪಾಂತರಿಸಿತು. ನಿಂತು ವಾದಿಸುವ ಚರ್ಚಾಪಟುಗಳಿಗೆ ಈ ಅಲೆಮಾರಿಗಳು ವ್ಯಂಗ್ಯಚಿತ್ರಗಳಂತೆ ಗೋಚರಿಸಿದರೆ ಆಶ್ಚರ್ಯಪಡಬೇಕಿಲ್ಲ. ಆಧುನಿಕತೆ, ಜಾಗತೀಕರಣಗಳು ಈ ಬಗೆಯ ಸಮುದಾಯಗಳ ಜೊತೆ ಹೇಗೆ ಅನುಸಂಧಾನ ಮಾಡುತ್ತವೆ ಎಂಬುದನ್ನ ವಿವರಿಸುವುದು ಕಷ್ಟ.

ಭಾರತದ ಬಹುತ್ವ ಮತ್ತು ಅಂತರಂಗದ ಜಗತ್ತು ಬೇಗ ತನ್ನನ್ನು ವಿವರಣೆಗಳಿಗೆ ಒಡ್ಡಿಕೊಳ್ಳುವುದಿಲ್ಲ. ಚರಿತ್ರೆಯ ದಾಪುಗಾಲಿನ ನಡಿಗೆಯಲ್ಲಿ ಅಧಿಕಾರ ರಹಿತದ ಹೆಜ್ಜೆ ಗುರುತುಗಳು ಸುಲಭವಾಗಿ ಅಧ್ಯಯನಕಾರರಿಗೆ ದಕ್ಕಲಾರವು. ಲೌಕಿಕ ಅಧಿಕಾರಗಳ ಅಬ್ಬರದ ಅಲೆಗಳು ಈ ಸಮುದಾಯಗಳ ಚರಿತ್ರೆಯ ಗುರುತುಗಳನ್ನು ನುಂಗಿ ನೊಣೆದು ಹಾಕಿವೆ. ಹೀಗಾಗಿ ಈ ಸಮುದಾಯಗಳ 'ನಿನ್ನೆ'ಗಳನ್ನ ಕಟ್ಟಿಕೊಡಲು ನಮಗೆ ಲಭ್ಯವಿರುವ ಆಕರಗಳೆಂದರೆ, ಅವುಗಳು ಕಟ್ಟಿಕೊಂಡಿರುವ ಅಪಾರ ಮೌಖಿಕ ಸಾಹಿತ್ಯ, ಚರಿತ್ರೆಯ ಯಾವುದೇ ಕಾಲಘಟ್ಟದಲ್ಲಿ ಮುಖ್ಯವಾಹಿನಿಗೆ ಪ್ರತಿಯಾಗಿ ರೂಪಗೊಳ್ಳಲಾರಂಭಿಸಿದ ಈ ವಿಶಿಷ್ಟ ದರ್ಶಗಳ ಮೂಲಕ ಪ್ರಸ್ತುತ ಸಮುದಾಯಗಳ ಚರಿತ್ರೆಯನ್ನು ಕಟ್ಟಿಕೊಡಲು ಯತ್ನಿಸಬಹುದು. ಶ್ರಮಜೀವಿಗಳ ಈ ದರ್ಶನಗಳು ಮುಖ್ಯವಾಹಿನಿಯ ಸತ್ಯಗಳನ್ನು ಪ್ರಶ್ನಿಸುತ್ತವೆ. ಯಾವುದೇ ಹಿತಾಸಕ್ತಿಗಳನ್ನು ರಕ್ಷಿಸಲು ರೂಪಗೊಂಡ ಜ್ಞಾನಶಿಸ್ತುಗಳನ್ನು ಮುಖಾಮುಖಿಮಾಡಿ ಗುದ್ದಾಡುತ್ತವೆ. ಕೆಳಜಾತಿಗಳ, ಆದಿವಾಸಿ ಸಮುದಾಯಗಳ, ಅಲೆಮಾರಿ ಬುಡಕಟ್ಟುಗಳ ಈ ವಿಶಿಷ್ಟ ಬೌದ್ಧಿಕ ಪ್ರಪಂಚದ ಒಳಗೆ ಈ ಬಗೆಯ ದಂಗೆಯ ದನಿಗಳು ಸದಾ ಪ್ರವಹಿಸುತ್ತಲೇ ಇರುತ್ತವೆ.

ನನ್ನ ಈ ಅಧ್ಯಯನದುದ್ದಕ್ಕೂ ಗೋಸಂಗಿಗಳ ಬದುಕಿನ ಅನೇಕ ವಿವರಗಳನ್ನ ಕೊಟ್ಟಿದ್ದೇನೆ. ಗೋಸಂಗಿಯಂತಹ ಸಮುದಾಯವೊಂದು ಇತಿಹಾಸದುದ್ದಕ್ಕೂ ಅನೇಕ ಶಕ್ತಪಂಥಗಳ ಪ್ರಭಾವಕ್ಕೆ ಒಳಗಾಗಿದ್ದರೂ ಸಹ ತನ್ನ ಚಹರೆಗಳನ್ನು ಕಾಯ್ದುಕೊಂಡುಬಂದಿದೆ. ಕೆಳಜಾತಿ ಶ್ರಮಿಕ ವರ್ಗಗಳು ಸಹಜವಾಗಿ ಪಕ್ಕವ ನಾಥಪಂಥದ ಪ್ರಭಾವಗಳನ್ನು ಮೈಗೂಡಿಸಿಕೊಂಡಿದೆ. ಮಹಾರಾಷ್ಟ್ರದ ದಕ್ಷಿಣದ ಅಂಚಿನಿಂದ ಕರ್ನಾಟಕಕ್ಕೆ ವಲಸೆಬಂದ ಅನೇಕ ಅಲೆಮಾರಿ ಸಮುದಾಯಗಳಲ್ಲಿ ಗೋಸಂಗಿಗಳು ಪ್ರಮುಖರು ಆಧುನಿಕಪೂರ್ವ ಕರ್ನಾಟಕದ ಹಲವು ಕಡೆ ಈ ಬಗೆಯ ಸಮುದಾಯಗಳು ನೆಲೆಕಾಣಲು ಹಾತೊರೆದು ಬಂದವು. ಅನೇಕ ಉಪಕಸಬುಗಳನ್ನು ಅವಲಂಬಿಸಿ ಬದುಕಲಾರಂಭಿಸಿದವು. ಆದರೆ ಯಾವತ್ತೋ, ಎಲ್ಲೋ ಕಳೆದುಹೋಗಿದ್ದ ಅವರ ನಿಶ್ಚಿತ ಆರ್ಥಿಕ ಮೂಲಗಳು ಮತ್ತೆ ಅವರ ಕೈವಶವಾಗುವ ವ್ಯವಸ್ಥೆ ರೂಪಗೊಳ್ಳಲೇ ಇಲ್ಲ. ಸ್ವತಂತ್ರ ತಂದುಕೊಂಡು ಈಗಾಗಲೇ ೫೦-೬೦ ವರ್ಷಗಳನ್ನು ಕಳೆದು ಬಿಟ್ಟಿರುವ ಭಾರತದ ರಾಜಕಾರಣವೂ ಸಹ ಈ ಬಗೆಯ ಸಮುದಾಯಗಳ ಕುರಿತು ಕುರುಡಾಗಿ, ಬಹಳ ಸಲ ಅಮಾನವೀಯವಾಗಿ ವರ್ತಿಸಿತು. ಈಶಾನ್ಯ ಭಾರತದಲ್ಲಿ ಇನ್ನೂ ಆದಿವಾಸಿಗಳ ಸ್ವಾಯತ್ತ ಜೀವನದ ಕನಸುಗಳು ಸಕಾರಗೊಂಡಿಲ್ಲ. ಇನ್ನು ಇವರನ್ನು ಅಭಿವೃದ್ಧಿಪಡಿಸಿ ಮುಖ್ಯವಾಹಿನಿಗೆ ತರಬೇಕೆಂದು ಹೇಳುವ ಘೋಷಣೆಗಳು ಬರೀ ಬಡಬಡಿಕೆಗಳೇ ಆಗಿ ಉಳಿದಿವೆ. ದೇಶದ ಅಭಿವೃದ್ಧಿ ನೀತಿಯೇ ಮುಖ್ಯವಾಗಿ ವಸಾಹತು ಆಡಳಿತದ ಭಾಗವಾಗಿಯೇ ರೂಪಗೊಂಡಿದ್ದು, ಈ ಕಾರಣಕ್ಕೆ ಈ ಅಭಿವೃದ್ಧಿ ಪರಿಕಲ್ಪನೆಗೆ

ಅನೇಕ ಹಳವಂಡಗಳು ಮೈಗೂಡಿವೆ. ದೇಶದ ರಾಜಕಾರಣಕ್ಕೆ ಈ ಸಮುದಾಯಗಳ ಅಂತರಂಗಗಳೇ ಅರ್ಥವಾಗುತ್ತಿಲ್ಲ.

ಅಲೆಮಾರಿಗಳ ಚಾರಿತ್ರಿಕ ಬೆಳವಣಿಗೆ ಎಷ್ಟು ಸಂಕೀರ್ಣವೋ, ಅವುಗಳ ಅಭಿವೃದ್ಧಿ ಸಾಧಿಸುವ ಮಾರ್ಗವೂ ಅಷ್ಟೇ ಸಂಕೀರ್ಣವಾಗಿರುತ್ತದೆ. ಭಾರತದ ಸಮಾಜದ ಚಾರಿತ್ರಿಕ ವಿಕಾಸದ ಯಾವುದೋ ಹಂತದಲ್ಲಿ ನೆಲೆತಪ್ಪಿ ಹೋದ ಗೋಸಂಗಿಗಳ ಸಂಕೀರ್ಣ ಬದುಕು ಅನೇಕ ಜಟಿಲ ಸಮಸ್ಯೆಗಳಿಗೆ ಕಾರಣವಾಗಿದೆ. ವರ್ತಮಾನದಲ್ಲಿ ಸರಕಾರ ರೂಪಿಸುವ ಯಾವ ಯೋಜನೆಗಳು ಸಾರ್ಥಕ ರೀತಿಯಲ್ಲಿ ಇವರಿಗೆ ತಲುಪುತ್ತಿಲ್ಲ. ಸಿದ್ಧಮಾದರಿಯ ಯೋಜನೆಗಳು ಪ್ರತಿ ಹಂತದಲ್ಲೂ ರಾಜಕೀಯ ಮಧ್ಯಪ್ರವೇಶ ಇಲ್ಲವೆ ಅನುಷ್ಠಾನದಲ್ಲಿರುವ ಲೋಪಗಳಿಂದಾಗಿ ಈ ಬಗೆಯ ಸಮುದಾಯಗಳನ್ನ ತಲುಪುತ್ತಿಲ್ಲ. ಇಲ್ಲಿನ ವೈವಿಧ್ಯಮಯ ಸಮುದಾಯಗಳ ಸಂಕೀರ್ಣ ಜೀವನ ವಿಧಾನಗಳನ್ನೆ ತಜ್ಞಯೋಜನೆಗಳು ಮಾತ್ರ ತಲುಪಬಲ್ಲವು. ಅಲ್ಲದೆ ಅನುಷ್ಠಾನದ ವಿಧಾನಗಳೂ ಸಹ ತಾಯ್ ಮನಸ್ಸಿನಿಂದ ರೂಪಗೊಂಡಿರಬೇಕಾಗುತ್ತದೆ. ಆಧುನಿಕ ಅಹಂ ಮತ್ತು ವಿಕ್ಷಿಪ್ತ ಆತ್ಮಪ್ರತ್ಯಯಗಳ ಮೂಲಕ ಅನುಷ್ಠಾನಗೊಳ್ಳುವ ಯೋಜನೆಗಳಿಗೆ ಹೃದಯವೇ ಇರುವುದಿಲ್ಲ. ಉದ್ಧಾರ ಮಾಡಿಬಿಡುತ್ತೇವೆ ಎಂಬ ಕ್ಷುಲ್ಲಕ ಅಹಂಕಾರದ ಜೊತೆಗೆ ನಾವು ಆದಿವಾಸಿ ಮತ್ತು ಅಲೆಮಾರಿಗಳನ್ನು ತಲುಪಲು ಯತ್ನಿಸುತ್ತೇವೆ. ಈ ಬಗೆಯ ಸಾಂಪ್ರದಾಯಿಕ ಸೊಕ್ಕನ್ನು ಪರಂಪರಾಗತವಾಗಿ ವಿರೋಧಿಸುತ್ತಲೇ ಬಂದ ಈ ಸಮುದಾಯಗಳು ಎಂದೂ ಅಭಿವೃದ್ಧಿ ಯೋಜನೆಗಳಿಗೆ ಸ್ಪಂದಿಸಲಾರವು. ನರ್ಮದಾ ಕಣಿವೆಯಲ್ಲಿ ಕಟ್ಟಿದ ಸರ್ದಾರ್ ಸರೋವರ ಅಣೆಕಟ್ಟಿಗೆ ಇನ್ನೂ ಆದಿವಾಸಿಗಳ ಧಿಕ್ಕಾರದ ದನಿಗಳು ಮೊಳಗುತ್ತಲೇ ಇವೆ.

ಈ ಅಧ್ಯಯನ, ಗೋಸಂಗಿಗಳ ವರ್ತಮಾನದ ಬದುಕಿನ ಜೊತೆ ಅವರ ಚಾರತ್ರಿಕ ಬೆಳವಣಿಗೆಗಳನ್ನ ಅನಾವರಣ ಮಾಡುವ ಒಂದು ಪುಟ್ಟ ಪ್ರಯತ್ನವಾಗಿದೆ. ಇಲ್ಲಿ ಗೋಸಂಗಿಗಳ ಬದುಕಿನ ಯಥಾವತ್ತು ಚಿತ್ರಣ ಮತ್ತು ಕ್ಷೇತ್ರಕಾರ್ಯದ ಅನುಭವಗಳಿವೆ. ಇವರ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ, ಧಾರ್ಮಿಕ ಚಟುವಟಿಕೆಗಳ ಧಾರಾಳ ಮಾಹಿತಿ ಲಭ್ಯವಿದೆ. ಈ ಅಧ್ಯಯನ ಕೇವಲ ಶೈಕ್ಷಣಿಕ ಕಾರಣಕ್ಕಾಗಿ ರೂಪಗೊಂಡದ್ದೇನಲ್ಲ. ಒಂದು ಶೈಕ್ಷಣಿಕವಲ್ಲದು ಅಮಾಯಕ ಸಮುದಾಯವೊಂದರ ಅಬಿವೃದ್ಧಿಯ ಕನಸನ್ನೂ ಸಹ ಈ ಅಧ್ಯಯನ ಹೊಂದಿದೆ. ಇದು ಈ ಪ್ರಬಂಧದ ಹೆಚ್ಚುಗಾರಿಕೆಯೆಂದೇನು ನಾನು ಭಾವಿಸಿಲ್ಲ. ಸಮುದಾಯಗಳ ಅಧ್ಯಯನಗಳು ಆಯಾ ಸಮುದಾಯಗಳ ಕಷ್ಟಸುಖಗಳ ಒಂದು ಭಾಗವಾಗಿ ರೂಪಗೊಳ್ಳಬೇಕೆಂಬ ಶೈಕ್ಷಣಿಕೇತರ ಆಶಯ ಇಲ್ಲಿ ಕೆಲಸಮಾಡಿದೆ.

ಸಂಸ್ಕೃತಿ ಅಧ್ಯಯನ ಮತ್ತು ಸಮುದಾಯಗಳ ಅಧ್ಯಯನಗಳು ಕೇವಲ ಶೈಕ್ಷಣಿಕ ಅಗತ್ಯಗಳನ್ನು ಮಾತ್ರ ಪೂರೈಸುವ ಪ್ರಕ್ರಿಯೆಗಳಾದರೆ, ಮತ್ತೆ ಅದೇ ಕಲೋನಿಯಲ್ ಅಧ್ಯಯನ ಮಾದರಿಗಳನ್ನ ನಾವು ಅನುಕರಿಸದಂತೆಯೇ ಆಗುತ್ತದೆ. ಈ ಸಮುದಾಯಗಳ ಸಾಂಸ್ಕೃತಿಕ ವಿವರಗಳನ್ನ ಕಟ್ಟಿಕೊಡುವ,

